ಶ್ರೀ

# ಮರುಳಸಿದ್ಧಾಂತ ವಿಮರ್ಶೆ.



: ಲೇಖಕ :

...ತ ವಿಶ್ವಕುಮಾರ, ನಿದಿಗೆ

...ಕೃತ ಮತ್ತು ಹಿಂದೀ ಅಧ್ಯಾಪಕ

...ರಳಬಾಳು ಜಗದ್ಗುರು ಪ್ರೌಢಶಾಲೆ,

ಸಿರಿಗೆರೆ.

# ಶ್ರೀ ಮರುಳಸಿದ್ಧಾಂಕ ವಿಮರ್ಶೆ.




ಲೇಖಕ :

ಪಂಡಿತ ವಿಶ್ವಕುಮಾರ, ನಿದಿಗೆ.

ಸಂಸ್ಕೃತ ಮತ್ತು ಹಿಂದೀ ಅಧ್ಯಾಪಕ,

ಶ್ರೀ ತರಳಬಾಳು ಜಗದ್ಗುರು ಪ್ರೌಢಶಾಲೆ,

ಸಿರಿಗೆರೆ.



ದಿನಾಂಕ ೮-೧೦-೧೯೪೪.

ಬೆಲೆ: ೧ ರೂಪಾಯಿ.

# ಪ್ರಸ್ತಾವನೆ.

ಶ್ರೀ ಮರುಳ ಸಿದ್ಧಾಂಕದ ಬಗ್ಗೆ ವಿಮರ್ಶೆಯನ್ನು ಬರೆಯುವುದಕ್ಕಿಂತ ಮುಂಚೆ, ಒಂದೆರಡು ಮಾತುಗಳನ್ನು ಹೇಳಬಯಸಿ ಈ ಪ್ರಕರಣವನ್ನು ಪ್ರಾರಂಭಿಸಿದ್ದೇನೆ. ಜಗತ್ತಿನಲ್ಲಿ ವಿವಿಧ ಮತಗಳ ಭಿನ್ನ ಭಿನ್ನ ಆಚಾರ್ಯರು ಅನೇಕರು ಅವತರಿಸಿದ್ದಾರೆ. ಇತಿಹಾಸಜ್ಞರು ಅವರ ಜೀವನ ಚರಿತ್ರೆ ಮತ್ತು ಜೀವಿತ ಕಾಲಗಳನ್ನು ಸಂಶೋಧನೆಗಳಿಂದ ಸಮಂಜಸವಾಗಿ ನಿರ್ಣಯಿಸಿದ್ದಾರೆ. ಆದರೆ ವೀರಶೈವ ಮತವನ್ನು ಸ್ಥಾಪಿಸಿದ ಆಚಾರ್ಯರ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಇವರ ಚರಿತ್ರೆ ಮತ್ತು ಕಾಲಮಾನಗಳ ಬಗ್ಗೆ ನಿಶ್ಚಿತರೂಪಕ್ಕೆ ಈವರೆಗೂ ಬಂದಿಲ್ಲ ಬಸವೇಶ್ವರಾದಿ ಶಿವ ಶರಣರ ಬಗ್ಗೆ ಖಚಿತ ನಿರ್ಣಯವಾಗಿದ್ದರೂ ರೇವಣ ಸಿದ್ಧಾದಿ ಪಂಚ ಆಚಾರ್ಯರು ಈ ಮತವನ್ನು ಸ್ಥಾಪಿಸಿದರೆಂದು ಹೇಳುವ ಪಕ್ಷದವರು ಇವರ ಬಗ್ಗೆ ಅದ್ಭುತ ಹಾಗೂ ಅಸಂಬದ್ಧ ಕಲ್ಪನೆಗಳನ್ನು ನಂಬಿಕೊಂಡು ಬಂದಿರುತ್ತಾರೆ. ಇಂತಹ ಕಲ್ಪನೆಗಳು ಜಗತ್ತಿನ ಮತ್ತಾವ ಮತಾಚಾರ್ಯರ ಬಗ್ಗೆಯೂ ಹುಟ್ಟಿಲ್ಲ. ಈ ಅದ್ಭುತ ಕಲ್ಪನೆಗಳಲ್ಲಿ ಲಿಂಗೋದ್ಭವ ಲೀಲೆಯೂ ಒಂದು. ಇದು ಈ ಐದು ಜನರಿಗೆ ಮಾತ್ರ ನಿಯಮಿತವಾಗಿಲ್ಲ. ಈ ಪಕ್ಷದವರಿಗೆ ಸೂಕ್ತ ಕಂಡಾಗ ಇತರರಿಗೂ ಈ ಲೀಲೆಯ ಸಂಬಂಧವನ್ನು ಕಲ್ಪಿಸುತ್ತಾರೆಂಬುದಕ್ಕೆ ವಿಜಯ ಕಾವ್ಯದಲ್ಲಿರುವ ನೀಲಕಂಠ ಶಿವಾಚಾರ್ಯರ ಪ್ರಸಂಗವೇ ನಿದರ್ಶನವಾಗಿದೆ. ಸ್ವತಃ ನೀಲಕಂಠರು ರಚಿಸಿರುವ ಕ್ರಿಯಾಸಾರ ಗ್ರಂಥದಲ್ಲಿ ತಮ್ಮ ತಾಯಿ ತಂದೆಗಳು ಚೆನ್ನಮಾಂಬೆ, ಮಲ್ಲಯ ದೇವರೆಂದು ಅವರೇ ಸ್ಪಷ್ಟವಾಗಿ ಹೇಳಿದ್ದರೂ ಸಹ ಗೋಕರ್ಣ ಲಿಂಗದಿಂದ ಉದ್ಭವಿಸಿದರೆಂದು ಈ ಕಾವ್ಯದಲ್ಲಿ ವಿವರಿಸಲಾಗಿದೆ. ಇಂತಹ ಕಲ್ಪನೆಗೆ ಹರಿಹರನ ರೇವಣಸಿದ್ಧರಗಳೆಯು ಸಹಾಯಕವಾಗಿದೆ. ಈ ಕಲ್ಪನೆಗಳಿಗೆ ಜನತೆಯು ಮನ್ನಣೆಯನ್ನು ಕೊಡ

ಲಾರದೆಂಬುದು ಸ್ಪಷ್ಟವಾಗಿದ್ದರೂ ಈಗಲೂ ಅಂದು ನಿರರ್ಗಳವಾಗಿ ಮುಂದೆ ಸಾಗುತ್ತಿರುವುದಂಲ್ಲಿ ನಿಗೂಢ ರಹಸ್ಯವಿಲ್ಲದೇ ಇಲ್ಲ.

ಒಂದೊಂದು ಮತಕ್ಕೆ ಒಬ್ಬೊಬ್ಬ ಆಚಾರ್ಯರು ಸಾಕಾಗಿರುವಾಗ ನಮ್ಮವರು ಏಕ ಕಾಲದಲ್ಲಿ ಐದು ಜನ ಆಚಾರ್ಯರನ್ನು ಸಂಪಾದಿಸಿದ್ದಾರೆ. ಇವರಿಗಿಂತಲೂ ಹೆಚ್ಚಾಗಿಯೇ ಮತಸ್ಥಾಪನೆ ವಿಚಾರದಲ್ಲಿ ಶಿವಶರಣರಿಗೆ ಬಾಧ್ಯತೆ ಇದ್ದೆ ಇರುತ್ತದೆ. ಜನ್ಮಮೂಲಕ್ಕೆ ತಂದೆ-ತಾಯಿಗಳು ಮುಖ್ಯರಾಗಿರುವುದು ಪ್ರಕೃತಿ ಧರ್ಮವಾದರೂ ನಮ್ಮ ಆಚಾರ್ಯರಿಗೆ ತಂದೆ ತಾಯಿಗಳ ಸಂಬಂಧವನ್ನು ನಮ್ಮವರು ಬಯಸಿಲ್ಲ. ಇವರ ಬಗ್ಗೆ ಕಂಡು ಬರುವ ಕಲ್ಪನೆಗಳು ಒಂದೇ ವಿಧವಾಗಿಯಾದರೂ ಇದ್ದರೆ ಅವುಗಳಲ್ಲಿ ಮೂಢನಂಬಿಕೆಯನ್ನಾದರೂ ಇಡಬಹುದಾಗಿತ್ತು. ಇವರ ವ್ಯಾಪ್ತಿ ಹಿಂದಿನ ಮತ್ತು ಮುಂದಿನ ಚತುರ್ಯುಗಗಳಿಗೂ ಆವರಿಸಿ ಕೊಂಡಿದೆ. ಇದಾದರೂ ಕೆಲವು ಅಸ್ಪಷ್ಟವಾದ ಗ್ರಂಥಗಳಲ್ಲಿ ಮಾತ್ರ. ಆ ಗ್ರಂಥಗಳಾದರೂ ಯಾರಾದರೊಬ್ಬ ನಿರ್ದಿಷ್ಟ ವ್ಯಕ್ತಿಗಳಿಂದ ಬರೆಯಲ್ಪಟ್ಟವಲ್ಲ. ಶಿವನು ಪಾರ್ವತಿಗೆ ಹೇಳಿದ ಆಗಮಗಳೇ ಆ ಗ್ರಂಥಗಳು. ಈ ಆಗಮಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿರುವ ಕೆಲವು ಗ್ರಂಥಗಳು ಇವೆ. ತಂದೆ ತಾಯಿಗಳುಳ್ಳ ಕಥೆಗಳನ್ನೇ ವಿಚಾರ ವಿಮರ್ಶೆಗಳಿಲ್ಲದೆ ನಂಬಲು ಸಾಧ್ಯವಿಲ್ಲದ ಈ ಜಾಗೃತ ಯುಗದಲ್ಲಿ ನಮ್ಮವರು ಈ ತಬ್ಬಲಿ ಕಥೆಗಳನ್ನು ಜನತೆಯ ಮೇಲೆ ಹೇರಲು ತಮ್ಮ ಬುದ್ಧಿ, ಶಕ್ತಿ, ಸಾಹಸಗಳನ್ನೆಲ್ಲಾ ದುರುಪಯೋಗಪಡಿಸಿಕೊಳ್ಳುತ್ತಿರುವುದು ವಿಷಾದಕರವಾಗಿದೆ.

ಈ ಪಂಚಾಚಾರ್ಯರಲ್ಲಿ ಒಬ್ಬನಾದ ಮರುಳಸಿದ್ದನು ಮಾದಿಗರವನೆಂದು ದೇವಕವಿಯು ಹೇಳಿರುವುದನ್ನು ಖಂಡಿಸಲು ಇವನ ಬಗ್ಗೆ ಈವರೆಗೆ ಇದ್ದ ತಬ್ಬಲಿ ಕಥೆಗಳೊಂದಿಗೆ ಮತ್ತಷ್ಟು ತಬ್ಬಲಿ ಕಥೆಗಳನ್ನು ಕಟ್ಟಿ ವಿಜಯ ಕಾವ್ಯವನ್ನು ನಿರ್ಮಿಸಿದ್ದಾರೆ. ಅವನು ಮಾದಿಗನಾಗಲಿ ಮತ್ತಾವನೇ ಆಗಲಿ ಸಕ್ರಮ ಮಾರ್ಗಗಳಿಂದ ನಿರ್ಣಯಗೊಳಿಸುವುದು ಉಚಿತವಾಗಿತ್ತು. ಇವರು ಮರುಳಸಿದ್ಧನ ಮಾದಿಗತನವನ್ನು ತಪ್ಪಿಸಲು ಉಜ್ಜಯಿನೀ ಪೀಠದಲ್ಲಿ ಅನೇಕ ಮರುಳಸಿದ್ಧರನ್ನು ಕಲ್ಪಿಸಿ ಅದಕ್ಕೆ ಆಧಾರವಾಗಿರಲು ಈ ವಿಜಯಕಾವ್ಯವನ್ನು

ಸಿದ್ಧಪಡಿಸಿದ್ದಾರೆ. ಈ ವಿಜಯ ಕಾವ್ಯದ ಪ್ರಾಮಾಣ್ಯದ ಬಗ್ಗೆ ವಾಚಕರಿಗೆ ನನ್ನ ವಿಮರ್ಶೆಯು ಸಾಕಷ್ಟು ಬೆಳಕನ್ನು ಉಂಟುಮಾಡುತ್ತದೆಂದು ನನ್ನ ನಂಬಿಕೆ ಮತ್ತು ಶ್ರೀ ಮುರುಳ ಸಿದ್ಧಾಂಕದ ಲೇಖನಗಳು ಸಹ ಸಾಕಷ್ಟು ಬೆಳಕನ್ನು ಚೆಲ್ಲಿವೆ. ನನ್ನ ವಿಮರ್ಶೆಯೊಂದಿಗೆ ಇವೆಲ್ಲವನ್ನು ಓದುವ ವಿಚಾರ ಪರರಿಗೆ ಮುರುಳಸಿದ್ಧನು ಜನ್ಮತಃ ಯಾರಿರಬೇಕೆಂಬುದು ಸುಸ್ಪಷ್ಟವಾಗುವು ದರಲ್ಲಿ ಸಂದೇಹವಿಲ್ಲ. ಮುರುಳಸಿದ್ಧನು ಯಾವ ಜಾತಿಯವನೇ ಆಗಿರಲಿ, ಇವರ ಈ ಪ್ರಯತ್ನಗಳಿಂದ ಆಸನು ಮಾದಿಗನೆಂಬುದು ದೃಢಪಟ್ಟಂತಾಗಿದೆ ಯೆಂಬುದು ವಾಚಕರಿಗೆ ಮನವರಿಕೆಯಾಗದಿರದು.

ಇವರು ಆಧಾರವೆಂದು ತೋರಿಸುತ್ತಿರುವ ವಿಜಯ ಕಾವ್ಯದ ಒಂದೊಂದು ವಿಷಯವೂ ತಮ್ಮ ನಿರ್ದಿಷ್ಟ ಉದ್ದೇಶವನ್ನು ಸಮರ್ಥಿಸಲು ಅಸಮರ್ಥ ವಾಗಿ ದೇವಕವಿಯ ಕಾವ್ಯವನ್ನು ಬಲಪಡಿಸುತ್ತಿದೆ. ಮೊದಲನೆಯದಾಗಿ ಕ್ರಿ.ಶ. ೧೬೫೦ರಲ್ಲಿದ್ದ ಸಿದ್ಧನಂಜೇಶ್ವರ, ನಂದೀಶ ಇವರನ್ನು ಹನ್ನೊಂದನೆ ಶತಮಾನಕ್ಕೆ ಕರಿದೊಯ್ದು ಅವರಿಂದ ಹದಿನೆಂಟನೆ ಶತಮಾನದವರೆಗಿನ ಚರಿತ್ರೆಯನ್ನು ಹೇಳಿಬರೆಯಿಸುವುದು, ಗುರುರಾಜ ಚಾರಿತ್ರಕರ್ತ ಸಿದ್ಧ ನಂ ಜೇಶನು ಚೆನ್ನವೀರಾಂಬೆಯ ಪತಿ ಸಿದ್ಧ ನಂಜೇಶನಿಗೆ ಭಿನ್ನನೆಂಬುದರ ಪರಿ ಜ್ಞಾನವಿಲ್ಲದಿರುವುದು, ಗುರುಸಿದ್ಧ ನಂಜೇಶನ ಹೆಂಡತಿ ಚೆನ್ನವೀರಾಂಬೆ ಯನ್ನು ಶಿಷ್ಯ ಸಿದ್ಧ ನಂಜೇಶನಿಗೆ ಹೊಂದಿಸಿರುವುದು, ಗುರುರಾಜ ಚಾರಿತ ದಲ್ಲಿಯ ವಿಶ್ವೇಶ್ವರಾಚಾರ್ಯನ ಶಿಷ್ಯ ಸಿದ್ಧಮಲ್ಲಯೋಗಿಯು ಸಿದ್ಧ ನಂಜೇಶ ನಿಗಿಂತ ಪೂರ್ವದವನಾಗಿದ್ದರೂ ಅವನನ್ನು ಸಿದ್ಧನಂಜೇಶನ ಗುರುಕುಲದ ಅಂತೇವಾಸಿಯೆಂದು ಕಲ್ಪಿಸಿರುವುದು, ಶಕ್ತಿವಿಶಿಷ್ಟಾದ್ವೈತ ಪ್ರತಿಪಾದಕರಾದ ನೀಲಕಂಠರಿಗೆ ಗೋವಿಂದ ಪಂಡಿತರ ಶಿಷ್ಯತ್ವವನ್ನು ಕಲ್ಪಿಸುವ ಭರದಲ್ಲಿ ತಮ್ಮ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ವಿಕ್ರಯಿಸಿಕೊಂಡು ಅವರಿಂದ ಜಗತ್ತಿಗೆ ಅದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿಸುವುದು, ಶಂಕರಾಚಾರ್ಯರಿಗೆ ರೇವಣ ಸಿದ್ಧರ ಶಿಷ್ಯತ್ವವನ್ನು ಸಾಧಿಸಲು ಲಿಂಗಧಾರ ಣೆಯ ನಿಷ್ಠೆಗೆ ಭಂಗವನ್ನುಂಟು ಮಾಡಿಕೊಂಡು ಸ್ವಸಿದ್ಧಾಂತಕ್ಕೆ ವಿರೋಧ ವಾಗಿ ಶಂಕರರಿಗೆ ಇಷ್ಟ ಲಿಂಗದ ಬದಲು ಸ್ಥಾವರ ಲಿಂಗವನ್ನು ಕೊಟ್ಟರು

ವ್ವದು, ಕೊಟ್ಟೂರು ಉಜ್ಜಯಿನಿಯು ತಮ್ಮದೆಂಬುದನ್ನು ಸಾಧಿಸಲು ತನ್ನ
ಗಾಗಿ ಮಾಳವೋಜ್ಜಯನಿಯನ್ನು ಕಲ್ಪಿಸಿಕೊಂಡು ಅಲ್ಲಿ ಹದಿನಾರು ಜನ
ಗುರುಗಳನ್ನು ಕಲ್ಪಿಸಿ ಹದಿನಾರನೆಯ ಮರುಳಸಿದ್ಧನಿಂದ ಈ ಉಜ್ಜಯಿನಿಯಲ್ಲಿ
ಮರುಳಾರಾಧ್ಯಲಿಂಗ ಮತ್ತು ಹದಿನಾಲ್ಕು ಜನ ಗುರುಗಳ ವಿಗ್ರಹಗಳನ್ನು
ಸ್ಥಾಪನೆಮಾಡಿಸುವುದು, ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಂ. ವಿ. ಮಠದ
ಇವರು ಬರೆದಿರುವ ಕ್ಷೇತ್ರದ ಸಂಕ್ಷೇಪ ಪರಿಚಯದಲ್ಲಿ ಆ ಮರುಳಾರಾಧ್ಯ
ಲಿಂಗದ ಮತ್ತು ಹದಿನಾಲ್ಕು ಜನ ಗುರುಗಳ ವಿಗ್ರಹಗಳ ಪರಿಚಯವನ್ನು
ಕೊಡದಿರುವುದು, ಈ ದಿನವೂ ಸಹ ಉಜ್ಜಯಿನಿ ದೇವಸ್ಥಾನದಲ್ಲಿರುವ ಆ
ಹದಿನಾಲ್ಕು ವಿಗ್ರಹಗಳಿಗೆ ಅನುಕ್ರಮವಾಗಿ ಪಾಪ ವಿಮೋಚನ, ಭಕ್ತಿ
ಭೂಷಣ, ಗೋಪಾಲಸ್ವಾಮಿ, ರೇವಣಸಿದ್ಧ, ಚಕ್ರಪಾಣಾಚಾರಿ, ಏಕೋರಾಮ,
ಪಂಡಿತಾರಾಧ್ಯ, ವಿನಾಯಕ, ವಿಶ್ವಾರಾಧ್ಯ, ಮಳೆಯ ಮಲ್ಲಿಕಾರ್ಜುನ, ಶಿವಾ
ನಂದರಾಜ, ವೀರಭದ್ರ, ಸುಜ್ಞಾನೇಶ್ವರ, ಮತ್ತು ಮುಕ್ತಿನಾಥ ಎಂಬ ಈ
ಹೆಸರುಗಳನ್ನು ಸೂಚಿಸುವ ಹಲಗೆಗಳು ಈ ವಿಗ್ರಹಗಳ ಮೇಲೆ ನೇತಾಡು
ತ್ತಿರುವುದು, ಮರುಳಾರಾಧ್ಯ ಲಿಂಗವಿರಬೇಕೆಂದು ಹೇಳುವವರೇ ಈ ಅಂಕ
ದಲ್ಲಿ ಅದರ ಬದಲು ಮರುಳಸಿದ್ಧೇಶ್ವರ ಲಿಂಗದ ಚಿತ್ರವನ್ನು ಕೊಟ್ಟಿರುವುದು,
ಸೋಮೇಶ್ವರನ ವಿಗ್ರಹವಿದೆಯೆಂದು ಹೇಳಿ ಅದನ್ನು ಸಂಕ್ಷೇಪ ಪರಿಚಯದಲ್ಲಿ
ಹೇಳದಿರುವುದು, ಸಂಕ್ಷೇಪ ಪರಿಚಯದಲ್ಲಿ ಹೇಳಿರುವ ಕ್ಷೇತ್ರಪಾಲ ಭೈರವ
ನನ್ನು ಸೋಮೇಶ್ವರನೆಂದು ಚಿತ್ರದಲ್ಲಿ ಹೇಳಿರುವುದು, ಕ್ರಿ. ಶ. ೧೧೧೩ ರಲ್ಲಿ
ಕಾಲವಾದನೆಂದು ಸುಸ್ಪಷ್ಟವಾಗಿ ಹೇಳಿರುವ ಶಾಸನವನ್ನು ಕಣ್ಣೆತ್ತಿ ನೋ
ಡದೆ ಹೂಲೀ ಮರುಳಸಿದ್ಧನು ೧೧ ನೇ ಶತಮಾನದಲ್ಲಿ ಹುಟ್ಟಿದನೆಂದು ಕಲ್ಪಿಸಿ
ಕೊಂಡಿರುವುದು, ಹೊಂದದ ಸಂದರ್ಭದಲ್ಲಿ ಕಾಲವನ್ನು ಸರಿಗೂಡಿಸಲು
ಯೋಗ ನಿದ್ರೆಗಳನ್ನು ಕಲ್ಪಿಸಿರುವುದು, ಪ್ರಸಿದ್ಧ ಕವಿ ಬ್ರಾಹ್ಮಣ ಭವಭೂತಿ
ಯನ್ನು ತಮ್ಮ ಪೀಠಾಧಿಪತಿಯನ್ನಾಗಿ ಕಲ್ಪಿಸಿರುವುದು, ಬುದ್ಧಾವತಾರ
ಮಾಡಿ ಬೌದ್ಧಮತವನ್ನು ಬೆಳಸಬೇಕಾಗಿರುವಾಗ ವೈಷ್ಣವ ಮತೋದ್ಧಾರ
ಕ್ಕಾಗಿ ಬುದ್ಧಾವತಾರ ತಾಳು ಎಂದು ಶಿವನಿಂದ ಹೇಳಿಸಿರುವುದು, ದೈವ
ಪ್ರತೀಕವಾದ ಎಲ್ಲಾ ಲಿಂಗಗಳೂ, ವಿಗ್ರಹಗಳೂ, ಇಷ್ಟಾರ್ಥ ಸಿದ್ಧಿಯನ್ನು
ಕೊಡುತ್ತಿರುವಾಗ ಅವೆಲ್ಲವಕ್ಕೂ ಸಿದ್ಧೇಶ್ವರ ಎಂದು ಹೆಸರು ಬರೆದ ಮಹಾ

ಕಾಲಲಿಂಗಕ್ಕೆ ಮಾತ್ರ ಬಂದಿತೆಂದು ಹೇಳಿರುವುದು, ಜಾಗ್ರದವಸ್ಥೆಯಲ್ಲಿ ವ್ಯಾಸನ ಸೂತ್ರಗಳಿಗೆ ಭಾಷ್ಯವನ್ನು ಬರೆಯಲಸಮರ್ಥನಾದ ಮರುಳಾರಾಧ್ಯ ನಿಂದ ಹುತ್ತದಲ್ಲಿ, ನಿದ್ರಾವಸ್ಥೆಯಲ್ಲಿ, ಶಿಲೆಯಲ್ಲಿ ಕೆತ್ತಿದ ಸೂತ್ರಗಳಿಗೆ ಭಾಷ್ಯವನ್ನು ಬರೆಸುವುದು, ಇತ್ಯಾದಿ ಇತ್ಯಾದಿ ನೂರಾರು ಯುಕ್ತಿಬದ್ಧವಲ್ಲದ, ಇತಿಹಾಸಾಸಂಗತವಾದ, ವೀರಶೈವ ಸಿದ್ಧಾಂತ ವಿರೋಧವಾದ, ಪ್ರಕೃತಿ ವಿರೋಧವಾದ, ಹಾಗೂ ಅಪ್ರಮಾಣ್ಯದ ವಿಷಯಗಳಿಂದ ತುಂಬಿರುವ ಈ ಮರುಳಸಿದ್ಧಾಂಕ ಮತ್ತು ವಿಜಯಕಾವ್ಯಗಳು ಹೇಳುವ ಮರುಳಸಿದ್ಧ ಮಾದಿ ಗರವನಲ್ಲ, ಉಜ್ಜಯಿನಿ ಪೀಠದಲ್ಲಿ ಮರುಳಸಿದ್ಧರನೇಕರು ಎಂಬಿತ್ಯಾದಿ ವಿಷಯಗಳು ಎಷ್ಟರಮಟ್ಟಿನ ಪ್ರಾಮಾಣ್ಯವುಳ್ಳವುಗಳೆಂಬುದನ್ನು ವಾಚಕರು ಸುಲಭವಾಗಿ ನಿರ್ಧರಿಸಬಹುದು.

ಈ ವಿಷಯಗಳೇನೇ ಆಗಲಿ ಈ ವಿಜಯ ಕಾವ್ಯದಲ್ಲಿ ಇನ್ನೊಂದು ಅವಮಾನಕರವಾದ, ಆಭಾಸವಾದ, ಮತ್ತು ಅಸಹ್ಯವಾದ ವಿಷಯವೊಂದು ಹೇಳಲ್ಪಟ್ಟಿದೆ. ಅದೇನೆಂದರೆ:- ಬಸವೇಶ್ವರಾದಿಗಳು ಸ್ವತಃ ವಚನ ಗಳನ್ನು ರಚಿಸಲಿಲ್ಲವೆಂದು, ಸಿದ್ಧಮಲ್ಲಯೋಗಿಯು ಬಸವಾದಿಗಳ ಹೆಸರಿನ ಮೇಲೆ ಇತರರಿಂದ ರಚಿಸಲು ವ್ಯವಸ್ಥೆ ಮಾಡಿದನೆಂದೂ ಹೇಳಲಾಗಿದೆ. ಇದರ ಬಗ್ಗೆ ಶ್ರೀ ಶೈಲದ ಸ್ವಾಮಿಗಳವರು ಮತ್ತು ಶ್ರೀ ಬಸವನಾಳರು ತಮ್ಮ ಸಮ್ಮತಿಯನ್ನು ಸೂಚಿಸಿರುವುದರಿಂದ ಗುರು ವಿರಕ್ತವಾದದ ಪರಿಸಮಾಪ್ತಿ ಗೋಸ್ಕರ ಇವರೀರ್ವರು ಮಾಡಿಕೊಂಡಿರುವ ಒಡಂಬಡಿಕೆಯ ಫಲವಾಗಿ ಈ ಕಲ್ಪನೆಯು ಉದಯಿಸಿದೆಯೆಂದು ಭಾವಿಸಲು ಅಭ್ಯಂತರವಿಲ್ಲವಾಗಿದೆ. ವೀರ ಶೈವ ಸಾಹಿತ್ಯವೆಂದರೆ ಶರಣ ಸಾಹಿತ್ಯವೇ. ಈ ಶರಣ ಸಾಹಿತ್ಯವು ವಿಶ್ವ ಸಾಹಿತ್ಯವೆಂದೂ, ವೀರಶೈವ ಧರ್ಮವು ವಿಶ್ವಧರ್ಮವೆಂದೂ, ಪರಮತೀಯ ಪಂಡಿತರುಗಳು ನಿರ್ಮತ್ಸರಭಾವದಿಂದ ಮುಕ್ತಕಂಠವಾಗಿ ಶ್ಲಾಘಿಸುತ್ತಿರು ವಾಗ ನಮ್ಮವರು ಈ ರೀತಿ ಈ ಸಾಹಿತ್ಯದ ಬಗ್ಗೆ ಅಪಕಲ್ಪನೆಗಳನ್ನು ಕಟ್ಟಿ ಇವನ್ನು ಕೊಲೆ ಮಾಡಿ ತಾವು ಯಾವ ಹಿತವನ್ನು ಸಾಧಿಸುವರೋ ತಿಳಿಯ ದಾಗಿದೆ ಅಥವಾ ಇವರೀರ್ವರ ಈ ಒಡಂಬಡಿಕೆಯ ಫಲವಾಗಿ ಈ ನಮ್ಮ ಸಾಹಿತ್ಯವು ತುಳಿಯಲ್ಪಟ್ಟಲ್ಲಿಯೇ ಇವರೀರ್ವರ ನಿಗೂಢ ಹಿತವಿದ್ದರೂ ಇರ

ಬಹುದು. ಏಕೆಂದರೆ ಉದ್ದೇಶವಿಲ್ಲದೆ ಯಾವ ಕಾರ್ಯವೂ ಆಗಲಾರದು. ಈ ಪವಿತ್ರ ಶರಣ ಸಾಹಿತ್ಯವನ್ನು ಕೊಲೆ ಮಾಡಲು ಹೊರಟಿರುವ ಇವರೀರ್ವರ ಈ ಒಡಂಬಡಿಕೆಯಿಂದ ಉದಯಿಸುವ ನವಯುಗವನ್ನು ಜಗತ್ತು ಯಾವ ರೀತಿಯಲ್ಲಿ ಸ್ವಾಗತಿಸುತ್ತದೆಂಬುದನ್ನು ಕಾದು ನೋಡಬೇಕಾಗಿದೆ.

ಇವರೀರ್ವರ ಈ ಒಡಂಬಡಿಕೆಯಿಂದ ಅಖಂಡ ಸಮಾಜದ ಕಲ್ಯಾಣವಿದೆಯಾದರೆ ಯಾರೂ ಚಿಂತಿಸಬೇಕಾಗಿರಲಿಲ್ಲ ಇಂದು ಶರಣ ಸಾಹಿತ್ಯವನ್ನು ಪ್ರೇಮಿಸಲು ಮುಂದೆ ಬಂದಿರುವ ಈ ವರ್ಗವು ಈವರೆಗೆ ಭೂವ್ಯಾಕಾಶಗಳನ್ನು ಒಂದು ಮಾಡಿ ಏಕೆ ನಿಂದಿಸುತ್ತಿತ್ತೆಂಬುದನ್ನು ಗಮನಿಸಿದರೆ ಇವರ ಗುಟ್ಟೇನೆಂಬುದು ತಿಳಿಯದಿರಲಾರದು. ನಮ್ಮ ಧರ್ಮಕ್ಕೆ, ನಮ್ಮ ಸಾಹಿತ್ಯಕ್ಕೆ ವಿರೋಧವಾದ ಸ್ವಪಂಗಡದ ಭದ್ರತೆಯನ್ನು ಮಾಡಿಕೊಂಡು ಇತರ ಪಂಗಡಗಳ ಮೇಲೆ ಅವಾಸ್ತವ ಹಾಗೂ ಅನಿಷ್ಟವಾದ ತಮ್ಮ ಪ್ರಭುತ್ವವನ್ನು ನಡೆಸಬೇಕೆಂದೂ ಮತ್ತು ಅದಕ್ಕಾಗಿ ಉಭಯತರೂ ಈ ಶರಣ ಸಾಹಿತ್ಯದ ಆಧಾರಕರಾಗಿ ಇತರ ಪಂಗಡಗಳನ್ನು ಮರುಳುಗೊಳಿಸಿ ವಂಚಿಸಬೇಕೆಂದು ಸಂಚು ಮಾಡಿದ್ದಾರೆಂದು ನಿರ್ವಂಚನೆಯಿಂದ ಹೇಳಬಹುದಾಗಿದೆ. ಶರಣ ಧರ್ಮದಲ್ಲಿ ಜನ್ಮತಃ ಜಂಗಮತ್ವ, ಗುರುತ್ವಗಳನ್ನು ಎಲ್ಲಿಯೂ ಹೇಳಿಲ್ಲವಾದರೂ ಇಂದು ಜಂಗಮರೂ, ಗುರುಗಳೂ ಎಂದು ಹೇಳಿಕೊಳ್ಳುವ ಈ ವರ್ಗವು ತೋಂಟದ ಸಿದ್ಧಲಿಂಗನ ಕಾಲದಲ್ಲಿದ್ದ ನಮ್ಮ ಸಮಾಜದ ಅಸ್ತವ್ಯಸ್ತ ಪರಿಸ್ಥಿತಿಯನ್ನು ತಮ್ಮ ಸ್ವಾರ್ಥಕ್ಕೆ ದುರುಪಯೋಗಪಡಿಸಿಕೊಂಡರು ತೋಂಟದ ಸಿದ್ಧಲಿಂಗ ಮತ್ತು ಅವನ ಅನುಯಾಯಿಗಳು ಒಂದೇ ಪಂಗಡದವರಿದ್ದು ಈ ಜನ್ಮತಃ ಗುರುತ್ವ, ಜಂಗಮತ್ವಗಳನ್ನು ನಿರ್ಮಿಸಿಕೊಂಡು ಇದರ ಭದ್ರತೆಗೆ ವಚನ ಸಾಹಿತ್ಯವನ್ನು ಉಪಯೋಗಿಸಿಕೊಂಡರು. ಅಂದಿನಿಂದ ಬೆಳೆದ ಬಂದಿರುವ ಈ ವಿಶಿಷ್ಟ ಪಂಗಡದ ಗುರುತ್ವ, ಜಂಗಮತ್ವಗಳೇ ವೀರಶೈವರ ಅನೈಕ್ಯಕ್ಕೆ ಕಾರಣವಾಗಿದೆ. ಇವರಾದರೋ ನುಡಿಯೊಂದು ಪರಿ, ನಡೆಯೊಂದು ಪರಿಯಾಗಿ ಈವರೆಗೇನೋ ತಮ್ಮ ಪ್ರಭುತ್ವವನ್ನು ನಡೆಸಿಕೊಂಡು ಬಂದರು. ಮುಂದೆ ಸಹ ಹೀಗೆಯೇ ನಡೆಸಬೇಕೆಂಬುದು ಇವರ ಈ ಒಡಂಬಡಿಕೆಯ ಉದ್ದೇಶವೆಂದು ತೋರುತ್ತದೆ. ಇದರಿಂದ ಸಮಾಜಕ್ಕೆ ಹಿತವಾದಲ್ಲಿ

ಯಾರೂ ಅಸೂಯೆ ಪಡಬೇಕಾಗಿಲ್ಲ. ಆದರೆ ಇವರ ಈ ದಬ್ಬಾಳಿಕೆಯಿಂದ ವಿಶಾಲವಾದ ಈ ಧರ್ಮವು ಸಂಕುಚಿತವಾಗುತ್ತಿದೆ ಸರ್ವತಂತ್ರ ಸ್ವತಂತ್ರ ರಾಗಿ ಇರಬೇಕಾದ ಈ ಧರ್ಮದವರು ತಮ್ಮ ತಮ್ಮೊಳಗೆ ದಾಸ್ಯಕ್ಕೆ ಗುರಿಯಾಗುತ್ತಿದ್ದಾರೆ. ಸಮಾನತೆಯೇ ತಿರುಳಾದ ಈ ಧರ್ಮವು ವಿಷಮತೆ ಯಲ್ಲಿ ಮುಳುಗಿ ಹೋಗುತ್ತಿದೆ. ಅಂದು ಶರಣರು ಕಟ್ಟಿದ ಸರ್ವ ಸಮಾನ ವಾದ ಸಮಾಜವು ಇಂದು ನಮ್ಮ ಕಣ್ಣೆದುರಿನಲ್ಲಿಲ್ಲ. ಅಂದಿನ ಶರಣರ ತತ್ವಗಳು ಇಂದೂ ನಮ್ಮ ಕೈಯಲ್ಲಿವೆಯಾದರೂ ನಾವು ಅವನ್ನು ಬಳಸುವ ರೀತಿಯಲ್ಲಿ ದೋಷವಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು.

ಆದ್ದರಿಂದ ಇನ್ನಾದರೂ ನಮ್ಮವರ ಇಂತಹ ಯತ್ನಗಳು ನಿಲ್ಲಲಿ. ಇನ್ನಾದರೂ ನಮ್ಮವರು ಈವರೆಗಿನಂತೆ ಕೃತ್ರಿಮ ಗ್ರಂಥಗಳ ಸೃಷ್ಟಿಯ ಹವ್ಯಾಸದಲ್ಲಿ ಬೀಳದಿರಲಿ. ಮತ್ತು ಈವರೆಗೆ ಲಂಕ್ಷಾಂತರ ರೂಪಾಯಿ ಗಳನ್ನು ವ್ಯಯಮಾಡಿ ನಿರ್ಮಿಸಲ್ಪಟ್ಟ ಅಂತಹ ಗ್ರಂಥಗಳನ್ನು ಅಗ್ನಿದೇವನಿಗೆ ಆಹುತಿ ಕೊಟ್ಟು ಅವಾಸ್ತವ ಪಥದಿಂದ ವಾಸ್ತವ ಪಥಕ್ಕೆ ಇಳಿಯಲಿ. ಶ್ರೀ ಶೈಲದ ಸ್ವಾಮಿಗಳವರು ನನಗೆ ಬರೆದಿರುವ ತಮ್ಮ ಪತ್ರದಲ್ಲಿ ತಿಳಿಸಿರುವಂತೆ ಆ ಕಾವ್ಯದ ಬಗ್ಗೆ ಹುಟ್ಟಿರುವ ಸಂಶಯಗಳನ್ನು ನಿವಾರಿಸಲು ಕಾವ್ಯವನ್ನು ತಿದ್ದಬೇಕೆಂಬ ಹವ್ಯಾಸವನ್ನು ನಿಲ್ಲಿಸಲಿ. ನಂದೀಶ ಕವಿಯ ಕಾವ್ಯದಲ್ಲಿಯ ವಿಷಯಗಳನ್ನು ತಿದ್ದಲು ಯೋಚಿಸಿರುವ ಶ್ರೀಗಳ ಸಾಹಸವನ್ನು ನೋಡಿದರೆ ಇವರೇ ಆ ನಂದೀಶ ಕವಿ ಇರಬೇಕೆಂದು ಭಾವಿಸಬಹುದಾಗಿದೆ. ಈ ಮೊದಲು ವಿರಕ್ತ ಪಕ್ಷದವರೂ ಸಹ ಅಲ್ಲಮನು ಶಿವನ ಶಿಖಾಚಕ್ರ (ಜುಟ್ಟು) ದಲ್ಲಿ ಹುಟ್ಟಿದನೆಂದು ವಾದಿಸುತ್ತಿದ್ದರು. ಆದರೆ ಈಗ ಈ ವಾದವು ಕಂಡು ಬರುತ್ತಿಲ್ಲ. ಅಂತೆಯೇ ಆಚಾರ್ಯ ವರ್ಗವೂ ಸಹ ಸರಿಯಾದ ದಾರಿ ಯನ್ನು ತುಳಿದರೆ ಅವರು ಉಳಿದುಕೊಳ್ಳುವುದರಲ್ಲಿ ಸಂಶಯವಿಲ್ಲ. ಆದರೆ ತಾವು ಉಳಿದುಕೊಳ್ಳುತ್ತೇವೆಂಬ ಭಾವನೆಯಿಂದ ಈ ರೀತಿ ಶರಣ ಸಾಹಿತ್ಯ ವನ್ನು ಕೊಲೆ ಮಾಡಿದರೆ ಅದರೊಂದಿಗೆ ತಾವು ಸಹ ಕೊಲೆಯಾಗುವುದರಲ್ಲಿ ಸಂಶಯವಿಲ್ಲ. ಮತ್ತು ನಮ್ಮ ಸಮಾಜವೂ ಸಹ ಕೊಲೆಯಾಗಿ ಹೇಳ ಹೆಸರಿಲ್ಲದಂತಾಗುವುದರಲ್ಲಿಯೂ ಸಂಶಯವಿಲ್ಲ, ಆದ್ದರಿಂದ ಇಂತಹ

ಅಕ್ರಮ ಪ್ರಯತ್ನಗಳನ್ನು ಇಂದಿಗೇ ನಿಲ್ಲಿಸುವುದು ಅತ್ಯಾವಶ್ಯಕವಾಗಿದೆ ಯೆಂದು ಸೂಚಿಸ ಬಯಸುತ್ತೇನೆ. ಹೀಗೆಯೇ ಮುಂದುವರಿದಲ್ಲಿ ಈವರೆಗೆ ಶರಣ ಸಾಹಿತ್ಯ ದ್ರೋಹಿಗಳಾಗಿ ತಾವೊಬ್ಬರೇ ಅನುಭವಿಸಿದ ಪ್ರತಿಭಟನೆ ಯನ್ನು ಈ ಒಡಂಬಡಿಕೆಯ ಫಲವಾಗಿ ಈರ್ವರೂ ಅನುಭವಿಸ ಬೇಕಾದೀತು.

ಸಾಹಿತ್ಯವು ಒಬ್ಬರ ಸ್ವತ್ತಲ್ಲ ಅದರಲ್ಲೂ ವೀರಶೈವ ಧರ್ಮ ಸಾಹಿತ್ಯವು ಕನ್ನಡನಾಡಿಗೆ ಹೆಮ್ಮೆಯನ್ನುಂಟು ಮಾಡಿದೆ ಈವರೆಗೆ ಅನೇಕ ಇತರ ಮತೀಯ ವಿದ್ವಾಂಸರು ಇದಕ್ಕೆ ಅನುಪಮವಾದ ಸೇವೆಯನ್ನು ಸಲ್ಲಿಸಿ ರುತ್ತಾರೆ ವೀರಶೈವರು ತಮ್ಮ ಸಾಹಿತ್ಯದಲ್ಲಿ ಅನ್ಯರ ಪ್ರವೇಶವಿರಕೂಡ ದೆಂದು ಹೇಳಲು ಬರುವಂತೆಯೇ ಇಲ್ಲ. ಅಲ್ಲದೆ ವೀರಶೈವರೇ ತಮ್ಮ ಸಾಹಿತ್ಯವನ್ನು ನಿರ್ದುಷ್ಟವಾಗಿ ಬೆಳಕಿಗೆ ತರುತ್ತಾರೆಂಬ ನಂಬಿಕೆಯೂ ಇಲ್ಲ. ಈ ಮರುಳ ಸಿದ್ಧಾಂತ ಮತ್ತು ವಿಜಯ ಕಾವ್ಯ ಇವುಗಳ ಪ್ರಕಟಣೆಯೇ ವೀರಶೈವ ಜಗದ್ಗುರುಗಳೂ, ವೀರಶೈವ ಸಾಹಿತಿಗಳೂ, ಎಷ್ಟು ಘನತರವಾಗಿ ತಮ್ಮ ಸಾಹಿತ್ಯಕ್ಕೆ ಸೇವೆಯನ್ನು ಸಲ್ಲಿಸುತ್ತಾರೆಂಬುದಕ್ಕೆ ನಿದರ್ಶನವಾಗಿದೆ. ಇಂತಹ ಸಾಹಿತ್ಯವೇ ಬೆಳೆಯುತ್ತ ಹೋದಲ್ಲಿ ವೀರಶೈವ ಸಾಹಿತ್ಯ, ಸಂಸ್ಕೃತಿಗಳ ಅಸ್ತಿತ್ವಕ್ಕೆ ತಿಲಾಂಜಲಿಯನ್ನು ಅರ್ಪಿಸಲೇ ಬೇಕಾಗುತ್ತದೆ. ಈ ಅಂಕದಲ್ಲಿರುವ ಲೇಖಕರು ಶ್ರೀ ಶೈಲದ ಸ್ವಾಮಿಗಳವರಾದಿಯಾಗಿ ಉಪಯೋಗಿಸಿರುವ ಭಾಷೆಯ ಶೈಲಿಯು ಅವರ ಸ್ಥಾನಗಳಿಗೂ, ಅವರಿಗೂ ವೀರಶೈವ ಸಾಹಿತ್ಯಕ್ಕೂ ತುಂಬಾ ಅವಮಾನಗಳನ್ನುಂಟು ಮಾಡತಕ್ಕದ್ದಾ ಗಿದೆ. ಒಟ್ಟಿನಲ್ಲಿ ಶ್ರೀ ಸ್ವಾಮಿಗಳವರು ಮತ್ತು ಇತರರು ಈ ಅಂಕದ ಮೂಲಕ ತಮ್ಮ ಪಾಂಡಿತ್ಯವನ್ನು ಆಳೆದುಕೊಂಡಿರುತ್ತಾರೆಂದು ಇತರ ಮತೀಯರು ಭಾವಿಸಿದರೆ ಅನುಚಿತವಾಗಲಾರದು.

ಕೊನೆಯದಾಗಿ ನನ್ನ ಈ ಪ್ರಸ್ತಾವನೆಯನ್ನು ಮುಗಿಸುತ್ತಾ ಶ್ರೀ ಶ್ರೀ ಗಳವರಿಗೂ ನನಗೂ ನಡೆದ ಪತ್ರ ವ್ಯವಹಾರದ ಬಗ್ಗೆ ಒಂದೆರಡು ಮಾತು ಗಳನ್ನು ಹೇಳಬಯಸುತ್ತೇನೆ ಈ ಅಂಕ ಮತ್ತು ಈ ಕಾವ್ಯದ ಬಗ್ಗೆ ನನಗೆ ತೋರಿದ ಸಂಶಯಗಳನ್ನು ನಿವಾರಿಸಿಕೊಳ್ಳಲು ಕೆಲವು ಪ್ರಶ್ನೆಗಳನ್ನು

ಅವರಿಗೆ ಕಳುಹಿಸಿದ್ದೆನು. ಅವನ್ನು ಮತ್ತು ಅವರ ಉತ್ತರವನ್ನು ಇದೇ ಪುಸ್ತಕದಲ್ಲಿ ಜೋಡಿಸಿ ಕೊಟ್ಟಿರುತ್ತೇನೆ. ಈ ರೀತಿಯ ಸಂಶಯಗಳಿಗೆಲ್ಲಾ ಮುಂದೆ ಪ್ರಕಟವಾಗಲಿರುವ ನಂದೀಶ ಕವಿಯ ಮರುಳಾರಾಧ್ಯ ವಿಜಯ ಪದ್ಯಕಾವ್ಯದಲ್ಲಿ ಪರಿಹಾರವನ್ನು ಒದಗಿಸುವುದಾಗಿ ಸೂಚಿಸಿದ್ದಾರೆ. ಅಂದರೆ ಆ ಕಾವ್ಯದಲ್ಲಿ ಅನೇಕ ವಿಷಯಗಳನ್ನು ತಿದ್ದುವರೆಂದು ಭಾವಿಸಲವಕಾಶವಾಯಿತು. ಹಾಗೆ ಮಾಡಿದರಂತೂ ಶ್ರೀಗಳವರೇ ಕಾವ್ಯ ಬರೆದ ನಂದೀಶ ಕವಿಗಳೆಂದೂ, ಆದ್ದರಿಂದಲೇ ಅದನ್ನು ತಿದ್ದುವ, ಬೆಳೆಸುವ ಅಧಿಕಾರಿಗಳನ್ನು ಪಡೆದವರಾಗಿರುತ್ತಾರೆಂದೂ ಹೇಳಬಹುದಾಗಿದೆ. ಹೀಗಾದಲ್ಲಿ ಈ ಕಾವ್ಯದ ಪ್ರಾಮಾಣ್ಯ ನಿರ್ಣಯದ ಬಗ್ಗೆ ಸಾಹಿತಿಗಳು ತಲೆಕೆಡಿಸಿಕೊಳ್ಳುವ ಪ್ರಸಂಗವೇ ತಪ್ಪಿದಂತಾಗುತ್ತದೆ. ಈ ಅಂಶ ಮತ್ತು ಈ ಕಾವ್ಯ ಪ್ರಕಟವಾದ ಮೇಲೆ ಈ ಉಜ್ಜಯಿನೀ ಪೀಠಕ್ಕೆ ಮೂರು ಗುರು ಪರಂಪರೆಗಳು ಇವೆಯೆಂದು ಸಿದ್ಧವಾದುದರಿಂದ ಈ ಬಗ್ಗೆ ನಿಶ್ಚಿತಾಭಿಪ್ರಾಯವನ್ನು ತಿಳಿಯಬಯಸಿದ್ದಕ್ಕೆ ಶ್ರೀಗಳವರು ಪರಂಪರೆಗಳು ಮೂರಾಗಲಿ, ನೂರಾಗಲಿ ನಮ್ಮ ದೃಷ್ಟಿ ಅಡೆಯಿಲ್ಲವೆಂದು ಎರಡು ಬಾರಿ ಉತ್ತರಿಸಿದರು. ಒಟ್ಟಿನಲ್ಲಿ ಶ್ರೀಗಳವರ ದೃಷ್ಟಿ ಚಲಿಸಿದತ್ತ ನಮ್ಮ ಸಮಾಜ, ನಮ್ಮ ಸಾಹಿತ್ಯ, ನಮ್ಮ ಸಂಸ್ಕೃತಿ, ಮತ್ತು ನಮ್ಮ ಧರ್ಮಗಳು ಚಲಿಸಬೇಕಾಯಿತು. ಇಂಥವರ ನೇತೃತ್ವದಲ್ಲಿ ಸಮಾಜ ನೌಕೆಯು ತೀರವನ್ನು ಮುಟ್ಟುತ್ತದೆಂದು ಹೇಳಲು ಯಾರಿಗೆ ತಾನೇ ಧೈರ್ಯ ಬರುತ್ತದೆ? ಒಟ್ಟಿನಲ್ಲಿ ಇಂತಹ ಪ್ರಸಂಗಕ್ಕೆ ನಾನು ಶ್ರೀಗಳವರನ್ನೇ ಗುರಿ ಮಾಡಲು ಬಯಸಲಾರೆನು. ವೀರಶೈವದಲ್ಲಿರುವ ಪಂಚಮ ಪಂಗಡವು ಸರ್ವ ಶ್ರೇಷ್ಠವಾದುದೆಂಬುದನ್ನು ಸಾಧಿಸಲು ಪಂಚ ಮಠವುಳ್ಳವರು ಪಂಚಮುಖ ಎಂಬರ್ಥದಲ್ಲಿ ಪಂಚ ಪೀಠಗಳನ್ನು ಕಲ್ಪಿಸಿಕೊಂಡರು. ಅವುಗಳನ್ನು ಜಗತ್ತಿನ ಮೇಲೆ ಹೊರಿಸಲು ಸಂಸ್ಕೃತ ಆಗಮಗಳ ಭಾಗಗಳನ್ನು ಸೃಷ್ಟಿಸಿದರು. ಅವುಗಳ ಆಧಾರದ ಮೇಲೆ ಅನೇಕ ಗ್ರಂಥಗಳ ನಿರ್ಮಾಣವಾಯಿತು. ಆದರೆ ಇವರ ದುದ್ದೇಶದಿಂದ ಇವರಲ್ಲಿಯೇ ಕೆಲವರು ತಾವು ಈ ರೀತಿ ಹೋಗುವುದರಿಂದ ಉಳಿಯಲಾರೆವೆಂದು ಭಾವಿಸಿ ಅದನ್ನು ಪ್ರತಿಭಟಿಸಲು ವಿರಕ್ತರ ಹೆಸರಿನ ಮೇಲೆ ಒಂದು ಪಕ್ಷವನ್ನು ಮಾಡಿಕೊಂಡರು. ಶರಣ ಸಾಹಿತ್ಯವನ್ನು ಕೈಯಲ್ಲಿ ಹಿಡಿದುಕೊಂಡು ಅವರನ್ನು ಪ್ರತಿಭಟಿಸ ಹತ್ತಿದರು. ಒಟ್ಟಿ

ನಲ್ಲಿ ಇವರಿಬ್ಬರ ಗುರಿಯೂ ಪಂಚಮರ ಶ್ರೇಷ್ಠತ್ವದ ಸ್ಥಾಪನೆಯೊಂದೇ ಆಗಿದೆ ಇವರ ಈ ಹೋರಾಟದಿಂದ ಈರ್ವರೂ ಗುರಿಯನ್ನು ಸಾಧಿಸಲಸಮರ್ಥರಾಗಿ ಈ ಸಂಗಮದಲ್ಲಿ ಕೂಡಿರುತ್ತಾರೆ. ಇವರು ಅಂದಿನ ಭರದಲ್ಲಿ ಅನೇಕ ವ್ಯಾಸೋಕ್ತ, ಪಾರ್ವತಿ ಪರಮೇಶ್ವರ ಸಂವಾದಗಳನ್ನು ಕಲ್ಪಿಸಿಕೊಂಡದ್ದೇ ಇಂದು ಈ ವಿಜಯಕಾವ್ಯ ನಿರ್ಮಾಣಕ್ಕೆ ತಳಹದಿಯಾಗಿದೆ. ಈ ರೀತಿ ಈಗಲೂ ಇವರು ಮುಸುಕಿನಲ್ಲಿ ಗುದ್ದನ್ನು ಹಾಕಬೇಕೆಂದು ಹವಣಿಸಿಕೊಂಡು ಮುಂದುವರೆಯುವರಾದರೆ ಎಚ್ಚೆತ್ತ ಈ ಜನತಾಯುಗದಲ್ಲಿ ತಮ್ಮ ಶ್ರೇಷ್ಠತ್ವದ ರಕ್ಷಣೆಯ ಮಾತಂತಿರಲಿ ತಮ್ಮ ಈವರಗೆ ಉಳಿದಿರುವ ಅಷ್ಟಿಷ್ಟು ಸ್ಥಾನಮಾನ ಗಳನ್ನು ಕಳೆದು ಕೊಳ್ಳದಿರಲೆಂದು ವಿಷಾದದಿಂದ ಸೂಚಿಸಿ ವಿರಮಿ ಸುತ್ತೇನೆ.

೮-೧೦-೪೯
ಸಿರಿಗೆರೆ.

ವಿಶ್ವಕುಮಾರ್, ಸಿದಿಗೆ.
ಅಧ್ಯಾಪಕ, ಶ್ರೀ. ತ. ಜ. ಪ್ರೌಢಶಾಲೆ.

# ಶ್ರೀ ಮರುಳಸಿದ್ಧಾಂಕ ವಿಮರ್ಶೆ.



ಶ್ರೀ ಶೈಲ ಜಗದ್ಗುರು ಶ್ರೀ ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿ ಕೃಪಾಪೋಷಿತ ಶ್ರೀ ವೀರಶೈವ ಧರ್ಮಾಲಯ ಹರಿಹರದಿಂದ "ಶ್ರೀ ಮರುಳ ಸಿದ್ಧಾಂಕ"ವೆಂಬ ಪುಸ್ತಕವು ಪ್ರಕಟವಾಗಿದೆ. ಇದರ ಸಂಪಾದಕರು, ಪಂಡಿತ, ಕವಲಿ ಚೆನ್ನಬಸವಪ್ಪ ಮತ್ತು ವೇ|| ಮಠದ ಮರಿದೇವ ಸ್ವಾಮಿಗಳು, ಇದರಲ್ಲಿ ಧಾರವಾಡದ ಶ್ರೀ ಶಿ. ಶಿ. ಬಸವನಾಳರ ಮುನ್ನುಡಿಯೂ, ಶ್ರೀ ಪಿ. ಆಯ್. ಹಿರೇಮಠರ ಅಭಿಪ್ರಾಯವೂ ಇವೆ. ಇದರಲ್ಲಿರುವ ಹಿನ್ನೆಲೆ, ಅರ್ಪಣ, ಪರಿಚಯ, ಸಂಪಾದಕೀಯ ಇವು ಸಂಪಾದಕರಿಂದ ಬರೆಯಲ್ಪಟ್ಟಿವೆ. ಶ್ರೀ ಕಾಶಿ ಶ್ರೀ ವೀರಭದ್ರಸ್ವಾಮಿಗಳವರಿಗೆ ಅರ್ಪಿತವಾಗಿದೆ. ಮತ್ತು ಇದರಲ್ಲಿ ಕೆಲವು ಲೇಖನಗಳೂ, ಸಂದೇಶ ಕವಿ ವಿರಚಿತವೆಂದು ಹೇಳಲಾಗಿರುವ ಶ್ರೀ ಮರುಳಾರಾಧ್ಯವಿಜಯಚರಿತದ ಗದ್ಯಾನುವಾದವೂ ಇವೆ. ಶ್ರೀ ಎಂ. ವಿ. ಘಟದ ಹರಿಹರ, ಶ್ರೀ ಶಿವ ಶ್ರೀಶೈಲ, ವೇ|| ಪುರಾಣಿಕಮಠದ ವಿರೂಪಾಕ್ಷ ಶಾಸ್ತ್ರಿಗಳು ಹಿರೇಹಡಗಲಿ, ಆಸ್ಥಾನ್ ವಿದ್ವಾನ್ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಪಂಡಿತರತ್ನ ಶ್ರೀ ಚೆನ್ನಬಸವ ಕವಿಗಳು, ವೇ. ಅಮರನಾಥ ಶಾಸ್ತ್ರಿಗಳು, ಕಲ್ಬುರ್ಗಿ ಶ್ರೀ ಶಾಂತವೀರಾಚಾರ್ಯರು, ಮೊರಬದ ಗಂಗಾಧರ ಶಿವಾಚಾರ್ಯರು, ಶ್ರೀ ಗುರುವರ್ಯ ಶಿವಾಚಾರ್ಯರು, ಶ್ರೀ ನೀಲಕಂಠ ಶಾಸ್ತ್ರಿಗಳು, ಶ್ರೀ ಕರಿಬಸವ ಶಾಸ್ತ್ರಿಗಳು ಶ್ರೀ ವೃಷಭಲಿಂಗ ಶಿವಾಚಾರ್ಯರು ಇವರು ಇದರಲ್ಲಿಯ ಲೇಖಕರು. ಶ್ರೀ ಅ. ನ. ಕೃ. ರವರು ಸಂಪಾದಿಸಿರುವ ದೇವಕವಿಯ ಕಾವ್ಯದ ಮರುಳಸಿದ್ಧನು ಆಚಾರ್ಯ ಮರುಳಸಿದ್ಧನಲ್ಲವೆಂಬುದನ್ನು ಸಾಧಿಸುವುದೇ ಈ ಮರುಳ ಸಿದ್ಧಾಂಕದ ಪ್ರಕಟಣೆಯ ಉದ್ದೇಶ. ಇದಕ್ಕಾಗಿಯೇ ಸಂಪಾದಕರ ಮತ್ತು

ಲೇಖಕರ ಸಾಹಸ ಇದಕ್ಕಾಗಿಯೇ ಮುನ್ನುಡಿಕಾರರ ಮತ್ತು ಅಭಿಪ್ರಾಯ ದಾತರ ಪ್ರಶಸ್ತಿ. ಶ್ರೀ ವಾಗೀಶ ಪಂಡಿತಾರಾಧ್ಯ ಸ್ವಾಮಿಗಳವರ ಐತಿಹಾಸಿಕ ವಿಶೇಷ ಪರಿಶ್ರಮವೂ ಇದಕ್ಕಾಗಿಯೇ. ಈ ನಿಮಿತ್ತವಾಗಿಯೇ ನಂದೀಶ ಕವಿಯ ಅವತಾರ. ಇದರ ಫಲವಾಗಿ ಶ್ರೀ ಮರುಳಾರಾಧ್ಯ ವಿಜಯಚರಿತದ ನಿರ್ಮಾಣವಾಗಿದೆ ದೇವನ ಕಾವ್ಯವು ಈಗ ನಾಲ್ಕು ವರ್ಷಗಳ ಹಿಂದೆ ಪ್ರಕಟವಾಗಿದೆ. ೧೯೪೭ ರಲ್ಲಿ ಸಾಹಿತ್ಯಸಮಿತಿ ಪತ್ರಿಕೆಯ ಬಸವಜಯಂತಿ - ನಾಗಪಂಚಮಿ ಸಂಚಿಕೆಯಲ್ಲಿ "ಶ್ರೀ ಮರುಳಸಿದ್ಧಾಂಕ" ಲೇಖಕರಲ್ಲಿ ನಿವೇದನೆ ಎಂಬ ತಲೆಬರಹದಲ್ಲಿ ಎಂ. ವಿ. ಮಠ ೧/೦ ಶ್ರೀ ಜ. ವಾಗೀಶಪಂಡಿತ ಆರಾಧ್ಯ ಕೃಪಾಪೋಷಿತ ವೀರಶೈವ ಧರ್ಮಾಲಯ, ಹರಿಹರದಿಂದ ವ್ಯವಸ್ಥಾಪಕರ ಹೆಸರಿನ ಒಂದು ಪ್ರಕಟಣೆ ಇತ್ತು. ಅದರಲ್ಲಿ ಈ ಕೆಳಗಿನ ವಿಷಯಗಳಿದ್ದವು.

"ವಿಶೇಷಾಂಕದಲ್ಲಿ ಬರಬೇಕಾದ ಮುಖ್ಯ ವಿಷಯಗಳು :— ೧) ಮರುಳಸಿದ್ಧರೆಷ್ಟು ಜನ? ೨) ಅವರ ಕ್ಷೇತ್ರಗಳು ೩) ವಾದಿಗ ಮರುಳಸಿದ್ಧ. ೪. ಆಚಾರ್ಯ ಮರುಳಸಿದ್ಧ. ೫. ಮರುಳಸಿದ್ಧ ಚರಿತ್ರೆ. ೬) ಮರುಳಸಿದ್ಧಕಾವ್ಯ. ೭) ಮರುಳಸಿದ್ಧ ಸಾಂಗತ್ಯ. ೮) ಮರುಳಸಿದ್ಧ ವಚನ. ೯) ಮರುಳಸಿದ್ಧರ ಬಗ್ಗೆ ಐತಿಹ್ಯಗಳು. ೧೦) ಮರುಳಸಿದ್ಧರ ಕಾಲ. ೧೧) ಮರುಳಸಿದ್ಧರ ಬಗ್ಗೆ ಶಿವಾಗಮ ಪುರಾಣ - ಭಾಷ್ಯಕಾರರ ಅಭಿಪ್ರಾಯಗಳು. ೧೨) ಬಸವಾದಿ ಶಿವಶರಣರ ಮಾಲಿಯ ಮರುಳಸಿದ್ಧ. ೧೩) ಉಜ್ಜಯಿನಿ ಕ್ಷೇತ್ರ. ೧೪) ಶರಾವತಿ ದಂಡೆಯಲ್ಲಿರುವ ಕಾಳಿಕಾ ಉಜ್ಜಯಿನಿ ೧೫) ಕೌಸಲ್ಯಾ ದೇಶದ ಉಜ್ಜಯಿನಿ ೧೬) ಮರುಳಸಿದ್ಧರ ಅಪ್ರಕಾಶಿತ ಕೃತಿಗಳು ೧೭) ಉಜ್ಜಯಿನೀ ಕ್ಷೇತ್ರವನ್ನು ಕಟ್ಟಿದ ಜಕ್ಕಣಾಚಾರ್ಯ ಯಾರು? ೧೮) ಮರುಳಸಿದ್ಧರ ಭಕ್ತ ಬಾಗಳಿಯ ಕಲಿದೇವ. ೧೯) ಮರುಳಸಿದ್ಧರ ಭಕ್ತ ಒಕ್ಕಲಿಗ ಸಿದ್ಧಪ್ಪ. ೨೦) ಗದ್ದುಗೆಯ ರಾಮಿ ತಂದೆ. ೨೧) ಮಾಯ್ಯ ಸೊನ್ನಲ ದೇವಿ. ೨೨) ಮಲ್ಲಗೌಡ ಮುಕ್ತಾಯಕ್ಕ. ೨೩) ದೇವಕವಿ ೨೪) ರಾಮಗಿರಿಯ ನಾಗಭೂಷಣ ಕವಿ. ೨೫) ಕೊಲ್ಲಾಪುರದ ಸಿದ್ಧರು. ೨೬)

ಮರುಳಸಿದ್ಧರ ಸಮಕಾಲೀನರು. ೨೭) ಕಗ್ಗಲ್ಲುಪುರ ಐತಿಹಾಸಿಕವೇ ? ೨೮) ಬಾಚಿಗೌಡ ಮಲ್ಲಮ್ಮ ೨೯) ಶ್ರೀ ಶೈಲದ ಶಿಲಾದ ಋಷಿ. ೩೦) ದಯಾಳು ಮರುಳಸಿದ್ಧ ೩೧) ಸಮತಾವಾದಿ ಸಿದ್ಧ. ಇತ್ಯಾದಿ ಇತ್ಯಾದಿ ಈ ವಿಷಯಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಂಡು ಬರೆದು ಕೆಳಗಿನ ವಿಳಾಸಕ್ಕೆ ಕಳಿಸಬೇಕಾಗಿ ಬಿನ್ನಹ

( ಶ್ರೀ ಮರುಳಸಿದ್ಧಾಂಕದಲ್ಲಿ ಈ ಪ್ರಕಟಣೆಯ ಬಗ್ಗೆ ಯಾವ ಉಲ್ಲೇಖವೂ ಇಲ್ಲ. ಇವರ ನಿರೀಕ್ಷೆಯಂತೆ ಲೇಖನಗಳು ಬಾರದ್ದರಿಂದ ವ್ಯವಸ್ಥಾಪಕರು ನಿರಾಶರಾಗಿ ಉದ್ದೇಶದಲ್ಲಿ ಪರಿವರ್ತನೆ ಮಾಡಿಕೊಂಡಂತೆ ತೋರುತ್ತದೆ.)

ಪುನಃ ದಿನಾಂಕ ೨೪—೨—೭೮ ರಲ್ಲಿ ಹರಿಹರದ ವೀರಶೈವ ಧರ್ಮಾಲಯದಿಂದ ಒಂದು ಪ್ರಕಟಣೆ ಹೊರಟಿತು ಅದರ ಸಾರಾಂಶ:- "ಶ್ರೀ ಮರುಳಸಿದ್ಧಾಂಕ ಅಚ್ಚಿಗೆ ಪ್ರಾರಂಭವಾಗಿದೆ. ಇದರಲ್ಲಿ ಅನೇಕ ಪ್ರಸಿದ್ಧ ವಿದ್ವಾಂಸರ ಲೇಖನಗಳೂ, ಮರುಳಸಿದ್ಧರಿಗೆ ಸಂಬಂಧ ಪಡುವ ಅಲ್ಲಲ್ಲಿಯ ಐತಿಹಾಸಿಕ ಸ್ಥಲಗಳ ಚಿತ್ರಗಳೂ ಇವೆ. ಸ್ವತಃ ಶ್ರೀಶೈಲ ಜಗದ್ಗುರುಗಳವರು ಶ್ರೀ ಮರುಳಸಿದ್ಧರ ಬಗ್ಗೆ ವಿಶೇಷವಾಗಿ ಶ್ರಮವಹಿಸಿ ಬರೆದಿರುವ ಐತಿಹಾಸಿಕ ಲೇಖಗಳೂ ಇವೆ. ಮತ್ತು ಮಹಾ ಮಹಾ ಆಚಾರ್ಯರ, ವಿರಕ್ತ ಮೂರ್ತಿಗಳ, ಸಮಾಜ ಮುಂದಾಳುಗಳ, ಹಾಗೂ ಉನ್ನತಾಧಿಕಾರಿಗಳ ಬರೆಹಗಳು, ಅಭಿಪ್ರಾಯಗಳು, ಮರುಳಸಿದ್ಧನ ಗದ್ಯ ಪುರಾಣ ಸಹ ಇವೆ"

(ಇವರು ಹೇಳುವಂತೆ ಮರುಳಸಿದ್ಧಾಂಕದಲ್ಲಿ ಮರುಳಸಿದ್ಧನ ಗದ್ಯ ಪುರಾಣ ವಿರುವುದಿಲ್ಲ. ಇಲ್ಲಿರುವುದು ಮರುಳಾರಾಧ್ಯ ವಿಜಯಗದ್ಯ ಪುರಾಣ. ಇದರಿಂದ ಸಂಪಾದಕರೂ ಸಹ ಈ ಎರಡು ಪದಗಳು ಪರ್ಯಾಯ ವಾಚಕಗಳೆಂದೇ ತಿಳಿದಿರುತ್ತಾರೆಂಬುದು ಸ್ಪಷ್ಟ )

ಇದಾದ ಮೇಲೆ ದಿ. ೧೧—೮—೭೯ ರಲ್ಲಿ ಮರುಳಸಿದ್ಧಾಂಕವನ್ನು ನಾನು ನೋಡಿದೆನು. ನಾನೀಗ ನಾಲ್ಕು ವರ್ಷಗಳಿಂದಲೂ ಇದಕ್ಕೆ ಸಂಬಂಧಪಟ್ಟ ಕಾರ್ಯ ಚಟುವಟಿಕೆಗಳನ್ನು ಪರಿಶೀಲಿಸುತ್ತಲೇ ಇದ್ದೆನು. ಪುಸ್ತಕವು

ದೊರೆತ ಕೂಡಲೇ ಆಮೂಲಾಗ್ರವಾಗಿ ಓದಿದೆನು. ಈ ಬಗ್ಗೆ ವಿಮರ್ಶೆ ಯೊಂದನ್ನು ಬರೆದರೆ ನಮ್ಮ ಸಮಾಜ, ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ನಮ್ಮವರೇ ಜಗದ್ಗುರುಂ ಮಾನ್ಯರೂ, ಪಂಡಿತಂ ಮಾನ್ಯರೂ, ಕವಿಮಾನಿ ಗಳೂ, ಲೇಖಕಂ ಮಾನ್ಯರೂ, ಸಮಾಜ ಪ್ರಮುಖಂ ಮಾನ್ಯರೂ, ಸಾಹಿ ತ್ಯಾಭಿಜ್ಞಂ ಮಾನ್ಯರೂ ಮಾಡಿರುವ ಮಾಡುತ್ತಿರುವ ಮತ್ತು ಮಾಡಲಿರುವ ಅವಮಾನ, ಅನರ್ಥ ಮತ್ತು ಆಘಾತಗಳನ್ನು ತಪ್ಪಿಸಲು ಅವಶ್ಯಕವಾದ ಪ್ರತೀಕಾರಗಳಲ್ಲಿ ಇದೊಂದಾಗಬಹುದೆಂದು ನನಗೆ ತೋರಿದ್ದರಿಂದ ಈ ಯತ್ನವನ್ನು ಕೈಕೊಂಡಿದ್ದೇನೆ.

ಪಂಚಾಚಾರ್ಯವೆಂಬ ಪಕ್ಷವನ್ನು ಸ್ಥಾಪಿಸಿದವರು ಶ್ರೀ ಕಾಶಿನಾಥ ಶಾಸ್ತ್ರಿಗಳು. ಇವರಿಗೆ ಬೆಂಬಲಿಗರು ಕೈ| ಶ್ರೀ ಸಿದ್ಧಲಿಂಗ ಸ್ವಾಮಿಗಳು. ಶ್ರೀ ಶಾಸ್ತ್ರಿಗಳಷ್ಟು ಆಚಾರ್ಯರ ಬಗ್ಗೆ ಸಂಶೋಧನೆ ನಡೆಸುವುದು ಮತ್ತಾ ರಿಗೂ ಸಾಧ್ಯವಿಲ್ಲ. ಆಗ ಅಘಟನ ಘಟನೆಗಳೆಲ್ಲಾ ನಡೆದವು. ಕೈ| ಶ್ರೀ ಸಿದ್ಧಲಿಂಗಸ್ವಾಮಿಗಳು ಆಗ ತಮ್ಮ ಪೀಠದ ಇತಿಹಾಸದ ಬಗ್ಗೆ ನಡೆಸಿದ ಸಂಶೋಧನೆಗಳೂ, ಮಾಡಿದ ಮಾರ್ಪಾಡುಗಳೂ, ಸಹ ಬಹುರೂಪವಾಗಿ ದ್ದವು. ಈ ಶ್ರೀಗಳೇ ಕೇದಾರಮಠದ ಸಂಶೋಧನೆಯನ್ನು ಮಾಡಿದವರು. ಈ ಸಂಶೋಧನೆಯ ಅಂಗವಾಗಿ ಎಂತೆಂತಹ ಬೀಭತ್ಸ, ರೌದ್ರ, ಅಸಹ್ಯ ಘಟನೆಗಳು ನಡೆದು ಹೋದವೆಂಬುದನ್ನು ಕಾಲಾಂತರದಲ್ಲಿ ನಾನೇ ವಿವರಿಸು ವವನಿದ್ದೇನೆ. ಆದರೆ ಆಗ ದೊರಕದ ಈ ಶ್ರೀ ಮರುಳಾರಾಧ್ಯವಿಜಯ ಚರಿತವು ಈಗ ಅದರಲ್ಲೂ ದೇವಕವಿಯ ಕಾವ್ಯ ಹೊರಟಮೇಲೆ ಮತ್ತದ ರಲ್ಲೂ ನಾಲ್ಕು ವರ್ಷಗಳ ಮೇಲೆ ಪ್ರಕಟವಾಗಿದೆ. ಅದೂ ಗದ್ಯಾನುವಾದ ದಲ್ಲಿ. ಸಂಸ್ಕೃತ ರೇಣುಕ ವಿಜಯದಂತೆ. ಪದ್ಯ ಕಾವ್ಯಕ್ಕೆ ಇನ್ನೂ ಏನೇನು ಮೆರಗು ಕೊಡಬೇಕಾಗಿದೆಯೋ ? ಪ್ರಾಯಶಃ ಬರಲಿರುವ ಟೀಕೆ ಗಳನ್ನೆಲ್ಲಾ ಅನುಲಕ್ಷಿಸಿ ಸರಿಯಾದ ಮಾರ್ಪಾಟುಗಳನ್ನು ಮಾಡಿ ಪ್ರಕಟಿಸ ಬಹುದು.

ಮರುಳಸಿದ್ಧನ ಬಗ್ಗೆ ಅನೇಕ ಗ್ರಂಥಗಳಿವೆ. ೧). ದೇವಕವಿಯ

ಮರುಳಸಿದ್ಧ ಕಾವ್ಯ. ಕ್ರಿ. ಶ. ೧೫೮೭ (೩೬೨ ವರ್ಷಗಳು.) ೨) ಆನೆ ಕೊಂಡದ ರೇವಣಸಿದ್ಧ ಕವಿಯ ಸಾಂಗತ್ಯ ಕ್ರಿ. ಶ. ೧೮೪೧ (೧೦೮ ವರ್ಷಗಳು) ೩) ಸಿರಿಗೆರೆ ಶ್ರೀ ಗುರುಸಿದ್ಧ ಸ್ವಾಮಿಗಳ ಸಾಂಗತ್ಯ ಕ್ರಿ. ಶ. ೧೮೭೪ (೭೫ ವರ್ಷಗಳು.) ೪) ರಾವಣಗಿರಿಯ ನಾಗಭೂಷಣನ ಸಾಂಗತ್ಯ ಸುಮಾರು ೧೦೦ ವರ್ಷಗಳು. ೫) ಉಜ್ಜಯಿನಿ ಗೊಂಗಡಿ ವೀರಭದ್ರಯ್ಯನ ಸಾಂಗತ್ಯ ಕ್ರಿ. ಶ. ೧೮೯೯ (೫೦ ವರ್ಷಗಳು.) ೬) ಚತುರಾಚಾರ್ಯರ ಪುರಾಣ ಕ್ರಿ ಶ. ೧೬೦೮ (೩೫೧ ವರ್ಷಗಳು) ೭) ಗುರ ರಾಜ ಚಾರಿತ್ರ ಕ್ರಿ. ಶ. ೧೬೫೦ (೯೯ ವರ್ಷಗಳು) ೮) ಚತುರಾಚಾರ್ಯರ ಪ್ರಬಂಧ. ೯) ಕೊಲನುಪಾಕ ಮಹಾತ್ಮ್ಯವು ಕ್ರಿ. ಶ. ೧೬೦೦ (೩೪೯ ವರ್ಷಗಳು.) ೧೦) ನಂದೀಶ ಕವಿಯ ಶ್ರೀ ಮರುಳಾರಾಧ್ಯ ವಿಜಯಚರಿತ ಕ್ರಿ ಶ. ೧೯೪೬.೪೮.

ಇವುಗಳಲ್ಲಿ ದೇವಕವಿಯ ಕಾವ್ಯವೇ ಪ್ರಾಚೀನವಾದುದು. ಇವನ್ನು ಮುಖ್ಯವಾಗಿ ಎರಡು ಪಂಗಡವಾಗಿ ವಿಂಗಡಿಸಬಹುದು. ೧] ಚರಿತ್ರೆ ಪ್ರಧಾನವಾದವುಗಳು. ೨] ಉಪದೇಶ ಪ್ರಧಾನವಾದವುಗಳು. ಮೊದಲ ನೆಯ ಪಂಗಡಕ್ಕೆ ೧] ದೇವಕವಿಯ ಕಾವ್ಯ ೨] ರೇವಣಸಿದ್ಧ ಕವಿಯ ಸಾಂಗತ್ಯ. ೩] ಗುರುಸಿದ್ಧ ಸ್ವಾಮಿಗಳ ಸಾಂಗತ್ಯ. ೪] ನಾಗಭೂಷಣನ ಸಾಂಗತ್ಯ. ೫] ಗೊಂಗಡೀ ವೀರಭದ್ರಯ್ಯನ ಸಾಂಗತ್ಯ. ೬] ಶ್ರೀ ಮರುಳಾರಾಧ್ಯ ವಿಜಯಚರಿತ. ೭] ಗುರುರಾಜ ಚಾರಿತ್ರ. ಇವು ಸೇರು ತ್ತವೆ. ಎರಡನೆಯ ಪಂಗಡಕ್ಕೆ ೧) ಚತುರಾಚಾರ್ಯರ ಪುರಾಣ. ೨) ಚತುರಾಚಾರ್ಯರ ಪ್ರಬಂಧ. ೩) ಕೊಲನುಪಾಕ ಮಹಾತ್ಮ್ಯವು. ಇವು ಸೇರುತ್ತವೆ. ಈ ಎರಡನೆಯ ಪಂಗಡದ ಗ್ರಂಥಗಳಿಂದ ಮರುಳಸಿದ್ಧನ ಇತಿಹಾಸದ ನಿರ್ಣಯಕ್ಕೆ ಸಾಕಷ್ಟು ಸಹಾಯವಾಗುವುದಿಲ್ಲ. ಐತಿಹಾಸಿಕ ವ್ಯಕ್ತಿಗಳ ಜೀವನವನ್ನು ನಿರ್ಣಯಿಸಲು ಶಾಸನಗಳಷ್ಟೇ ಪವಾಡಗಳೂ, ಅವುಗಳ ಬಗ್ಗೆ ಜನರ ಪ್ರತೀತಿಗಳೂ, ಪವಾಡ ಕ್ಷೇತ್ರಗಳೂ, ಅವುಗಳ ಕುರುಹುಗಳೂ ಮತ್ತು ಅವಶೇಷಗಳೂ ಹೆಚ್ಚಿನ ಸಹಾಯವನ್ನು ಮಾಡು ತ್ತವೆ. ಈ ಕಾವ್ಯಗಳಲ್ಲಿ ದೇವಕವಿಯ ಕಾವ್ಯವೇ ಪ್ರಾಚೀನವಾದುದು.

ಈ ಸಂಗಡಕ್ಕೆ ಸೇರಿದ ಉಳಿವ ಆರು ಗ್ರಂಥಗಳು ಬಹುತರವಾಗಿ ದೇವಕವಿಯನ್ನೇ ಅನುಸರಿಸಿವೆ. ಅಂದರೆ ಅವೆಲ್ಲವೂ ದೇವಕವಿಯ ಕಾವ್ಯವನ್ನು ಆಧಾರವಾಗಿಟ್ಟು ಕೊಂಡಿವೆ ಆದರೆ ಇವುಗಳಲ್ಲಿ ಕೆಲವು ದೇವಕವಿಯನ್ನು ಸಂಪೂರ್ಣವಾಗಿ ಅನುಸರಿಸಿವೆ ಉಳಿದ ಕೆಲವು ಕೆಲವು ಸಂದರ್ಭಗಳಲ್ಲಿ ಅನುಸರಿಸಿವೆ. ಕೆಲವು ಸಂದರ್ಭಗಳಲ್ಲಿ ಮಾರ್ಪಾಡುಗಳನ್ನು ಮಾಡಿವೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಹೊಸ ವಿಷಯುಗಳನ್ನೂ ಸೇರಿಸಿವೆ. ರೇವಣಸಿದ್ಧಕವಿಯ ಸಾಂಗತ್ಯ, ಗುರುಸಿದ್ಧ ಸ್ವಾಮಿಗಳ ಸಾಂಗತ್ಯ ಇವನ್ನು ಮೊದಲನೆಯ ವರ್ಗಕ್ಕೆ ಸೇರಿಸಬಹುದು ಉಳಿದವನ್ನು ಎರಡನೆಯ ವರ್ಗಕ್ಕೆ ಸೇರಿಸಬಹುದು. ಮರುಳಸಿದ್ಧನ ಜೀವನದಲ್ಲಿಯ ಮುಖ್ಯ ಘಟನೆಗಳನ್ನು ಸಾಮಾನ್ಯವಾಗಿ ಎಲ್ಲಾ ಗ್ರಂಥಗಳೂ ಒಪ್ಪಿವೆ.

೧) ಮಾದಿಗನ ಮನೆಯಲ್ಲಿ ಹುಟ್ಟುವುದು
೨) ಕಗ್ಗಲ್ಲುಗೌಡನಿಗೆ ಮಗನಾಗಿ ಸಿಕ್ಕುವುದು.
೩) ಕರುಗಳ ಕಾಯುವುದು.
೪) ಕೊಲ್ಲಾಪುರದ ಮಾಯೆಯನ್ನು ಗೆಲ್ಲುವುದು.
೫) ಉಜ್ಜಯಿನಿಯಲ್ಲಿ ಪೀಠವನ್ನು ಸ್ಥಾಪಿಸುವುದು.
೬) ತನ್ನ ಉತ್ತರಾಧಿಕಾರಿಯನ್ನು ನೇಮಿಸುವುದು.

ದೇವಕವಿಯ ಕಾವ್ಯದಲ್ಲಿ,

೧] ಕೂಗಿನಮಾರ ಮತ್ತು ಸುಪ್ರಭೆಯರ ಉದರದಲ್ಲಿ ಜನಿಸುತ್ತಾನೆ.
೨] ಕಗ್ಗಲ್ಲುಪುರದ ಬಾಚನ ಗೌಡನ ಮನೆಯಲ್ಲಿ ಮಗನಾಗಿ ಬೆಳೆಯುತ್ತಾನೆ.
೩] ಕರುಗಳನ್ನು ಕಾಯುತ್ತಾನೆ.
೪] ಕೊಲ್ಲಾಪುರದ ಮಾಯೆಯನ್ನು ಸೋಲಿಸುತ್ತಾನೆ.
೫] ಉಜ್ಜಯಿನಿಯಲ್ಲಿ ಪೀಠವನ್ನು ಸ್ಥಾಪಿಸುತ್ತಾನೆ,
೬] ತನ್ನ ಉತ್ತರಾಧಿಕಾರಿಯನ್ನು ನೇಮಿಸುತ್ತಾನೆ

ದೇವಕವಿಯು ಹೇಳಿರುವ ಈ ಮುಖ್ಯ ಘಟನೆಗಳ ಬಗ್ಗೆ ಇತರ ಕವಿಗಳ ಅಭಿಪ್ರಾಯಗಳನ್ನು ಈ ಕೆಳಗೆ ಕ್ರೋಢೀಕರಿಸಿರುತ್ತೇನೆ.

### ನಾಗಭೂಷಣನ ಸಾಂಗತ್ಯದಲ್ಲಿ

೧) ಪಾದರಕ್ಷೆಯನ್ನು ಹೊರಿಯುವ ಕಾಯಕವುಳ್ಳ ಮಾರಸೊನ್ನಲೆಯರ ಮಧ್ಯದಲ್ಲಿ ಜನಿಸುತ್ತಾನೆ.
೨) [ಕಗ್ಗಲ್ಲಿ ಗೌಡನ ಬದಲು] ಮುಕ್ತಾಯಕ್ಕನ ಪೋಷಣೆಯಲ್ಲಿ ಮಗನಾಗಿ ಬೆಳೆಯುತ್ತಾನೆ
೩) ಕರುಗಳನ್ನು ಕಾಯುತ್ತಾನೆ.
೪) ಕೊಲ್ಲಾಪುರದ ಮಾಯಿಯನ್ನು ಸೋಲಿಸುತ್ತಾನೆ.
೫) ಉಜ್ಜಯಿನಿಯಲ್ಲಿ ಪೀಠವನ್ನು ಸ್ಥಾಪಿಸುತ್ತಾನೆ.
೬) ಉತ್ತರಾಧಿಕಾರಿಯ ನೇಮಕವನ್ನು ಹೇಳಿಲ್ಲ.

### ಉಜ್ಜಯಿನಿಗೊಂಗಡಿ ವೀರಭದ್ರಯ್ಯನ ಸಾಂಗತ್ಯದಲ್ಲಿ

೧] ಕೂಗಿನ ಮಾರ ಮತ್ತು ಸುಪ್ರಭೆಯರ ಮಧ್ಯದಲ್ಲಿ ಜನಿಸುತ್ತಾನೆ.
೨] ಕಗ್ಗಲ್ಲುಪುರದ ಬಾಚನಗೌಡನ ಮನೆಯಲ್ಲಿ ಮಗನಾಗಿ ಬೆಳೆಯುತ್ತಾನೆ.
೩] ಕರುಗಳನ್ನು ಕಾಯುತ್ತಾನೆ
೪] ಕೊಲ್ಲಾಪುರದ ಮಾಯಿಯನ್ನು ಸೋಲಿಸುತ್ತಾನೆ.
೫] ಉಜ್ಜಯಿನಿಯಲ್ಲಿ ಪೀಠವನ್ನು ಸ್ಥಾಪಿಸುತ್ತಾನೆ
೬] ತನ್ನ ಉತ್ತರಾಧಿಕಾರಿಯನ್ನು ನೇಮಿಸುತ್ತಾನೆ.

### ಗುರುರಾಜ ಚಾರಿತ್ರದಲ್ಲಿ

೧] × × ×
೨] ಕಗ್ಗಲ್ಲ ಗೌಡನಿಗೆ ಮಗನಾಗಿ ಬೆಳೆಯುತ್ತಾನೆ.
೩] × × ×
೪] ಕೊಲ್ಲಾಪುರದ ಮಾಯಿಯನ್ನು ಸೋಲಿಸುತ್ತಾನೆ
೫] ಉಜ್ಜಯಿನಿಯಲ್ಲಿ ಬಯಲಾಗುತ್ತಾನೆ
೬] × × ×

### ಮರುಳಾರಾಧ್ಯ ವಿಜಯ ಚರಿತದಲ್ಲಿ

೧. ಸಿಂಧೋಗಿಮಾದಿಗನಿಗೆ ಮಗನಾಗಿ ಹುಟ್ಟುತ್ತಾನೆ

೩. ಕಗ್ಗಲ್ಲು ಗೌಡನಿಗೆ ಮಗನಾಗಿ ಸಿಕ್ಕುತ್ತಾನೆ.
೪. ಕರುಗಳನ್ನು ಕಾಯುತ್ತಾನೆ
೫. ಕೊಲ್ಲಾಪುರದ ಮಾಯೆಯನ್ನು ಸೋಲಿಸುತ್ತಾನೆ.
೬. ಉಜ್ಜಯಿನಿಯಲ್ಲಿ ಪೀಠವನ್ನು ಸ್ಥಾಪಿಸುತ್ತಾನೆ.
೭. ಉತ್ತರಾಧಿಕಾರಿಯನ್ನು ನೇಮಿಸುತ್ತಾನೆ.

ಈ ರೀತಿ ಈ ಎಲ್ಲಾ ಗ್ರಂಥಗಳೂ ಮೇಲ್ಕಂಡ ಮರುಳಸಿದ್ಧನ ಜೀವನದ ಮುಖ್ಯ ಘಟನೆಗಳನ್ನು ಒಪ್ಪಿಕೊಂಡಿವೆ. ಮೊಟ್ಟ ಮೊದಲು ಈ ಘಟನೆಗಳನ್ನೂ ವಿವರಿಸಿದವನು ದೇವಕವಿ ಇವನ್ನು ರೇವಣಸಿದ್ಧ ಕವಿ ಮತ್ತು ಗುರುಸಿದ್ಧ ಸ್ವಾಮಿಗಳು ಪೂರ್ಣವಾಗಿ ಒಪ್ಪಿಕೊಂಡಿದ್ದಾರೆ. ಇನ್ನು ಳಿದವರು ತಮ್ಮ ಉದ್ದೇಶ ಮತ್ತು ತಮ್ಮ ದೃಷ್ಟಿಗಳಿಗೆ ತಕ್ಕಂತೆ ಬದಲಾವಣೆಗಳನ್ನು ಮಾಡಿರುತ್ತಾರಾದರೂ ಈ ಘಟನೆಗಳ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿಲ್ಲವೆಂಬುದನ್ನು ಮೇಲೆ ವಿವರಿಸಿದೆ ನಾಗಭೂಷಣ ಕವಿಯು ಮಾದಿಗ ಜಾತಿಯ ಹೆಸರನ್ನು ಹೇಳಿಲ್ಲವಾದರೂ ಪಾದರಕ್ಷೆಯನ್ನು ಮಾಡುತ್ತಿದ್ದರೆಂದು ಹೇಳಿ ಮಾದಿಗತನವನ್ನು ಒಪ್ಪಿಕೊಂಡಿದ್ದಾನೆ. ಕೂಗಿನ ಮಾರ, ಸುಪ್ರಭೆಯರಿಗೆ ಬದಲಾಗಿ ಮಾರಸೊನ್ನಲೆಯರನ್ನು ಹೇಳಿರುತ್ತಾನೆ. ಉದರದ ಬದಲು ಮಧ್ಯದಲ್ಲಿ ಜನಿಸುತ್ತಾನೆಂದು ಹೇಳುತ್ತಾನೆ. ಮಧ್ಯವಾಗಲೀ ಉದರವಾಗಲಿ ಮನೆಯಂತೂ ಮಾದಿಗರದು. ಎಣ್ಣೆ ಬೆಣ್ಣೆಯು ಮಾದಿಗರದು. ಮೊಲೆ ಹಾಲು ಮಾದಿಗರದು. ಆದ್ದರಿಂದ ಈ ಬಗ್ಗೆ ದೇವಕವಿಗೂ ನಾಗಭೂಷಣ ಕವಿಗೂ ಯಾವ ಭಿನ್ನಾಭಿಪ್ರಾಯವಿಲ್ಲ. ಕಗ್ಗಲ್ಲು ಗೌಡನ ಬದಲು ಮುಕ್ತಿಯಣ್ಣನನ್ನು ನಾಗಭೂಷಣನು ಉಪಯೋಗಿಸಿಕೊಂಡಿರುತ್ತಾನೆ. ಇಲ್ಲಿ ಮರುಳಸಿದ್ಧನು ಹುಟ್ಟಿದ ಮನೆಯನ್ನು ಬಿಟ್ಟು ಪರರ ಮನೆಯಲ್ಲಿ ಬೆಳೆದನೆಂಬ ಬಗ್ಗೆ ದೇವನಿಗೂ, ನಾಗಭೂಷಣನಿಗೂ ಭಿನ್ನಾಭಿಪ್ರಾಯವಿಲ್ಲ ಉತ್ತರಾಧಿಕಾರಿಯ ಬಗ್ಗೆ ಮಾತ್ರ ನಾಗಭೂಷಣನು ಏನೂ ಹೇಳಿಲ್ಲ ಉಳಿದ ಎಲ್ಲಾ ವಿಷಯಗಳಲ್ಲೂ ದೇವನನ್ನು ಅನುಸರಿಸಿರುತ್ತಾನೆ. ಉಜ್ಜಯಿನಿ ಗೊಂಗಡಿ ವೀರಭದ್ರಯ್ಯನು ದೇವನ ಎಲ್ಲಾ ಘಟನೆಗಳನ್ನೂ ಸಂಪೂರ್ಣವಾಗಿ ಒಪ್ಪಿಕೊಂಡಿರುತ್ತಾನೆ. ಉತ್ತರಾಧಿಕಾರಿಯ

ನೇಮಕದ ಬಗ್ಗೆ ಸ್ವಲ್ಪ ಬದಲಾವಣೆ ಮಾಡಿರುತ್ತಾನೆ. ದೇವನು ಮರುಳ ಸಿದ್ಧನು ತರಳಬಾಳುಸಿದ್ಧನಿಗೆ ತನ್ನ ಎಲ್ಲಾ ಅಧಿಕಾರವನ್ನೂ ಕೊಟ್ಟನೆಂದು ದೇವನು ಹೇಳಿದ್ದಾನೆ. ವೀರಭದ್ರಯ್ಯನು ತರಳಬಾಳುಸಿದ್ಧನಿಗೆ ಸಾದರಿಗೆ ಗುರುವಾಗೆಂದು ಹೇಳಿದನೆಂದು ಬದಲಾವಣೆ ಮಾಡಿರುತ್ತಾನೆ. ಈತನು ಈಗ ೫೦ ವರ್ಷಗಳ ಕೆಳಗೆ ಈ ಕಾವ್ಯವನ್ನು ಬರೆದಿರುತ್ತಾನೆ. ಉಜ್ಜಯಿನಿ ಗ್ರಾಮ ದವನು. ಆಗಿನ ಉಜ್ಜಯಿನಿ ಮಠದ ಚಿನ್ನಬಸವಸ್ವಾಮಿಗಳು ಹೇಳಿದಂತೆ ಬರೆದಿರುತ್ತೇನೆಂದು ಹೇಳಿರುವುದರಿಂದ ಈ ಅಲ್ಪ ಬದಲಾವಣೆ ಅನಿವಾರ್ಯ. ಆದರೆ ಇವನೂ ಸಹ ಈ ಆರು ಘಟನೆಗಳನ್ನೂ ತತ್ವಶಃ ಒಪ್ಪಿಕೊಂಡಿರು ತ್ತಾನೆ. ಗುರುರಾಜ ಚಾರಿತ್ರಗಳಲ್ಲಿ ಸಂಕ್ಷೇಪವಾಗಿ ಹೇಳಲ್ಪಟ್ಟಿರುವುದರಿಂದ ಹೆಚ್ಚಿನ ವಿವರಗಳು ನಮಗೆ ದೊರೆಯಲು ಸಾಧ್ಯವಿಲ್ಲ. ಹೇಳಿರುವ ಘಟನೆ ಗಳೆಲ್ಲಾ ದೇವಕವಿಯನ್ನು ಅನುಸರಿಸಿವೆ. ಮರುಳಾರಾಧ್ಯ ವಿಜಯವು ಎಲ್ಲಾ ಘಟನೆಗಳನ್ನು ಒಪ್ಪಿ ಕೊಂಡಿದ್ದರೂ ಮುಖ್ಯವಾದ ಮೂರು ಘಟನೆ ಗಳಿಗೆ ಮೂರುಜನ ಮರುಳಸಿದ್ಧರನ್ನು ಕಲ್ಪಿಸಿಕೊಂಡಿದೆ. ಈ ಮೂರುಜನ ಮರುಳಸಿದ್ಧರೂ ಕಲ್ಪಿತರಾದಾಗ ಆ ಘಟನೆಗಳು ಒಬ್ಬ ಮರುಳಸಿದ್ಧನಿಗೇ ಅನ್ವಯಿಸುತ್ತವಾದ್ದರಿಂದ ವಿಜಯವೂ ಸಹ ದೇವನನ್ನು ಅನುಸರಿಸಿದೆ. ಈ ಮೂರುಜನ ಮರುಳಸಿದ್ಧರು ಕಲ್ಪಿತ ವ್ಯಕ್ತಿಗಳೆಂಬುದನ್ನು ಮುಂದೆ ಚೆನ್ನಾಗಿ ವಿವರಿಸುವೆನು. ಆಗ ಈ ಬಗ್ಗೆ ಹುಟ್ಟಿದ ವಾಚಕರ ಸಂಶಯವು ನಿವಾರಣೆ ಯಾಗುವುದರಲ್ಲಿ ಸಂಶಯವಿಲ್ಲ. ಈ ವಿಜಯ-ಚರಿತವು ಕೂಗಿನ ಮಾನ ಬದಲು ಸಿಂದೋಗಿ ಮಾನಿಸಿಗೆ ಮಗನೆಂದು ಹೇಳಿದೆ. ಕಗ್ಗಲ್ಲುಗೌಡನ ಕರುಗಳನ್ನು ಕಾದದ್ದನ್ನು ಪೂರ್ಣವಾಗಿ ಒಪ್ಪಿಕೊಂಡಿದೆ. ಅಂತಯೇ ಮಗ ನಾದುದನ್ನು ಒಪ್ಪಿಕೊಂಡಿದೆ. ಕೊಲ್ಲಾಪುರದ ಮಾಯೆಯನ್ನು ಗೆದ್ದು ಉಜ್ಜಯಿನಿಯಲ್ಲಿ ಪೀಠವನ್ನು ಸ್ಥಾಪಿಸಿದ್ದನ್ನು ಒಪ್ಪಿಕೊಂಡಿದೆ. ಉತ್ತರಾಧಿ ಕಾರದ ಬಗ್ಗೆ ಸ್ವಲ್ಪ ಬದಲಾವಣೆಯನ್ನು ಮಾಡಿದೆ. ತರಳಬಾಳುಸಿದ್ಧನಿಗೆ ಉತ್ತರಾಧಿಕಾರವನ್ನು ಕೊಟ್ಟನೆಂದು ಹೇಳುವ ಬದಲು ಹರಪನಹಳ್ಳಿಯಲ್ಲಿ ಒಂದು ಮಠವನ್ನು ಮಾಡಿಕೊಟ್ಟನೆಂದು ಹೇಳಿದೆ ತಮ್ಮ ದೃಷ್ಟಿ, ತಮ್ಮ ಉದ್ದೇಶಗಳಿಗೆ ತಕ್ಕಂತೆ ಸ್ವಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಎಲ್ಲಾ ಗ್ರಂಥ ಗಳೂ ದೇವಕವಿಯ ಮರುಳಸಿದ್ಧನನ್ನೇ ಒಪ್ಪಿಕೊಂಡಿವೆ.

ಈಗ ಶ್ರೀ ಮರುಳಸಿದ್ಧಾಂಕದಲ್ಲಿರುವ ಮರುಳಾರಾಧ್ಯ ವಿಜ
ಗದ್ಯಾನುವಾದದ ಬಗ್ಗೆ ವಿಮರ್ಶೆಯನ್ನು ಮಾಡಬೇಕಾಗಿದೆ. ಈ ಅಂಕ
ರುವ ಲೇಖಕರು ಈ ವಿಷಯವನ್ನು ಅತ್ಯಂತ ಪ್ರಾಮಾಣಿಕವಾದ ಗ್ರ
ವೆಂದು ಭಾವಿಸಿಕೊಂಡಿದ್ದಾರೆ. ಇವರಲ್ಲಿ ಮುಖ್ಯವಾಗಿ "ಶ್ರೀ ಶಿವ ಶ್ರೀಶೈ
ಎಂಬ ಪ್ರಚ್ಛನ್ನ ನಾಮಧೇಯವುಳ್ಳ ಲೇಖಕರು ತಮ್ಮ ಲೇಖನದಲ್ಲಿ ಇ
ಪ್ರಾಮಾಣ್ಯವನ್ನು ಅತಿಶಯ ಆಸಕ್ತಿಯಿಂದ ಪ್ರತಿಪಾದಿಸಿದ್ದಾರೆ. ಆದರೆ
ಶ್ರೀ ಶಿವ ಶ್ರೀ ಶೈಲರು ಯಾರೆಂಬುದು ನನಗೆ ತಕ್ಷಣ ಗೊತ್ತಾಗಲಿ
ಮುನ್ನುಡಿಕಾರರೂ, ಅಭಿಪ್ರಾಯದಾತರೂ, ಸಂಪಾದಕರೂ ತಮ್ಮ ಲೇಖ
ಶ್ರೀ ಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಸ್ವಾಮಿಗಳವರ ಕೆಲವು ಲೇ
ನಗಳಿವೆಯೆಂದು ಬರೆದಿರುತ್ತಾರೆ. ಆದರೆ ಅವರ ಹೆಸರು ಯಾವ ಲೇಖನ
ಮೇಲೆಯೂ ಇಲ್ಲವಾದರೂ ಶ್ರೀ ಶಿವ ಶ್ರೀ ಶೈಲ ಎಂಬ ಅಂಕಿತದಿಂದ ಅವರ
ಪ್ರಚ್ಛನ್ನರಾಗಿದ್ದಾರೆಂದು ಭಾವಿಸಬಹುದಾಗಿದೆ. ಆದ್ದರಿಂದ ನನ್ನ ಈ ವಿಮ
ರ್ಶೆಯಲ್ಲಿ ಇವರನ್ನು ಶ್ರೀಗಳು ಎಂಬ ಅಂಕಿತದಿಂದ ವ್ಯವಹರಿಸಿದ್ದೇನೆ.
ಇವರು ತಮ್ಮ "ಮರುಳಸಿದ್ಧರೆಷ್ಟು ಜನ? ಎಂಬ ಲೇಖನದಲ್ಲಿ ತಾವು
ವಿಜಯಚರಿತವನ್ನು ನೆರೆನಂಬಿರುವೆನೆಂದು ಪದೇ ಪದೇ ಹೇಳುತ್ತಿದ್ದೂ ಸಹ
ಅದರಲ್ಲಿಲ್ಲದ ಮತ್ತು ಅದಕ್ಕೆ ಸಂಬಂಧಪಡದ ಕೆಲವು ವಿಷಯಗಳನ್ನು ಅದ
ಆಧಾರದ ಮೇಲೆಯೇ ಬರೆದಂತೆ ಮಾಡಿ ಅದರ ಪ್ರಾಮಾಣ್ಯವನ್ನು ತಾವೇ
ಸ್ವತಃ ಖಂಡಿಸಿರುತ್ತಾರೆ. ಅಂತಹ ಕೆಲವು ಭಾಗಗಳನ್ನು ಮೊದಲು
ವಿಮರ್ಶಿಸುತ್ತೇನೆ.

ಪುಟ ೧೨೦. (ಶ್ರೀ ವಾಗೀಶಪಂಡಿತಾರಾಧ್ಯರು)

"ಮಾಳವದೇಶದಲ್ಲಿ ............ ... ಉಜ್ಜಯಿನಿಯೆಂಬ ಪಟ್ಟಣ
ವಿದ್ದಿತು. ಅದನ್ನು ಶ್ರೌತಪಾಲನೆಂಬ ಮಹಾರಾಜ ಮೊದಲುಗೊಂಡು
ಜೈನ ಸಂತತಿಯವರು ಆಳುತ್ತಿದ್ದರು. ವೀರಕ್ಷಾತ್ರದಿಂದ ವಿಶ್ವವನ್ನು ಜಯಿಸಿದ
ಕಾರಣ ಬುದ್ಧ ಸಾಂಪ್ರದಾಯದ ಅರಸರಿಗೆ "ಜಯಿನಃ" ಎಂಬ ಹೆಸರು
ಬಂದು ಅದು ಅಪಭ್ರಂಶವಾಗಿ "ಜೈನ" ಬಳಿಕೆಯಲ್ಲಿ ಉಳಿದಂತೆ, ಅಥವಾ
ಅವರ ದೇವರಾದ ಜಿನನಿಂದ ಬಂದಂತೆ ಕಾಣುತ್ತದೆ. ಅಲ್ಲದೆ ಅವಂತಿಗೆ

ಉಜ್ಜಯಿನಿ ಅಥವಾ ಉಜ್ಜೈಸ್ ಎಂಬ ಹೆಸರು ಇದೇ ಕಾರಣದಿಂದ ಬಂದಿರ
ಬಹುದೆಂದೂ ಊಹಿಸಲಾಗಿದೆ.

ಜೈನ ಧರ್ಮದ ಶ್ರೌತಪಾಲ ಮಹಾರಾಜನು………………"

ಪುಟ ೧೮೫. (ವಿಜಯಚರಿತ)

"ಇಂತಹ ಶೈವ ಸಾಮ್ರಾಜ್ಯಕ್ಕೆ ಶ್ರೌತಪಾಲ ಸಮ್ರಾಟ………… ………… ಶ್ರೌತಪಾಲನಲ್ಲಿ ………… ….ಬ್ರಾಹ್ಮಣರ ಬಗೆಗೆ ಮೂಢ ಭಕ್ತಿಯಿದ್ದಿತು. ……………… ಆಗ ಅವರೆಲ್ಲಾ ರಾಜನನ್ನು ತಮ್ಮ ಕುಟಿಲ ನೀತಿಯ ಬಲೆಯಲ್ಲಿ ಎಳೆದರು. ಅಶ್ವಮೇಧ ಯಜ್ಞ ಮಾಡಹತ್ತಿದರು. ಆ ಯಜ್ಞದ ಫಲವಾಗಿ ಸ್ವರ್ಗಸಿಂಹಾಸನ ಸಿಕ್ಕುವುದೆಂದು ಶಾಸ್ತ್ರಾಧಾರ ತೋರಿಸಿದರು. ಅದರಂತೆ ಶಾಬರಭಾಷ್ಯದ ಪ್ರಕಾರ……………… ಅನನ್ಯ ಭಕ್ತಿಯಿಂದ ವಟವೃಕ್ಷಸಿದ್ಧೇಶ್ವರನನ್ನು ಶರಣು ಹೊಗುವುದು……… ………………ತನ್ನ ಪತಿದೇವನೊಡನೆ ದೇವನ ಪೂಜೆಗೆ ಹೊರಟಳು."

ವಿಜಯಚರಿತವು ಹೇಳುತ್ತಿರುವಂತೆ ಈ ಶ್ರೌತಪಾಲನು ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನು. ಅಶ್ವಮೇಧಯಾಗ, ಸ್ವರ್ಗ, ಶಾಬರಭಾಷ್ಯ ಇವುಗಳಲ್ಲಿ ನಂಬಿಕೆಯುಳ್ಳವನು. ವಟವೃಕ್ಷ ಸಿದ್ಧೇಶ್ವರನ ಮೊರೆ ಹೊಗುತಾನೆ. ಪತ್ನಿಯೊಡನೆ ಸಿದ್ಧೇಶ್ವರನ ಪೂಜೆಯನ್ನು ಮಾಡುತ್ತಾನೆ. ಈ ಕಾರಣಗಳಿಂದ ಇವನು ವೈದೀಕನೂ, ಶಿವಭಕ್ತನೂ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಈ ವಿಜಯಚರಿತವನ್ನು ಪ್ರಮಾಣ (ಜನರಿಗೆ, ತಮಗಾಗಿ ಅಲ್ಲ) ವೆಂದು ಹೇಳುತ್ತಿರುವ ಶ್ರೀ ವಾಗೀಶ ಪಂಡಿತಾರಾಧ್ಯರು ಈ ಶ್ರೌತಪಾಲನನ್ನು ಜೈನನೆಂದು ಹೇಳಿದ್ದಾರೆ. ಇವರು ಶ್ರೌತಪಾಲನು ಜೈನ ಸಂತತಿಯವನೇದೂ, ಬುದ್ಧ ಸಂಪ್ರದಾಯದವನೆಂದೂ, ವೀರ ಕ್ಷಾತ್ರದಿಂದ ವಿಶ್ವವನ್ನು ಜಯಿಸಿದ್ದರಿಂದ ಉಂಟಾದ "ಜಯಿನಃ'' ಎಂಬ ಪ್ರಶಸ್ತಿಯಿಂದ ಜೈನ ಎಂದು ಕರೆಯಲ್ಪಟ್ಟವನೆಂದೂ, ಇವನು ದೇವರುಜಿನನಾದುದರಿಂದ ಜೈನನೆಂದು ಹೇಳಿದ್ದಾರೆ ಬೌದ್ಧ, ಜೈನ

ಧರ್ಮಗಳು ಬೇರೆ ಬೇರೆಯಾದವುಗಳು. ಜಿನಭಕ್ತನಾದವನು ಜೈನಮತ ದವನಾಗುತ್ತಾನೆ. ಜೈನ ಸಂತತಿಯಲ್ಲಿ ಹುಟ್ಟಿದವನು ಜೈನನಾಗುತ್ತಾನೆ. ಹಾಗೆಯೇ ಬುದ್ಧ ಭಕ್ತನೂ ಬೌದ್ಧನಾಗುತ್ತಾನೆ ಬೌದ್ಧ ಜಾತಿಯಲ್ಲಿ ಹುಟ್ಟಿದವನು ಬುದ್ಧ ಸಂಪ್ರದಾಯದವನಾಗುತ್ತಾನೆ. ಆದರೆ ಇವರು ಹೇಳುವಂತೆ ಜೈನ ಸಂತತಿಯಲ್ಲಿ ಹುಟ್ಟಿದ ಶ್ರೌತಪಾಲನು ಬುದ್ಧ ಸಂಪ್ರದಾಯದವನು ಹೇಗೆ ಆದನು? "ಜಯಿನಃ" ಎಂಬುದು ಅಪಭ್ರಂಶವಾದಲ್ಲಿ "ಜೈನ" ಎಂದು ಆಗುತ್ತದೆಂದು ಯಾವ ವ್ಯಾಕರಣ ಶಾಸ್ತ್ರದಲ್ಲಿ ಹೇಳಿದೆ? ಒಂದು ವೇಳೆ ಅದರೂ ಆ ಜೈನ ಪದವು ಪ್ರಶಸ್ತಿ ವಾಚಕವಾದೀತೇ ವಿನಾ ಜಾತಿ ಧರ್ಮವಾಚಕವಾಗುವುದಿಲ್ಲ. ಪ್ರಶಸ್ತಿ ಕಾರಣದಿಂದ ಜೈನ ಎಂದು ಕರೆಯಲ್ಪಟ್ಟವನಿಗೆ ಜಿನನು ಹೇಗೆ ದೇವರಾಗುತ್ತಾನೆ? "ಇವರೇ ಜೈನ ಧರ್ಮದ ಶ್ರೌತಪಾಲ ಮಹಾರಾಜನು" ಎಂದು ಹೇಳುತ್ತಾ ರಾಜನ ಧರ್ಮವು ಜೈನವೆಂದು ತಿಳಿದೇಯಿದ್ದಾರೆ. ಹೀಗಿದ್ದೂ ಪ್ರಶಸ್ತಿ ಕಾರಣದ ಜೈನಪದ ಕಲ್ಪನೆಯ ಸಾಹಸವೇಕೆ ಬೇಕಾಗಿದ್ದಿತು? ಅವಂತಿ ನಗರವು ಉತ್ಕೃಷ್ಟವಾದ ಜಯವುಳ್ಳದ್ದು ಎಂಬ ಅರ್ಥದಲ್ಲಿ ಉಜ್ಜಯಿನಿ ಎಂಬ ಹೆಸರನ್ನು ಪಡೆದು ಅದು ಪರದೇಶಿಯರ ಉಚ್ಚಾರಣೆಯ ವ್ಯತ್ಯಾಸದಿಂದ ಉಜ್ಜೈನ್ ಎಂದು ಆಗಿದೆ

ಪುಟ ೧೨೩ (ಶ್ರೀ ಶ್ರೀಗಳವರು)

"................ ರೇವಣಸಿದ್ಧರು .................... ಭುವನೈಕಮಲ್ಲ, (ಸೋಮೇಶ್ವರ) ನ ಸಹಾಯದಿಂದ ಉಜ್ಜಯಿನೀಪುರವನ್ನು ನಿರ್ಮಿಸಬೇಕೆಂತಲೂ, ಅಲ್ಲಿ ಸದ್ಧರ್ಮಸಿಂಹಾಸನವನ್ನು ರಚಿಸಬೇಕೆಂತಲೂ ಮರುಳಸಿದ್ಧನಿಗೆ ಉಪದೇಶಿಸಿ ..............."

ಪುಟ ೨೧೩. (ವಿಜಯಚರಿತ)

"ಮರುಳಸಿದ್ಧರೇ, ........... ನಿಮ್ಮಿಂದ ಹೊಸ ಉಜ್ಜಯಿನಿಯೇ ಸ್ಥಾಪನೆಯಾಗಲಿ. ಸದ್ಯಃ ನೀವು ಪೂರ್ವಕಲ್ಯಾಣದ ದೊರೆ ಸೋಮೇಶ.

ನಲ್ಲಿಗೆ ಹೋಗಬೇಕು. ...............ಆ ರಾಜನಿಂದ ಸಕಲ ಸಂಪತ್ಸಹಾಯಗಳನ್ನು ಪಡೆಯಿರಿ. "

" ಒಮ್ಮೆ ಕ್ಷೇತ್ರ ರಚನೆಯ ಕೆಲಸ ಮುಗಿಯಿತೆಂದರೆ ಆ ಮೇಲೆ ಓರುಂಗಲ್ಲಿಗೆ ಹೋಗಿರಿ. ಅಲ್ಲಿ ಕಾಕತೀಯ ವಂಶದ ಗಣಪತಿ ಅರಸು ಆಳುತ್ತಿದ್ದಾನೆ. ................ ಅಲ್ಲಿ ಆತನಿಂದ ನಿಮಗೆ ಬೇಕಾದಷ್ಟು ಸತ್ಕಾರ ಸಿಕ್ಕುವುದು. ಆ ವಿಪುಲ ದ್ರವ್ಯದಿಂದ ಈ ಹೊಸ ಉಜ್ಜಯಿನೀ ಪುರದಲ್ಲಿ ಮೂಲಪೀಠಾಚಾರ್ಯರಾದ ಶ್ರೀ ಮರುಳಾರಾಧ್ಯರ ಮಠ ಮಂದಿರಗಳನ್ನು ಕಟ್ಟಿರಿ."

ಶ್ರೀಗಳು ಸೋಮೇಶ್ವರನೊಬ್ಬನ ಸಹಾಯದಿಂದ ಉಜ್ಜಯಿನಿ ಕ್ಷೇತ್ರ ಮತ್ತು ಸಿಂಹಾಸನಗಳ ನಿರ್ಮಾಣವಾಗಬೇಕೆಂದು ಹೇಳಿದ್ದಾರೆ. ವಿಜಯ ಚರಿತವು ಸೋಮೇಶ್ವರನಿಂದ ಕ್ಷೇತ್ರದ ನಿರ್ಮಾಣವೂ, ಗಣಪತಿಯಿಂದ ಮಠ (ಸಿಂಹಾಸನ) ಮಂದಿರಗಳ ನಿರ್ಮಾಣವೂ ಆಗಬೇಕೆಂದು ಹೇಳುತ್ತದೆ.

ಪುಟ ೧೨೩ (ಶ್ರೀ ಶ್ರೀಗಳವರು)

" ಆದುದರಿಂದ ಅರಸು ಸೋಮೇಶ್ವರನು ಮರುಳಸಿದ್ಧರನ್ನು ಸದ್ಭಕ್ತಿಯಿಂದ ಸೇವಿಸಿದನು. ಅಷ್ಟಲ್ಲದೆ................ವೀರಶೈವನಾದನು. "

ಪುಟ ೨೧೪ (ವಿಜಯಚರಿತ)

" ಗುರುದೇವ, ತಮ್ಮ ಪಾದಧೂಳಿಯಿಂದ ನಮ್ಮ ವಂಶ ನಮ್ಮ ರಾಜ್ಯ ಪವಿತ್ರವಾಯಿತು. ಇನ್ನು ತಮ್ಮಿಂದ ಸದ್ಧರ್ಮ ಪ್ರಸಾರವಾಗಬೇಕು. ................. ಇದಕ್ಕಾಗಿ ಶ್ರೀಗುರುಗಳಿಗೆ ಯಾವ ಯಾವ ಅನುಕೂಲತೆಗಳಾಗಬೇಕೆಂದು ಅಪ್ಪಣೆ ಕೊಡಿಸಬೇಕು."

" ದೊರೆಯೆ, ಅರಸುಗಳಿಗೆ ಈ ಧರ್ಮ ಭಾವನೆ ಬಂದುದು ಭೂಲೋಕದ ಸುದೈವವೆ......................ನಿಮ್ಮ ರಾಜ್ಯದಲ್ಲಿ ಮೂಲಪೀಠ

ಉಜ್ಜಯಿನಿ ನಾಮದಿಂದ ಹೊಸದೊಂದು ಪತ್ತನವನ್ನೂ ಕಟ್ಟಿಸಬೇಕು, ಅಲ್ಲಿ ಶ್ರೀ ಮರುಳಾರಾಧ್ಯರ ತರುವಾಯ ೧೪ ಜನ ಗುರು ಪರಂಪರೆಯ ಮೂರ್ತಿಗಳನ್ನು ಸ್ಥಾಪನ ಮಾಡಿಸುವೆ."

ಶ್ರೀಗಳು ಸೋಮೇಶ್ವರನಿಗೆ ವೀರಶೈವ ದೀಕ್ಷೆಯಾಯಿತೆಂದು ಹೇಳುತ್ತಾರೆ. ಚರಿತದಲ್ಲಿ ಅವನಿಗೆ ದೀಕ್ಷೆಯಾದ ವಿಷಯ ಹೇಳಿಲ್ಲ.

ಪುಟ ೧೨೪. ( ಶ್ರೀ ಶ್ರೀಗಳವರು )

"ರೇವಣಸಿದ್ಧರ ಸಮ್ಮುಖದಲ್ಲಿ ನಡೆದ ರುದ್ರಮುನಿಯ ಮತ್ತು ಕೋಟಿಪಲ್ಲಾರಾಧ್ಯರ ಪಟ್ಟಾಧಿಕಾರ, ಚರಾಧಿಕಾರಿಗಳಿಗೆ"

ಪುಟ ೨೧೮. ( ವಿಜಯಚರಿತ )

"ಆಗ ರೇವಣಸಿದ್ಧರು ರಂಭಾಪುರಿ ಪೀಠಕ್ಕೆ ಅಧಿಕಾರಿಯನ್ನು ನೇಮಿಸಲು ತಮ್ಮ ಇಬ್ಬರು ಮಕ್ಕಳು ಸಹಿತವಾಗಿ ಬಂದರು. ಕೋಟಿಪಲ್ಲಾರಾಧ್ಯರಿಗೆ ಚರಪಟ್ಟವನ್ನು ಕಟ್ಟಿದರು. ಈ ಉತ್ಸವಕ್ಕೆ ............ ಬಂದಿದ್ದರು.

ಶ್ರೀಗಳು ಪಟ್ಟ, ಚರ ಎರಡು ಅಧಿಕಾರಿಗಳು ನಡೆದವೆಂದು ಹೇಳುತ್ತಾರೆ. ಚರಿತವು 'ಅಧಿಕಾರಿಯನ್ನು' ಎಂದು ಏಕವಚನವನ್ನು ಹೇಳಿದೆಯಲ್ಲದೆ ಚರಾಧಿಕಾರ ಮಾತ್ರವಾಯಿತೆಂದು ಹೇಳಿದೆ

ಪುಟ ೧೨೭. ( ಶ್ರೀ ಶ್ರೀಗಳವರು )

" ಕರ್ನಾಟಕದ ಈಗಿನ ಉಜ್ಜಯಿನಿಯಲ್ಲಿ ಮೆರೆಯುತ್ತಿರುವ ಸಿದ್ಧೇಶ್ವರ ಲಿಂಗವನ್ನು ರೇವಣಸಿದ್ಧರು ಸ್ಥಾಪಿಸಿದಂತೆಯೂ,"

ಪುಟ ೨೧೩ (ವಿಜಯಚರಿತ)

" ಆ ಮಠದಲ್ಲಿ ಮೂಲಕರ್ತರ ಮೂರ್ತಿಯಲ್ಲದೆ ಈವರೆಗಾದ ೧೪ ಜನ ಗುರುಗಳ ಮೂರ್ತಿಯನ್ನು ಕ್ರಮದಿಂದ ಸ್ಥಾಪನೆ ಮಾಡಿರಿ."

## ಪುಟ ೧೨೫.

" ಅಲ್ಲಿ ಶ್ರೀ ಮರುಳಾರಾಧ್ಯರ ತರುವಾಯ ೧೪ ಜನ ಗುರು ಪರಂಪರೆಯ ಮೂರ್ತಿಗಳನ್ನು ಸ್ಥಾಪನೆ ಮಾಡಿಸುವೆ. "

" ಗುರುಗಳ ಆದೇಶದಂತೆ ಮರುಳಾರಾಧ್ಯರ ಲಿಂಗವು ೧೪ ಜನ ಗುರುಗಳ ವಿಗ್ರಹಗಳೂ ಮಂದಿರದಲ್ಲಿ ಮೆರೆದವು."

" ಶ್ರೀ ರೇವಣಸಿದ್ಧರು ಸುಂದರ ಲಿಂಗವನ್ನು ತಂದರು................ ಅಂದೇ ಲಿಂಗ ಸ್ಥಾಪನೆ ಮಾಡಿದರು. (ಮರುಳಾರಾಧ್ಯಲಿಂಗ) ಆಗಲೇ ಎಲ್ಲಾ ಪೂರ್ವ ಗುರುಗಳ ಮೂರ್ತಿಸ್ಥಾಪನೆಯೂ ಆಯಿತು. "

ಶ್ರೀಗಳು ಹೇಳುವಂತೆ ಕರ್ನಾಟಕ ಉಜ್ಜಯಿನಿಯಲ್ಲಿ ರೇವಣಸಿದ್ಧರು ಸಿದ್ಧೇಶ್ವರ ಲಿಂಗವನ್ನು ಸ್ಥಾಪಿಸಿಲ್ಲವಾಗಿಯೂ, ಅಲ್ಲಿ ಸ್ಥಾಪಿಸಲ್ಪಟ್ಟಿದುವುದು ಮರುಳಾರಾಧ್ಯಲಿಂಗವೆಂದೂ ಚರಿತವು ಹೇಳುತ್ತದೆ.

## ಪುಟ ೧೩೦. (ಶ್ರೀ ಶ್ರೀಗಳವರು)

"..................ಹರಪನಹಳ್ಳಿಗೆ ದಯಮಾಡಿಸಿದನು. ಅಲ್ಲಿ ಆಗ ಚಂದ್ರಕಾಂತನೆಂಬ ಅರಸು ರಾಜ್ಯವಾಳುತ್ತಿದ್ದನು. ... ..................ಆಗ ಮರುಳಸಿದ್ಧನು ಅರಸನಿಗೆ ಚಂದ್ರಶೇಖರನೆಂಬ ಹೆಸರಿಟ್ಟು ಅವನಿಗೂ ಅವನ ಪರಿವಾರದವರಿಗೂ .................. ವೀರಶೈವ ಮತದಲ್ಲ ಸೇರಿಸಿದನು"

## ಪುಟ ೨೧೮. (ವಿಜಯಚರಿತ)

"ಹರಪುರಿಯ ಚಂದ್ರಕಾಂತರಾಜ ಜೈನಧರ್ಮದಲ್ಲಿದ್ದ.................. .......... ಅವನು ಶ್ರೀ ಮರುಳಸಿದ್ಧರಲ್ಲಿ ಬಂದು ತನ್ನನ್ನು ಉದ್ಧರಿಸಲು ಕೇಳಿಕೊಂಡ ಗುರುಗಳು ಅವನಿಗೆ ವೀರಶೈವ....... ................ ದೀಕ್ಷೆಯನ್ನು ಕೊಟ್ಟರು."

ಚರಿತದಲ್ಲಿ ರಾಜನಿಗೆ ಚಂದ್ರಶೇಖರನೆಂದು ಹೆಸರಿಟ್ಟುದನ್ನು ಹೇಳಿಯೇ ಇಲ್ಲ.

## ಪುಟ ೧೩೦. (ಶ್ರೀ ಶ್ರೀಗಳವರು)

"ಹರಪನಹಳ್ಳಿಯಲ್ಲಿದ್ದ ಜೈನರಲ್ಲಿಯ ಚತುರ್ಥರೆಂಬುವ ವರ್ಗದವರೆಲ್ಲರೂ ಆದಿ ಮರುಳಸಿದ್ಧನಿಂದ ವೀರಶೈವ ಮತಕ್ಕೆ ಸೇರಿಸಲ್ಪಟ್ಟ ಮೇಲೆ ತಮ್ಮ ಮುಂದಿನ ನಡತೆಯ ಬಗ್ಗೆ ಕೇಳಿಕೊಂಡರು. ಮರುಳಸಿದ್ಧನು ಅವರೆಲ್ಲರನ್ನೂ ಸಂತೈಸಿ ವೀರಶೈವರಲ್ಲಿರುವ ಪಂಚಮಸಾಲೆಯವರೊಡನೆ ನೀವು ಇನ್ನು ಮುಂದೆ ಸಹೋದರರಂತೆ ನಡೆದುಕೊಳ್ಳಿರಿ. ಈ ಉದ್ದೇಶದಿಂದ ನಿಮಗೆ ಸೋದರರು ಎಂಬ ಹೆಸರು ಶಾಶ್ವತವಾಗಲಿ ಎಂದು ಹರಸಿ ಅನುಗ್ರಹಿಸಿದನು."

## ಪುಟ ೨೧೮. (ವಿಜಯಚರಿತ)

"..................ನಾ ಮುಂದು ತಾ ಮುಂದು ಬಂದು ಶಿವದೀಕ್ಷೆ ಪಡೆದರು. ಬಹುಶಃ ಎಲ್ಲಾ ಜೈನರೂ ಚತುರ್ಥ ಪಂಗಡದವರು. ಅವರೀಗ ವೀರಶೈವರಾಗಿ ಪಂಚಮಸಾಲೆಯವರಿಗೆ ಸೋದರರೆಂದು ಅಭಿಮಾನದಿಂದ ಹೇಳಹತ್ತಿದರು."

ತಮ್ಮ ನಡತೆಯ ಬಗ್ಗೆ ಕೇಳಿಕೊಂಡರೆಂದು ಚರಿತ್ರೆಯಲ್ಲಿ ಹೇಳಿಲ್ಲ. ಚತುರ್ಥರಿಗೆ ಸೋದರರೆಂದು ಹೆಸರು ಬರಲು ಕೊಟ್ಟಿರುವ ಕಾರಣವು ಚರಿತದಲ್ಲಿ ಒಂದು ವಿಧವಾಗಿದ್ದರೆ, ಶ್ರೀಗಳು ಮತ್ತೊಂದು ವಿಧವಾಗಿ ಹೇಳಿದ್ದಾರೆ. ಚರಿತವು ಹೇಳುವಂತೆ ಅವರೀಗ = ಚತುರ್ಥರೀಗ, ಪಂಚಮಸಾಲೆಯವರಿಗೆ = ಪಂಚಮಸಾಲೆಯವರನ್ನು. ಅಭಿಮಾನದಿಂದ = ಹೆಮ್ಮೆಯಿಂದ, ಸೋದರರು ಎಂದು ಹೇಳಹತ್ತಿದರು. ಹೇಳಹತ್ತಿದರು ಇದ, ಇಲ್ಲಿ ಕ್ರಿಯಾಪದ. ಇದಕ್ಕೆ ಕರ್ತೃಪದ ಅವರು (ಚತುರ್ಥರು.) ಪಂಚಮಸಾಲೆಯವರಿಗೆ ಕರ್ಮಪದ. ತಾತ್ಪರ್ಯ:— ಲಿಂಗಧಾರಿಗಳಾದ ಮೇಲೆ ಚತುರ್ಥರು ಪಂಚಮ ಸಾಲೆಯವರನ್ನು ಸೋದರರೆಂದು ಕರೆದರು. ಕರೆದವರು

ಚತುರ್ಥರು. ಕರೆಸಿಕೊಂಡವರು ಪಂಚಮಸಾಲೆಯವರು. ಇಲ್ಲಿ ಸೋದರ ಶಬ್ದವು ಚತುರ್ಥರಿಂದ ಪಂಚಮಸಾಲೆಯುವರನ್ನು ಸಂಬೋಧಿಸಲು ಉಪಯೋಗಿಸಲ್ಪಟ್ಟಿದೆ. ಯಾರಿಗಾಗಿ ಈ ಶಬ್ದವು ಉಯೆಸೋಗಿಸಲ್ಪಟ್ಟಿತೋ ಅವರಿಗೆ ಆ ಹೆಸರು ಬರುವುದು ಸಹಜ. ಉಪಯೋಗಿಸಿದವರಿಗೆ ಬರಲು ಸಾಧ್ಯವಿಲ್ಲ. ಆದ್ದರಿಂದ ಚತುರ್ಥರಿಗೆ ಸೋದರರೆಂಬ ಹೆಸರು ಬಂದಿತೆಂದು ಹೇಳುವುದು ಮತ್ತು ಅದಕ್ಕೆ ಕೊಟ್ಟಿರುವ ಕಾರಣವು ಸಮಂಜಸವಾಗಿಲ್ಲ. ಈ ಬಗ್ಗೆ ಶ್ರೀಗಳಿತ್ತಿರುವ ಕಾರಣವು ಯುಕ್ತಿ ಯುಕ್ತವಾಗಿಲ್ಲ ಸಹೋದರ ಎಂದರೆ ಅಣ್ಣ ತಮ್ಮ ಇಬ್ಬರ ಬೋಧವೂ ಆಗುತ್ತದೆ. ಮರುಳಸಿದ್ಧನು ಈರ್ವರಿಗೂ ನೀವು ಪರಸ್ಪರ ಸಹೋದರರಂತೆ ಇರಿ ಎಂದು ಹೇಳಿರಬೇಕು. ಇಷ್ಟು ಮಾತ್ರಕ್ಕೆ ಈರ್ವರಿಗಾಗಲೀ ಅಥವಾ ಒಬ್ಬರಿಗೇ ಆಗಲಿ ಆ ಹೆಸರು ಬಂದಿತೆಂದು ಹೇಳುವುದು ಸಮಂಜಸವಾಗಿ ತೋರುವುದಿಲ್ಲ ಒಂದು ವೇಳೆ ಬರುವುದಾದರೆ ಈರ್ವರಿಗೂ ಬರಬೇಕು. ಈರ್ವರೂ ತಮ್ಮ ಹಿಂದಿನ ಜಾತಿಗಳನ್ನು ಬಿಟ್ಟು ಹೊಸ ಜಾತಿಗೆ ಸೇರಿದ ಮೇಲೆ ಈರ್ವರಿಗೂ ಆ ಹೊಸ ಜಾತಿಯ ಹೆಸರು ಬರಬೇಕಾದುದು ನ್ಯಾಯವಾಗಿರುವಾಗ ಪಂಚಮಸಾಲೆಯವರು ಲಿಂಗಧಾರಿಗಳಾದ ಮೇಲೂ ಪಂಚಮ ಸಾಲೆಯವರಾಗಿಯೇ ಉಳಿದು ಚತುರ್ಥರು ಮಾತ್ರ ಸೋದರರೆಂದು ನೂತನಾಭಿಧಾನವನ್ನು ಪಡೆದರೆಂದು ಹೇಳುವುದು ಅಸಂಬದ್ಧವಾದುದು. ಈ ಸೋದರ ಶಬ್ದವು ವೀರಶೈವರ ಯಾವ ಪಂಗಡಕ್ಕಾಗಿ ಉಪಯೋಗಿಸಲ್ಪಟ್ಟಿದೆಯೋ ಆ ಪಂಗಡಕ್ಕೆ ಇದು ಎಂದೂ ಎಲ್ಲಿಯೂ ಕೇಳದ ಕಾಣದ ಹೊಸ ಶಬ್ದವಾಗಿದೆ. ಆ ಪಂಗಡಕ್ಕೆ ಲೋಕದಲ್ಲಿ ರೂಢಿಯಲ್ಲಿರುವ "ಸಾದ" ಎಂಬ ಪದದ ಆಧಾರದ ಮೇಲೆ ತಮ್ಮ ನಿಗೂಢವಾದ ಉದ್ದೇಶ ಸಾಧನೆಗಾಗಿ ಈ ಕಲ್ಪನೆಯನ್ನು ಮಾಡಲಾಗಿದೆಯೆಂದು ಹೇಳಬಹುದಾಗಿದೆ.

ಪುಟ ೧೩೦, ೧೩೧. (ಶ್ರೀ ಶ್ರೀಗಳವರು)

"ಸದ್ಭಕ್ತರಾದ ಈ ಸಾದರರ ಧರ್ಮಕಾರ್ಯಗಳ ಆಚರಣೆಗಾಗಿ ಮರುಳಸಿದ್ಧನು ಹರಪನಹಳ್ಳಿಯಲ್ಲಿ ಮಠವನ್ನು ಸ್ಥಾಪಿಸಿ ಸ್ಥಿರಪಟ್ಟಾಧಿಕಾರಿ

ಯಾದ ಒಬ್ಬ ಮಾಹೇಶ್ವರ ಗುರುಗಳನ್ನು ನೇಮಿಸಿದನೆಂದೂ ಕಾವ್ಯ ಹೇಳು
ತ್ತದೆ. "

ಪುಟ ೨೧೪. ( ವಿಜಯಚರಿತ )

" ಮರುಳಸಿದ್ಧರು ಹರಪನಹಳ್ಳಿಯಲ್ಲಿ ಗುರು ಮಠವನ್ನು ಸ್ಥಾಪಿಸಿ
ಅದಕ್ಕೆ ಪಟ್ಟಾಧಿಕಾರಿಯನ್ನು ನೇಮಿಸಿದರು. "

ಚರಿತವೂ ಮಠವನ್ನು ಸ್ಥಾಪಿಸಿರುವುದಾಗಿ ಹೇಳಿದ್ದರೂ, ಆ ಮಠವು
ಮತ್ತು ಅದರ ಅಧಿಕಾರಿಯು ಸಾದರರ ಧರ್ಮಕಾರ್ಯಗಳ ಆಚರಣೆಗಾಗಿ
ಎಂದು ಹೇಳಿಲ್ಲ. ಒಂದು ವೇಳೆ ಹಾಗೆ ಮರುಳಸಿದ್ಧನು ಹೇಳಿರುವುದಾದರೆ
ಯಾವ ಪಂಚಮಸಾಲಿ ಮತ್ತು ಸಾದರರಲ್ಲಿ ಸಹೋದರ ಭಾವವಿರಬೇಕೆಂದು
ಹರಸಿದನೋ ಆ ಪಂಚಮಸಾಲಿ ಮತ್ತು ಸಾದರರಲ್ಲಿ ತಾನೇ ಭೇದಬೀಜ
ವನ್ನು ಬಿತ್ತಿದನೆಂದು ಹೇಳಬೇಕಾಗುತ್ತದೆ. ಏಕೆಂದರೆ ಈ ಎರಡು ಪಂಗಡ
ದವರೂ ಮರುಳಸಿದ್ಧನೊಬ್ಬನ ಶಿಷ್ಯರಾಗಿರುವರಾಗ ಗುರುವಾದ ಮರುಳ
ಸಿದ್ಧನು ಪಂಚಮಸಾಲೆಯವರನ್ನು ತನ್ನ ಶಿಷ್ಯತ್ವದಲ್ಲಿ ಉಳಿಸಿಕೊಂಡು
ಸಾದರರಿಗೆ ಪ್ರತ್ಯೇಕ ಗುರುವನ್ನು ಮಾಡಿಕೊಟ್ಟನೆಂದರೆ ಸಹೋದರರಾಗಿರಿ
ಎಂದು ಉಪಚಾರಕ್ಕೆ ಹೇಳಿದನೆಂದು ಭಾವಿಸ ಬೇಕಾಗುತ್ತದೆ. ಈಗಲೂ
ಈ ಪಂಚಮಸಾಲಿ ಈ ಗುರುಗಳು ಸಾದರರ ಬಗ್ಗೆ ಖಾಲಿ ಉಪಚಾರದ
ಮಾತಿನಿಂದ ಸುಲಿಗೆ ಮಾಡಲೆಂಬುದು ಮರುಳಸಿದ್ಧನ ಇಚ್ಛೆಯಾಗಿರಬೇಕು.
ಆದರೆ ಆ ಮಹಾತ್ಮನಲ್ಲಿ ಈ ರೀತಿ ತಮ್ಮಲ್ಲಿರುವ ದುರ್ನಡತೆಯ ಆರೋಪ
ವನ್ನು ಹೊರಿಸಲು ಯತ್ನಿಸುವುದು ನೀಚತನದ ಪರಮಾವಧಿಯೆಂದು ಹೇಳ
ಬೇಕಾಗುತ್ತದೆ.

ಪುಟ ೧೩೧. ( ಶ್ರೀ ಶ್ರೀಗಳವರು )

" ರೇವಣಸಿದ್ಧರು ....... ............... ಪಟ್ಟಾಧಿಕಾರಕ್ಕೆ ಅಗಮಿಸು
ವಂತೆ ಮರುಳಸಿದ್ಧರಿಗೆ ಬಿನ್ನಪವನ್ನು ಕಳುಹಿಸುವರು. "

ಪುಟ ೨೧೮. (ವಿಜಯಚರಿತ)

" ಈ ಉತ್ಸವಕ್ಕೆ ಉಜ್ಜಯಿನೀ ಪೀಠದ ಮರುಳಸಿದ್ಧರೂ..........
...............ಬಂದಿದ್ದರು."

ಬಿನ್ನಪವನ್ನು ಕಳುಹಿಸಿದ್ದರೆಂಬುದನ್ನು ವಿಜಯಚರಿತವು ಹೇಳಿಲ್ಲ.

ಪುಟ ೧೩೧. (ಶ್ರೀ ಶ್ರೀಗಳವರು)

" ಆ ಸಮಯದಲ್ಲಿ ಹೂಲಿಯ ಗುರುವರ ಜ್ಞಾನಶಕ್ತೀಶ್ವರನೂ
.............. ........ದಯಮಾಡಿಸಿರುವರು."

ಪುಟ ೨೧೩. (ವಿಜಯಚರಿತ)

" ಮುಂದೆ ಹೂಲಿಯ ಮುಕ್ತಿಮುನಿಯ ಸಂಗಡ ವಿಚಾರ ಮಾಡಿರಿ."

ಪುಟ ೨೧೪. (ವಿಜಯಚರಿತ)

" ಆ ಕಲ್ಯಾಣ ಸಮೀಪದ ...... .............. ಸಿದ್ಧಾಶ್ರಮವೊಂದಿದೆ.
ಅಲ್ಲಿ ................... ಜ್ಞಾನಶಕ್ತಿ ಮುನಿಗಳಿರುತ್ತಿದ್ದರು." " ಭೂಪಾಲ
ಜ್ಞಾನಮುನಿಗಳಿಗೆ ................ ವಂದಿಸಿದ "

" ಜ್ಞಾನಶಕ್ತಿ ಮುನಿಗಳು ಅಪ್ಪಣೆ ಕೊಡಿಸಿದರು."

ಪುಟ ೨೧೫. (ವಿಜಯಚರಿತ)

" ಶ್ರೀ ಆತ್ಮಜ್ಞಾನಿಶಕ್ತಿ ಮುನೀಶ್ವರರೂ ......... ...........ಲಿಂಗ
ಸ್ಥಾಪನೆ ಮಾಡಿದರು "

ಹೂಲಿಯ ಜ್ಞಾನಶಕ್ತೀಶ್ವರ, ಹೂಲಿಯ ಮುಕ್ತಿಮುನಿ, ಜ್ಞಾನಶಕ್ತಿ
ಮುನೀಶ್ವರ, ಜ್ಞಾನಮುನಿ, ಜ್ಞಾನಶಕ್ತಿಮುನಿ, ಶ್ರೀ ಆತ್ಮಜ್ಞಾನಿ ಶಕ್ತಿಮುನೀ
ಶ್ವರ ಈ ಎಲ್ಲಾ ಪದಗಳೂ ಏಕ ವ್ಯಕ್ತಿ ವಾಚಕಗಳಾಗಿ ಉಪಯೋಗಿಸ
ಲ್ಪಟ್ಟವೆ. ಈ ಅವ್ಯವಸ್ಥೆಯಿಂದ ಭಿನ್ನಾರ್ಥ ಕಲ್ಪನೆಗೆ ಅವಕಾಶವಾಗಿದೆ.

## ಪುಟ ೧೩೨. (ಶ್ರೀ ಶ್ರೀಗಳವರು)

" ಹೂಲಿಯ ಸಿದ್ಧನಂಜೇಶನ ಗುರುಕುಲದಲ್ಲಿ.................................. ಮರುಳಸಿದ್ಧ ಎಂಬುವನನ್ನು ಶಿಷ್ಯನನ್ನಾಗಿ ಗ್ರಹಿಸಿ ತನ್ನ ಉತ್ತರಾಧಿಕಾರವನ್ನು ಗ್ರಹಿಸಿದನು."

## ಪುಟ ೨೧೯. (ವಿಜಯಚರಿತ)

" ಹೂಲಿಯ ಸಿದ್ಧನಂಜೇಶ್ವರ ವಂಶದ ಮರುಳಸಿದ್ಧಾರ್ಯರಿಗೆ ಪಟ್ಟವನ್ನು ಕೊಟ್ಟು ಬಯಲಾದರು."

ಇಲ್ಲಿ ಮರುಳಸಿದ್ಧನು ಸಿದ್ಧ ನಂಜೇಶನ ಗುರುಕುಲದ ಅಂತೇವಾಸಿ ಎಂದು ಶ್ರೀ ವಾಗೀಶ ಪಂಡಿತಾರಾಧ್ಯರೂ, ವಂಶೀಕನೆಂದು ವಿಜಯ ಚರಿತವೂ, ಹೇಳುತ್ತಿರುವುದು ಪರಸ್ಪರ ವಿರುದ್ಧಾಭಿಪ್ರಾಯಕ್ಕೆ ಅವಕಾಶವನ್ನು ಕೊಟ್ಟಿದೆ.

## ಪುಟ ೧೩೩. (ಶ್ರೀ ಶ್ರೀಗಳವರು)

" ದೊಡ್ಡವನಾದರೂ ಗೋಪಾಲನೆ ಮುಂತಾದ ತರಳ ಮರುಳಾಟದಿಂದ ...................... ಗೌಡ ದಂಪತಿಗಳಿಗೆ ಕೆಲದಿನ ಆನಂದವನ್ನೀಯುತ್ತಾ ...................."

## ಪುಟ ೨೨೦. (ವಿಜಯಚರಿತ)

" ಕೂಸಿನ ಬಾಲಲೀಲೆ ಎಲ್ಲರನ್ನೂ ಸಂತೋಷಪಡಿಸಿತು.

ಗೋಪಾಲನೆ (ದನ ಕಾಯುವುದು)ಯನ್ನು ಚರಿತದಲ್ಲಿ ಹೇಳಿಲ್ಲ.

## ಪುಟ ೧೩೫. (ಶ್ರೀ ಶ್ರೀಗಳವರು)

"................... ಗಜಪತಿ ಮಹೇಂದ್ರ ಎಂಬ ಅರಸು ಉಜ್ಜಯಿನಿಗೆ ಬಂದು ಮರುಳಸಿದ್ಧೇಶ್ವರ ಮಂದಿರದ ಮುಂದುಗಡೆ ಒಂದು ಮಂಟಪವನ್ನು

ಕಟ್ಟಿಸಿಕೊಟ್ಟು ಆದರ ಬಳಿಯಲ್ಲಿ ಭುವನೈಕಮಲ್ಲ (ಸೋಮೇಶ್ವರ, ಕಲ್ಯಾಣ ದರಸ) ನ ಶಿಲಾ ವಿಗ್ರಹವನ್ನು ಸ್ಥಾಪಿಸಿದನು."

ಪುಟ ೨೨೧. (ವಿಜಯಚರಿತ)

" ಗಜಪತಿ ಮಹೇಂದ್ರ ಸಿದ್ಧಮಲ್ಲ ಗುರುಗಳ ಆದೇಶದಂತೆ ಮರುಳ ಸಿದ್ಧಮಂದಿರದ ಎದುರಿಗೆ ಮಂಟಪವನ್ನು ಕಟ್ಟಿಸಿದ."

ಚರಿತದಲ್ಲಿ ಹೇಳದ ಸೋಮೇಶ್ವರನ ಶಿಲಾ ವಿಗ್ರಹದ ಸ್ಥಾಪನೆಯನ್ನು ಶ್ರೀ ವಾಗೀಶ ಪಂಡಿತಾರಾಧ್ಯರು ಹೇಳಿರುತ್ತಾರೆ.

ಪುಟ ೧೩೭. (ಶ್ರೀ ಶ್ರೀಗಳವರು)

" ಅರಸನ ಇಚ್ಛೆಯಂತೆ ಹಂಪೆಯಲ್ಲಿ ಹಿರಿಯ ಮಠವನ್ನು ಸ್ಥಾಪಿಸಿ ಅಲ್ಲಿ ಮಳಿಯ ಮಲ್ಲೇಶ್ವರ ಎಂಬ ತಮ್ಮೊಬ್ಬರ ಶಿಷ್ಯರಿಗೆ ಪಟ್ಟಾಧಿಕಾರವನ್ನು ಕೊಟ್ಟರು."

ಪುಟ ೨೨೧. (ವಿಜಯಚರಿತ)

" ಆಗ ಅರಸು ಗುರುವಿನ ಹೆಸರಿನಿಂದ ಹಿರಿಯ ಮಠವನ್ನು ಕಟ್ಟಿಸಿ ............ ....ಕೊಟ್ಟನು. ಆ ಮಠಕ್ಕೆ ಯೋಗಿಮಳಿಯ ಮಲ್ಲೇಶ್ವರರು ಗುರುಗಳಾಗಿ ರಾಜನಿಗೂ ಕುಲಗುರುಗಳಾದರು.

ಚರಿತದಲ್ಲಿಯ " ರಾಜನಿಗೂ ಕುಲಗುರುಗಳಾದರು " ಈ ವಾಕ್ಯವು ಮಳಿಯ ಮಲ್ಲೇಶ್ವರ ಎಂದರೆ ಸಿದ್ಧಮಲ್ಲಯೋಗಿಗಳೇ ಎಂಬುದನ್ನು ಸ್ಪಷ್ಟ ಪಡಿಸುತ್ತದೆ. ಬೇರೆಯ ಮಳಿಯ ಮಲ್ಲೇಶ್ವರ ಎಂಬುದನ್ನು ಚರಿತದಲ್ಲಿ ಹೇಳಿಲ್ಲ. ಮತ್ತು ಚರಿತದ ಅಭಿಪ್ರಾಯದಂತೆ ಸಿದ್ಧಮಲ್ಲ ಯೋಗಿಯೇ ಹಂಪೆಯ ಹಿರಿಯ ಮಠಕ್ಕೆ ಅಧಿಕಾರಿಯಾದರೆ ಉಜ್ಜಯಿನೀ ಪೀಠ ಅಧಿಕಾರಿ ಯಿಲ್ಲದೆ ಖಾಲಿ ಬಿದ್ದಂತಾಗುತ್ತದೆ

ಈ ವರೆಗೆ ಶ್ರೀಗಳವರ ಲೇಖನ ಭಾಗಗಳಿಗೂ, ಚರಿತದ ಗದ್ಯಾನು ವಾದದ ಭಾಗಗಳಿಗೂ ಇರುವ ಅಂತರವನ್ನು ವಿವರಿಸಿದ್ದೇನೆ. ಈ ಅಂತರಕ್ಕೆ

ಶ್ರೀಗಳವರೇ ಕಾರಣರೆ, ಗದ್ಯಾನುವಾದಕರೇ ಕಾರಣರೇ ? ಎಂಬುದನ್ನು ಹೇಳುವುದು ಕಷ್ಟವಾಗಿದೆ. ಆದರೂ ಪದ್ಯ ಚರಿತವು ಪ್ರಕಟವಿಲ್ಲದಿರುವಾಗ ವಾಚಕರು ಗದ್ಯಾನುವಾದವನ್ನೇ ಬಲವಾಗಿ ಆಶ್ರಯಿಸಬೇಕಾಗುತ್ತದೆಯಾಗಿ ಅನುವಾದಕರು ಈ ಬಗ್ಗೆ ಲೋಪವನ್ನು ಮಾಡಿದ್ದಾರೆಂದು ಹೇಳುವುದು ಸಾಹಸದ ಮಾತಾಗುತ್ತದೆ. ಶ್ರೀಗಳು ಚರಿತದಲ್ಲಿ ಬರೆದ ಅನೇಕ ವಿಷಯಗಳನ್ನು ತಮ್ಮ ಲೇಖನದಲ್ಲಿ ಉಲ್ಲೇಖಿಸಿರುವುದರಿಂದ ಪದ್ಯಕಾವ್ಯವು ಪ್ರಕಟವಾಗುವುದರೊಳಗೆ ಅಲ್ಲಿ ಇವುಗಳಿಗೆ ಸ್ಥಾನ ದೊರೆಯುತ್ತದೆಯೆಂದೂ ಊಹಿಸಬಹುದಾಗಿದೆ.

ಇನ್ನು ಮುಂದೆ ಪ್ರತ್ಯೇಕವಾಗಿ ಮರುಳಾರಾಧ್ಯ ವಿಜಯಚರಿತ (ಗದ್ಯಾನುವಾದ) ವನ್ನು ವಿಮರ್ಶಿಸುತ್ತೇನೆ. ಇದನ್ನು ರಚಿಸಿದವನು ಹೂವಲ್ಲಿ ಪಂಚವಣ್ಣಿಗೆಯ ನಂದೀಶನೆಂದು ಹೇಳಲಾಗಿದೆ. ಸಿದ್ಧನಂಜೇಶನ ಹೆಸರನ್ನು ಉಪಯೋಗಿಸಿರುವುದರಿಂದ ಕರ್ನಾಟಕ ಕವಿಚರಿತೆಯಲ್ಲಿಗುವ ನಂದೀಶನೇ ಎಂಬುದು ನಿಸ್ಸಂದೇಹ ಇವನಿಗೆ ವಿಶೇಷಣವಾಗಿ ಗದ್ಯಾನುವಾದದ ಕೊನೆಯಲ್ಲಿ ಉಲ್ಲೇಖಿಸಿರುವ (ಸುಶಾಂತ ಬಂಧುರ ಸಂಸ್ಕೃತ ಪ್ರಾಕೃತೋಭಯ ಕವಿತ್ವಾಯಿ ವರ ಶಿರೋಮಣಿಯೆನಿಪ್ಪ ಶ್ರೀ ಪೂವಲ್ಲಿ ಪಂಚವಣ್ಣಿಗೆಯ ನಂದೀಶ ಶಿವಕವಿ) "ಪೂವಲ್ಲಿ ಪಂಚವಣ್ಣಿಗೆಯ" ಎಂಬ ಪ್ರಶಸ್ತಿಯು ಆಗಂತುಕವಾದುದಾಗಿದೆ. ಏಕೆಂದರೆ :- ಈ ನಂದೀಶನು ಚೆನ್ನವೀರಾಂಬೆಯ ಪತಿ, ಪೂವಲ್ಲಿ ಪಂಚವಣ್ಣಿಗೆಯ ಸಿದ್ಧನಂಜೇಶನ ಶಿಷ್ಯನಾದ, ಗುರುರಾಜ ಚಾರಿತ್ರಕರ್ತನಾದ, ನವನಂದಿ ಸಿಂಹಾಸನದ ಸಿದ್ಧನಂಜೇಶ ಕವಿಯ ಮಿತ್ರನೆಂದು ಆತನ ರಾಘವಾಂಕ ಕಾವ್ಯದ "ಸುಶಾಂತ ಬಂಧುರ ಸಂಸ್ಕೃತ ಪ್ರಾಕೃತೋಭಯ ಕವಿತ್ವಾಯಿಲರ ಶಿರೋಮಣಿಯೆನಿಪ ನಂದೀಶ ಕವಿಯ ಕೃಪೆಯುಂ ಪ್ರಕಟಮುಂ ಮಾಡಿದೆಂ" ಈ ವಾಕ್ಯದಿಂದ ಸ್ಪಷ್ಟವಾಗುತ್ತದೆ. ರಾಘವಾಂಕ ಕಾವ್ಯಕರ್ತನಾದ ಸಿದ್ಧನಂಜೇಶ ಕವಿಯು ತಾನು ಪೂವಲ್ಲಿ ಪಂಚವಣ್ಣಿಗೆಯ ಸಿದ್ಧನಂಜೇಶನ ಶಿಷ್ಯನಾಗಿದ್ದರೂ, ಪೂವಲ್ಲಿ ಪಂಚವಣ್ಣಿಗೆಯೆಂಬ ವಿಶೇಷಣವನ್ನು ಉಪಯೋಗಿಸಿಕೊಳ್ಳದೆ ತಾನು ನವನಂದಿ ಸಿಂಹಾಸನ ಸಿದ್ಧನಂಜೇಶನೆಂದು ಹೇಳಿಕೊಂಡಿರುತ್ತಾನೆ.

" ಧಾತ್ರಿಗುಪ್ತಮುವೆನಿಪಪೂವಲ್ಲಿಪುರಕಧಿಪ ।
ಚಿತ್ರುಗುರು ಪಂಚವಣ್ಣಿಗೆ ಸಿದ್ಧನಂಜೇಶ ।
ಪುತ್ರಸತ್ಕವಿಕುಲಸ್ತೊತ್ರ ಶ್ರೀ ಶೈಲ ನೈರುತ್ಯ ಭಾಗದೊಳುಪ್ಪುವ ॥
ಕ್ಷೇತ್ರು ನವನಂದಿಮಂಡಲದ ಸಿಂಹಾಸನಕೇ ।
ಛತ್ರು ಶಿವಕವಿ ಸಿದ್ಧನಂಜೇಶಕೃತದಿವ್ಯ ।
ಸ್ತೋತ್ರ ಗುರುರಾಜ ಚಾರಿತ್ರದೊಳು ........................ ॥

ಈ ಎರಡು ಜನ ಸಿದ್ಧನಂಜೇಶರಲ್ಲಿ ಒಬ್ಬ ಗುರು. ಇನ್ನೊಬ್ಬ ಶಿಷ್ಯ. ಗುರುವಿಗೆ ಪೂವಲ್ಲಿ ಪಂಚವಣ್ಣಿಗೆಯೆಂಬ ವಿಶೇಷಣ. ಈ ವಿಶೇಷಣ ಶಿಷ್ಯ ಸಿದ್ಧನಂಜೇಶನಿಗಿರದೆ, ನವನಂದಿಮಂಡಲದ ಸಿಂಹಾಸನ ಎಂದಿದೆ. ಏನೂ ಸಂಬಂಧವಿಲ್ಲದ ನಂದೀಶ ಕವಿಯು ಪೂವಲ್ಲಿ ಪಂಚವಣ್ಣಿಗೆ ಎಂಬುದನ್ನು ತಾನಾಗಿಯೇ ಬರೆದುಕೊಳ್ಳುವುದು ಸಾಧ್ಯವಲ್ಲ. ಉಚಿತವೂ ಅಲ್ಲ. ಹಾಗೂ ಯುಕ್ತಿ ಸಂಗತವೂ ಅಲ್ಲ. ಹಾಗೆಯೇ ಇವನ ಹೆಸರಿನ ಮುಂದೆ ಇರುವ ಶಿವಕವಿ ಎಂಬ ಪದವೂ ನವನಂದಿ ಸಿಂಹಾಸನದ ಸಿದ್ಧನಂಜೇಶನಿಂದ ಅಪಹರಿಸಲ್ಪಟ್ಟುದಾಗಿದೆ.

ಈ ನಂದೀಶನು ಬರೆದಿರುವನೆಂದು ಹೇಳಲಾಗಿರುವ ಈ ಚರಿತದ ಮೊದಲನೆಯ ಸಂಧಿಯ ಪೀಠಿಕಾ ಭಾಗದಲ್ಲಿರುವ ಶ್ರೀ ಸಿದ್ದನಂಜನು ತನ್ನ ಪ್ರಿಯಸತಿ ಚನ್ನವೀರಾಂಬಿಕೆಗೆ ಬೋಧಿಸಿದ ಮರುಳಾರಾಧ್ಯರ ಚರಿತೆಯನ್ನು ತಾನು ಕಾವ್ಯರೂಪದಲ್ಲಿ ಬರೆದಿರುವುದಾಗಿ ಹೇಳುವ ವಾಕ್ಯವೂ ಸಹ ನವ ನಂದಿ ಸಿಂಹಾಸನದ ಸಿದ್ಧನಂಜೇಶ ಕವಿಯ ಗುರ ರಾಜ ಚಾರಿತ್ರದಿಂದ ಅಪ ಹರಿಸಲ್ಪಟ್ಟುದಾಗಿದೆ. ಏಕೆಂದರೆ, ಆ ಸಿದ್ಧ ನಂಜೇಶನು ತನ್ನ ಗುರುರಾಜ ಚಾರಿತ್ರದಲ್ಲಿ ತನ್ನ ಗುರು ಪೂವಲ್ಲಿ ಪಂಚವಣ್ಣಿಗೆಯ ಸಿದ್ಧನಂಜೇಶನು ತನ್ನ ಸತಿ ಚನ್ನವೀರಾಂಬೆಗೆ ಹೇಳಿದಂತೆಯೂ, ಅದನ್ನೇ ತಾನು ಇಲ್ಲಿ ಬರೆಯುವು ದಾಗಿಯೂ ಹೇಳಿರುತ್ತಾನೆ.

"ಈ ಕಾವ್ಯದ ಮುಖ್ಯಹೃದಯವೆಂದರೆ ಪರಶಿವನು ಪಾರ್ವತಿಗೆ ಹೇಳಿದ ಪಾಶುಪತತಂತ್ರದಲ್ಲಿಯ ಸುಪ್ರಬೋಧಾಗಮದ ಮರುಳಾರಾಧ್ಯರ ಚಾರಿತ್ರ

ಅದನ್ನೇ ಸರಸ ಲಕ್ಷಣ ಸಹಿತವಾದ ಕಾವ್ಯರೂಪದಲ್ಲಿ ಹೇಳಿದಿರುವುದಾಗಿ " ಹೇಳಲಾಗಿದೆ. ಐತಿಹಾಸಿಕ ದೃಷ್ಟಿಯಲ್ಲಿ ಈ ಪರಶಿವ ಪಾರ್ವತೀ ಸಂವಾದ ಪ್ರೋಪಲೀಲೆಗೆ ಕವಡಿಯ ಕಿಮ್ಮತ್ತೂ ಇಲ್ಲ. ಬೇರೆ ಮುದ್ರಣಾಲಯ (ಮುಂಬಯಿ ಮುಂತಾದ)ಗಳಲ್ಲಿ ಅಚ್ಚಾಗಿರುವ ಆಗಮಗಳಲ್ಲಿ ಈ ಪಂಚಾಚಾರ್ಯ ಪ್ರೋಪಲೀಲೆಯು ಕಂಡುಬರುತ್ತಿಲ್ಲ. ತಮಗೆ ಅನುಕೂಲವೆನಿಸುವ ರೀತಿಯಲ್ಲಿ ಶ್ಲೋಕಗಳನ್ನು ಮತ್ತು ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿ ಅವುಗಳಿಗೆ ಆಗಮ, ಪುರಾಣಗಳ ಹಾಗೂ ವ್ಯಾಸೋಕ್ತ, ಪಾರ್ವತೀ ಪರಮೇಶ್ವರ ಸಂವಾದಗಳ ಸಂಬಂಧವನ್ನು ಕಲ್ಪಿಸಿರುವುದಕ್ಕೆ ವೀರಶೈವ ಸಂಸ್ಕೃತ ಸಾಹಿತ್ಯವೇ ಸಾಕ್ಷಿಯಾಗಿದೆ. ಅಥವಾ ಇಲ್ಲಿ ಹೇಳಿರುವಂತೆ ಸುಪ್ರಬೋಧಾಗಮದಲ್ಲಿ ಈ ಚರಿತ್ರೆಯು ಇದ್ದುದಾಗಿದ್ದರೆ ಪಂಚಾಚಾರ್ಯ ಪಕ್ಷಕ್ಕೆ ತಮ್ಮ ಜೀವನವನ್ನೇ ಧಾರೆ ಎರೆದಿರುವ ಶ್ರೀ ಕಾಶೀನಾಥ ಶಾಸ್ತ್ರಿಗಳು ಈವರಗೆ ದೊರಕಿಸದೆ ಬಿಡುತ್ತಿರಲಿಲ್ಲ. ಇವರು ಹೇಳುವ ಆಗಮದಲ್ಲಿ ಲಿಂಗೋದ್ಭವ ಕಥಾಮಾತ್ರ ಸೇರಿಸಲ್ಪಟ್ಟಿದೆ. ಆದ್ದರಿಂದ ಇದರಲ್ಲಿ ವರ್ಣಿಸಿರುವ ಕಥೆಯು ಸ್ವಕಪೋಲ ಕಲ್ಪಿತವೆಂಬುದನ್ನು ನಿಸ್ಸಂದೇಹವಾಗಿ ಹೇಳುತ್ತೇನೆ.

" ಆದರೆ ಇದರಲ್ಲಿ ಮುಖ್ಯವಾಗಿ ಹೇಳಬೇಕಾಗಿರುವುದು ಉಜ್ಜಯಿನೀ ಪೀಠಾಚಾರ್ಯರಾದ ಜಗದ್ಗುರು ಮರುಳಸಿದ್ಧರ ಚರಿತ್ರ " ಎಂದು ಹೇಳಲಾಗಿದೆ ಹಾಗಾದಲ್ಲಿ ಗ್ರಂಥದಲ್ಲಿ ಯಾವ ವಿಷಯವು ಅಥವಾ ಯಾವ ನಾಯಕನು ಮುಖ್ಯವೋ, ಆ ವಿಷಯದ ಅಥವಾ ನಾಯಕನ ಆಧಾರದ ಮೇಲೆ ಗ್ರಂಥಕ್ಕೆ ನಾಮಕರಣ ಮಾಡುವುದು ಕ್ರಮವಾದುದು. ಇಲ್ಲಿ ಮರುಳಸಿದ್ಧ ಚರಿತ್ರ ಮುಖ್ಯವಾಗಿರುವಾಗ ಮರುಳಾರಾಧ್ಯರ ಹೆಸರಿಟ್ಟಿರುವುದು. ತುಂಬಾ ಅನುಚಿತ. ಆದರೆ ಆ ರೀತಿ ಮರುಳಾರಾಧ್ಯರ ಹೆಸರಿನ್ನಿಟ್ಟಿರುವುದು ಮರುಳಸಿದ್ಧನು ಮರುಳಾರಾಧ್ಯನಿಗಿಂತ ಭಿನ್ನನೆಂಬುದನ್ನು ಎತ್ತಿ ತೋರಿಸಲು ಮಾಡಿದ ಯತ್ನವಿದೆಂಬುದನ್ನು ಸ್ಪಷ್ಟಪಡಿಸುತ್ತದೆ.

ಪುಟ ೧೮೩,

" ನಾರದನು ಶಿವನಿಗೆ ಭೂಲೋಕದ ವರದಿಯನ್ನು ಒಪ್ಪಿಸಿದ ಮೇಲೆ ಶಿವನು ಧರ್ಮಸ್ಥಾಪನೆಗಾಗಿ ಪಂಚಾಚಾರ್ಯರನ್ನೂ ವಿಷ್ಣುವನ್ನು ಭೂಮಿ

ಉಲ್ಲವತರಿಸಲು ಕಳುಹಿಸುತ್ತಾನೆ. ಪಂಚಾಚಾರ್ಯರು ಶೈವ ಮತೋ
ದ್ಧಾರಕ್ಕಾಗಿ ಲಿಂಗೋದ್ಭವರಾಗಬೇಕಾಗಿಯೂ ವಿಷ್ಣುವು ವೈಷ್ಣವ ಮತೋ
ದ್ಧಾರಕ್ಕಾಗಿ ಬುದ್ಧಾವತಾರ ತಾಳಬೇಕಾಗಿಯೂ ಶಿವನಪ್ಪಣೆಯಾಗುತ್ತದೆ.
ವಿಷ್ಣುವು ಬುದ್ಧನಾಗಿ ಅವತರಿಸಿ ಬೌದ್ಧಮತವನ್ನು ಸ್ಥಾಪಿಸಬೇಕಾದುದು
ಶಿವನಿಗೆ ತಿಳಿದಿರಲಿಲ್ಲವೇ ? ಈ ನಂದೀಶ ( ಕವಿ ಚರಿತಯಲ್ಲಿರುವವನಲ್ಲ )
ಕವಿಗಾದರೂ ತಿಳಿದಿರಲಿಲ್ಲವೇ ? ಶಿವನ ಮತ್ತೊಂದು ಅಪ್ಪಣೆ ಏನೆಂದರೆ:-
ಗಣ ಪುಂಗವರೆ, " ನೀವು ಈ ಪಂಚಾಚಾರ್ಯರಿಗೂ, ವಿಷ್ಣುವಿಗೂ ಸಹಾ
ಯಕರಾಗಲು ಭೂಲೋಕದಲ್ಲಿ ಅವತರಿಸಿರಿ " ಎಂಬುದು ಶಿವಗಣರಿಗೂ
ಪಂಚಾಚಾರ್ಯರಿಗೂ ಸಂಬಂಧವೇನೋ ಉಂಟು. ಆದರೆ ವಿಷ್ಣುವಿಗೂ
ಶಿವಗಣರಿಗೂ, ಸಂಬಂಧವನ್ನು ಕಲ್ಪಿಸಿರುವ ಈ ಅವ್ಯವಹಾರ್ಯತನವು
ಶಿವನದಾಗಲಿ, ನಂದೀಶನದಾಗಲಿ, ಇರಲಾರದು.

ಪುಟ ೧೮೪.

ಚತುರ್ಯುಗಗಳಲ್ಲಿ ಚತುರ್ನಾಮಧೇಯರಾಗಿರುವ ಪಂಚಾ
ಚಾರ್ಯರು ಚತುರ್ನಾಮಾನುಕ್ರಮವಾಗಿ ಅವತರಿಸುವುದು ಆಗಮ
ಸಿದ್ಧಾಂತ. ಆದರೆ ಈ ಕಲಿಯುಗದಲ್ಲಿ ಸೋಮನಾಥ ಲಿಂಗದಿಂದ ರೇವಣ
ಸಿದ್ಧನ ಬದಲು ರೇನುಕ (ರೇಣುಕನಲ್ಲ) ನೂ, ಮಲ್ಲಿಕಾರ್ಜುನ ಲಿಂಗದಿಂದ
ಪಂಡಿತ ದೇಶಿಕನ ಬದಲು ಧೇನುಕರ್ಣನೂ, ವಿಶ್ವೇಶ್ವರಲಿಂಗದಿಂದ ವಿಶ್ವಾ
ರಾಧ್ಯನ ಬದಲು ವಿಶ್ವಕರ್ಣನೂ, ರಾಮಲಿಂಗದಿಂದ ಏಕೋರಾಮನ ಬದಲು
ಘಂಟಾಕರ್ಣನೂ, ಈ ಕಲಿಯುಗದಲ್ಲಿ ಅವತರಿಸಿದರೆಂದು ಹೇಳಿ ತಮ್ಮ
ಆಗಮಗಳನ್ನು ತಾವೇ ಅಸಂಬದ್ಧವಾದವುಗಳೆಂದು ಹೇಳಿದಂತಾಗಿದೆ.

ಇನ್ನು ಮರುಳಾರಾಧ್ಯರ ಅವತಾರವಾಗ ಬೇಕಾಗಿದೆ. ಮಾಳವ
ದೇಶದಲ್ಲಿ ಕ್ಷಿಪ್ರಾ ನದಿಯ ತೀರದ ಮೇಲೆ ಉಜ್ಜಯಿನೀ ನಗರವಿದೆ. ಅಲ್ಲಿ
ಮಹಾಕಾಲೇಶ್ವರಲಿಂಗ. ಅಲ್ಲೊಂದು ವಟವೃಕ್ಷವಿದೆ (ಆಗಲೂ ಇದ್ದಿಲ್ಲ.
ಈಗಲೂ ಇಲ್ಲ. ಕುತೂಹಲಿಗಳು ಪರೀಕ್ಷಿಸಲಿ ) ಭಕ್ತರಿಗೆ ಇಷ್ಟಾರ್ಥ ಸಿದ್ಧಿ
ಯಾಗುತ್ತಿದ್ದುದರಿಂದ ಮಹಾಕಾಲೇಶ್ವರನು ಸಿದ್ಧೇಶ್ವರನಾದನು ? ಎಲ್ಲಾ
ಲಿಂಗಗಳಿಂದಲೂ ಇಷ್ಟಾರ್ಥಸಿದ್ಧಿ ಭಕ್ತರಿಗೆ ಆಗೇ ಆಗುತ್ತದೆ. ಸಂಸ್ಕೃತ

ಸಾಹಿತ್ಯದಲ್ಲಿ ಅನೇಕ ಗ್ರಂಥಗಳಲ್ಲಿ ಈ ಉಜ್ಜಯಿನೀ ವರ್ಣನೆಯಿದೆ. ಅನೇಕ ಕಡೆಗಳಲ್ಲಿ ಮಹಾಕಾಲನ ವರ್ಣನೆಯೂ ಇದೆ. ಯಾರೂ ಸಿದ್ಧೇಶ್ವರನೆಂದು ವರ್ಣಿಸಿಲ್ಲ.

ಪುಟ ೧೭೮.

ಶರಣಾಗತರಾದ ಶ್ರಾತಪಾಲ ರಾಜ ದಂಪತಿಗಳನ್ನು ಉದ್ಧರಿಸಲು ಮರುಳಾರಾಧ್ಯರು ಅವತರಿಸುತ್ತಾರೆ? ಅವರ ಕೆಂಜೆಡೆಯ ಭವ್ಯಲಲಾಟದಲ್ಲಿ ಭಸ್ಮತ್ರಿವಳಿ, ಅಲ್ಲಿಯೇ (ಲಲಾಟದಲ್ಲಿ) ಇಷ್ಟಲಿಂಗ, ಎದೆಯ ಮೇಲೆ ಪವಿತ್ರವಾದ ಶಿವಸೂತ್ರ. ಇಂತಹ ದಿವ್ಯಮೂರ್ತಿ.

ಪುಟ ೧೯೦.

ರಾಜದಂಪತಿಗಳಿಗೆ ಅಷ್ಟಾವರಣ ಉಪದೇಶ "ಲಿಂಗವೇ ಶಿವರೂಪ ಆದನ್ನು..................ಹೃದಯಸ್ಥಾನದಲ್ಲಿ ಧರಿಸತಕ್ಕದ್ದು. (ತಾವಾದರೆ ಲಲಾಟದಲ್ಲಿ) ಶಿಷ್ಯರಿಗೆ ಶಿವಸೂತ್ರವಿಲ್ಲ. ಗುರುಗಳಿಗೆ ಮಾತ್ರ.

ಪುಟ ೧೯೩.

ದಾರುಕ ವನದಲ್ಲಿಯ ಮು ನಿ ಗ ಳಿ ಗೆ ಉಪದೇಶಿಸಲು ಮರುಳಾರಾಧ್ಯರು ಆಕಾಶದಿಂದ ಇಳಿಯುತ್ತಾರೆ! ಆಗ ಕೆಂಜೆಡೆಯಲ್ಲಿ ಶಿವಲಿಂಗ (ಮೊದಲು ಲಲಾಟದಲ್ಲಿತ್ತು.) ಎದೆ ಬಳಿಯಲ್ಲಿ ಯ ಜ್ಞೋ ಪ ವೀ ತ. (ಮೊದಲು ಶಿವಸೂತ್ರವಿತ್ತು.)

ಪುಟ ೧೯೪.

ಪರಶಿವ ಸ್ವರೂಪ ದಾರುಕಾಚಾರ್ಯರು ದಾರುಕವನದಿಂದ ಗಗನ ಮಾರ್ಗದಿಂದ ಹೊರಟು ಕಾಶೀ ಪಟ್ಟಣದಲ್ಲಿ ಶಿವಯೋಗ ನಿರತರಾದರು"

ಕಲಿಯುಗದಲ್ಲಿ ಅವತರಿಸಿದ ಮರುಳಾರಾಧ್ಯರು ಎಲ್ಲಿ ಹೋದರೋ? ಅವರ ಬದಲು ದಾರುಕಾಚಾರ್ಯರು ಬಂದಿರುತ್ತಾರೆ.

## ಪುಟ ೧೯೩.

ಕಾಶಿಯ ಜ್ಞಾನ ವಾಪಿಯ ವೈದಿಕರ ಸ
ಸಿಂಹಾಸನಾಧೀಶ್ವರ (ಜ್ಞಾನ ಸಿಂಹಾಸನವಲ್ಲ)
ವಿಶ್ವಮುನಿರೂಪದಿಂದ ಬರುತ್ತಾರೆ? ವಿಶ್ವಾರಾ
ಮಾಜಕೊಂಡು ವಿಶ್ವಮುನಿರೂಪರಾಗಿ ಬರುತ್ತಾರೆ.
ರಾಧ್ಯರು ಅಲ್ಲ. ದಾರುಕಾಚಾರ್ಯರು ಬರುತ್ತಾರೆ? ವೈದಿ
ದೀಕ್ಷೆ ಮಾಡುತ್ತಾರೆ? ಗುರುಕುಲವನ್ನು ಸ್ಥಾಪಿಸುತ್ತಾರೆ?

## ಪುಟ ೧೯೭.

ವೇದವ್ಯಾಸರು ಗುರುಗಳನ್ನು ಕಂಡು ತಮ್ಮ ವೇದಾಂತ ಸೂತ್ರಗಳಿಗೆ ಭಾಷ್ಯವನ್ನು ಒರೆಯಬೇಕೆಂಧು ಕೋರುತ್ತಾರೆ? ಗುರುಗಳು ಅದು ತನ್ನ ಕೈಲ್ಲಾಗುವುದಿಲ್ಲ, ಶಿವನೆಡೆಗೆ ಹೋಗು, ಎಂದು ಹೇಳುತ್ತಾರೆ. ವ್ಯಾಸರು ಕೈಲಾಸದಲ್ಲಿ ಶಿವನನ್ನು ಕಂಡು ತಮ್ಮ ಬೇಡಿಕೆಯನ್ನು ಮುಂಡಿಸುತ್ತಾರೆ? ಶಿವನು ತಾನು ನೀಲಕಂಠನಾಗಿ ಅವತರಿಸಿ ಭಾಷ್ಯ ಬರೆಯುವುದಾಗಿಯೂ, ಅಲ್ಲಿಯವರಿಗೆ ತಿಳಿದಷ್ಟು ಸೂತ್ರಗಳಿಗೆ ಅರ್ಥ ಹೇಳುತ್ತಿರು ಎಂದು ವ್ಯಾಸನಿಗೆ ಹೇಳುತ್ತಾನೆ?

ಇತ್ತ ಮರುಳಾರಾಧ್ಯರು ಕಾಶಿಯಿಂದ ಹೊರಟು ಶ್ರೀ ಶೈಲ ಕಾಂಚಿ ಗಳಿಗೆ ಭೇಟಿಯಿತ್ತು ಮಹಿಷ ಮಂಡಲ (ಮೈಸೂರು) ಕ್ಕೆ ಬರುತ್ತಾರೆ? ಅಲ್ಲಿ ರಾಜರು ಕೊಟ್ಟ ಕಾಣಿಕೆಯನ್ನೆಲ್ಲಾ ವಿದ್ವಾಂಸರಿಗೆ ಹಂಚಿ ಬಿಡುತ್ತಾರೆ? ಈ ವಿದ್ವಾಂಸರಲ್ಲಿ ಬ್ರಾಹ್ಮಣರು ಯಾರೂ ಇರಲಿಲ್ಲವೆಂದು ತೋರುತ್ತದೆ. ಇದ್ದಿದ್ದಾದರೆ ಅವರಿಗೂ ಕಾಶಿಯಲ್ಲಿ ಮಾಡಿದಂತೆ ಎಲ್ಲರಿಗೂ ವೀರಶೈವ ದೀಕ್ಷೆ ಕೊಟ್ಟೇ ಬಿಡುತ್ತಿದ್ದರು. ಇದರಿಂದ ಆಚಾರ್ಯರಂತೆ ಮೈಸೂರು ರಾಜ ಮನೆತನವೂ ಕಲಿಯುಗಾದಿಯಲ್ಲಿ ಇದ್ದಿತೆಂದು ನಿಸ್ಸಂದೇಹವಾಯಿತು? ಇದು ಮೈಸೂರಿನವರಿಗೆ ಹೆಮ್ಮೆ. ಆದರೆ ಇಂತಹ ಪುರಾತನ ರಾಜರನ್ನೇ ಜೇಷವೆಂದು ಪಂಚಾಚಾರ್ಯರ ಶಿಷ್ಯರೆಲ್ಲಾ ಹೇಳಹತ್ತಿದ್ದಾರೆ? ಇಷ್ಟರಲ್ಲಿಯೇ ಆಚಾರ್ಯ ಅವತಾರ ಮಾಡಿ ತಮ್ಮ ಶಿಷ್ಯರಿಗೆ ಬುದ್ಧಿ ಹೇಳುವುದು

ಹೇಳ್ವೆಯದು ? ನಂತರ ಹಿಮಗಿರಿಗೆ ಪಯಣ. ಅಲ್ಲಿ ಶಿಲೆಯೋಳ್ ಸೃಷ್ಟಿಸಿದ ಶಿವಸೂತ್ರಗಳಿಗೆ ಭಾಷ್ಯವನ್ನು ಬರೆಯುತ್ತಾರೆ ? ವ್ಯಾಸನು ಕೇಳಿದಾಗ ತಮಗೆ ಅಷ್ಟು ಶಕ್ತಿ ಸಾಲದೆಂದರು. ಏಕೆ ಗೊತ್ತೇ? ಅವನು ಬಂದವನೇ ಭಾಷ್ಯ ಬರೆಯಲು ಕೇಳಿದನೇ ವಿನಾ ವೀರಶೈವ ದೀಕ್ಷೆ ಕೇಳಲಿಲ್ಲ. ದೀಕ್ಷೆ ಪಡೆಯದವನನ್ನು ಹೇಗೆ ಶಿಷ್ಯನೆಂದು ಹೇಳಲಿಕ್ಕೆ ಬರುತ್ತೆ ? ಶಿಷ್ಯನಲ್ಲದವನ ಗೊಡವೆ ಏಕೆ? ಮೇಲೆ ಶಿವ ಇದಾನೆ, ನೋಡಿಕೊಳ್ಳುತ್ತಾನೆ - ಎಂದು ಅಲ್ಲಿಗೆ ಕಳುಹಿಸಿದರು. ಶಿಲೆಯೋಳ್ ಶಿವಸೂತ್ರ ಎಂದರೆ ಕಲ್ಲಿನ ಮೇಲೆ ಕೆತ್ತಿದ ಶಿವಸೂತ್ರ ಅಂತ. ಈಗಲೂ ಬೇಕಾದವರು ಹೋಗಿ ಹಿಮಾಲಯ ದಲ್ಲಿ ನೋಡಿ ಬರಬಹುದು ? ಬರೆಯುವಾಗ ಹುತ್ತದಲ್ಲಿ ಸುಪ್ತಾವಸ್ಥೆ (ನಿದ್ರೆ) ಯಲ್ಲಿದ್ದರು. ಇನ್ನು ಹೇಗೆ ಬರೆದಿರಬಹುದು ಯೋಚಿಸಿ. ನಂತರ ಕಾಶ್ಮೀ ರಕ್ಕೆ ಹೋಗಿ ಸರಸ್ವತೀ ಪೀಠವನ್ನು ಸ್ಥಾಪಿಸಿದರು ? ಅಲ್ಲಿದ್ದ ಮುನಿಗಳಿಗೆಲ್ಲಾ ಶಿಲಾಸೂತ್ರದ ಭಾಷ್ಯ ಹೇಳಿದರು ? ಅವರ್ಯಾರೂ ಕಾಣಿಕೆ ಕೊಡಲಿಲ್ಲ. ಕೊಟ್ಟಿದ್ದರೆ ಸರಸ್ವತೀ ಪೀಠದ ಜೊತೆಗೆ ಒಂದು ಲಕ್ಷ್ಮೀಪೀಠವನ್ನೂ ಮಾಡಿ ಬರುತ್ತಿದ್ದರು ? ಈಗ ಹಿಂದೂಸ್ತಾನ ಸರ್ಕಾರಕ್ಕೆ ಕಾಶ್ಮೀರದಲ್ಲಿ ಪಾಕೀಸ್ತಾನಿ ಗಳನ್ನು ಓಡಿಸಲು ಧನ ಸಹಾಯವಾಗುತ್ತಿತ್ತು.

ಅಲ್ಲಿಂದ ಕೇದಾರಕ್ಕೆ ಪಯಣ. ಆಗ ಒಂದು ದಿವ್ಯ ಮೂರ್ತಿಯ ದರ್ಶನವಾಯಿತು. ಆ ಮೂರ್ತಿಯೊಂದಿಗೆ ಏಕೋರಾಮರ ಕಡೆಗೆ ನಡೆ ದರು. ಏಕೋರಾಮರು ಭವ್ಯ ಗುರುವನ್ನೂ, ದಿವ್ಯ ವಟುವನ್ನೂ ನೋಡಿ ವಟುವಿಗೆ ಮುಕ್ತಿಮುನಿಯೆಂದು ನಾಮಕರಣ ಮಾಡಿದರು ? ಈತನು "ಸದ್ಧರ್ಮ ಪೀಠದ ಉತ್ತರಾಧಿಕಾರಿಯಾಗಲಿ" ಎಂದು ಹೇಳಿದರು ! ಕಾಶ್ಮೀರದಲ್ಲಿ ಸರಸ್ವತಿ ಪೀಠವೇನೋ ಸ್ಥಾಪಿತವಾಯಿತು ? ಸದ್ಧರ್ಮ ಪೀಠವು ಈವರೆಗೂ ಎಲ್ಲಿಯೂ ಸ್ಥಾಪಿತವಾಗಿಲ್ಲ. ಪೀಠ ಸ್ಥಾಪನೆಗಿಂತ ಮುಂಚೆಯೇ ಉತ್ತರಾಧಿಕಾರಿಯ ಅನ್ವೇಷಣೆ. ಈ ಆರಾಧ್ಯರಿಗೆ ಆತುರ ವೇಕಾಯಿತೋ ? ಯಾವುದಾದರೂ ಭಯವಿರಬಹುದು. ಎಲ್ಲರೂ ಉಜ್ಜ ಯಿನಿಗೆ ಹೊರಟರು ? ಅಲ್ಲಿ ಕೇದಾರೇಶ್ವರದ ಗೌರೀಕುಂಡದಲ್ಲಿ ಮಿಂದು ಲಿಂಗಾರ್ಚನೆ ಮಾಡಿದರು ? ಉಜ್ಜಯಿನಿಯಲ್ಲಿ ಕೇದಾರೇಶ್ವರ ಗೌರೀ

ಕುಂಡವೆಲ್ಲಿಂದ ಬಂದಿತು? ಆ ಗೌರೀಕುಂಡದಿಂದ ಮರುಳಾರಾಧ್ಯರ ಪ್ರಾರ್ಥನೆಯಂತೆ ಪರಶಿವನು ಸದ್ಧರ್ಮ ಪೀಠದ ಉತ್ತರಾಧಿಕಾರಿಯನ್ನು ಹೊರಹೊರಡಿಸಿದನು? ಇವನೇ ಹಿಂದೆ ಕಂಡ ದಿವ್ಯಮೂರ್ತಿ. ಇವನೇ ಮುಕ್ತಿಮುನಿ. ಅನುವಾದಕರು ಇಲ್ಲಿ ಸ್ವಲ್ಪ ಹಿಂದು ಮುಂದು ಮಾಡಿದ್ದಾರೆ. ಈ ಮುಕ್ತಿಮುನಿಗೆ ಕೆಂಜೆಡೆಯಲ್ಲಿ ಇಷ್ಟಲಿಂಗವಿದೆ. ಆದರೆ ಎದೆಯಲ್ಲಿ ಶಿವ ಸೂತ್ರವಾಗಲಿ, ಯಜ್ಞೋಪವೀತವಾಗಲಿ ಯಾವುದೂ ಇಲ್ಲ. ಪಟ್ಟ ವಾಗಿಯೇ ಬಿಟ್ಟಿತು. ಈಗಲಾದರೂ ಸದ್ಧರ್ಮಪೀಠವನ್ನು ಸ್ಥಾಪಿಸಲೇ ಇಲ್ಲ: ಏನು ಗಡಬಿಡಿಯೋ? ಯಾವ ಭಯವೋ? ಮೆರವಣಿಗೆ ಹೊರಟಿತು. ಶಿಷ್ಯರು ಹೂ ಮಳೆಗರೆದರು. ಗುರುಗಳ ಭಾಷಣವಾಯಿತು. ಕಾಣಿಕೆ ಸಮರ್ಪಣೆಯಾಯಿತು. ಕೊಟ್ಟವರಿಗೆ ಆಶೀರ್ವಾದಗಳೂ ದೊರೆಕಿದವು. ಪಟ್ಟದ ವಿಧಿ ನಡೆದಾಗ ಮುಕ್ತಿಮುನಿಗೆ ಗುರುಮುದ್ರೆ ಕೊಟ್ಟೇ ಇಲ್ಲ. ಉತ್ಸವ, ಭಾಷಣ, ಕಾಣಿಕೆ, ಆಶೀರ್ವಾದ ಎಲ್ಲಾ ಆದಮೇಲೆ ಜ್ಞಾಪಕವಾಯಿತು. ಯಾರಾದರೂ ಕೊಟ್ಟಿಲ್ಲವೆಂದಾರು ಎಂದೂ, ಕಟ್ಟಳೆ ಶುರುವಾದರೆ ಬಲ ವಾದ ಸಾಕ್ಷಿಯಿರಲೆಂದೂ ಏಕೋರಾಮರ ಸಮ್ಮುಖದಲ್ಲಿ ನಟಿಸಿಗೆ ಗುರು ಮುದ್ರೆಯನ್ನು ಕೊಟ್ಟರು.

ಆಗ ಇದ್ದಕ್ಕಿದ್ದ ಹಾಗೆಯೇ ಸಿದ್ಧೇಶ್ವರಲಿಂಗ ಇಬ್ಭಾಗವಾಯಿತು. ಆರಾಧ್ಯರು ಅದರೊಳಗೆ ಹೊಕ್ಕರು. ಮಹಾಕಾಲ ಉಜ್ಜಯಿನಿಯಲ್ಲಿ ವಟ ವೃಕ್ಷವೂ ಇಲ್ಲ. ಸಿದ್ಧೇಶ್ವರ ಲಿಂಗವೂ ಇಲ್ಲ. ಲಿಂಗವೇ ಇಲ್ಲದಿರುವಾಗ ಹುಟ್ಟಿದ್ದೂ ಅಡಗಿದ್ದೂ ಅಜ್ಜಿ ಕಥೆಯಷ್ಟೆ.

ಮುಕ್ತಿಮುನಿಗಳು ಧರ್ಮ ಪ್ರಚಾರ ಮಾಡುತ್ತಿದ್ದಾರೆ. ಆಗ ಬೌದ್ಧ ಮತ ಉದಿಸಿತು. ಶಿವನು ವಿಷ್ಣುವಿಗೂ, ಪಂಚಾಚಾರ್ಯರಿಗೂ ಒಂದೇ ಕಾಲದಲ್ಲಿ ಭೂಮಿಯಲ್ಲಿ ಅವತರಿಸಲು ಹೇಳಿದ್ದನು. ವಿಷ್ಣುವೇಕೆ ತಡ ಮಾಡಿದನೋ? ಆಗ ಮಹಾವೀರ (ಜಿನ) ಸ್ವಾಮಿಗಳೂ ಜೈನಮತ ಸ್ಥಾಪ ನೆಗೆ ಬಂದಿದ್ದರು ಅವರೀರ್ವರಿಗೆ ಶಿವನು ಹೇಳಿದಂತೆ ಇವನಿಗೇನೂ ಹೇಳಿ ರಲಿಲ್ಲ. ಅವರೂ ಜಿನದೇವರು ಭೂಮಿಗಿಳಿದರು. ಮುಕ್ತಿಮುನಿಗಳ ನಂತರ

ಸಿದ್ಧಮುನಿಗಳು ಬಂದರು. ಅವರಾದ ಮೇಲೆ ಶಿವ ಮುನೀಂದ್ರರೂ ಇವ
ಜೈನ ತತ್ವಗಳನ್ನೆಲ್ಲಾ ಖಂಡಿಸಿಯೇ ಬಿಟ್ಟರು. ಜಿನದೇವರನ್ನು ಶಿವನೇ
ಕಳುಹಿಸಿರಲಿಲ್ಲ. ಅದಕ್ಕೆ ಖಂಡಿಸಿ ಬಿಟ್ಟರು. ಅಷ್ಟರಲ್ಲಿ ಪೂವಲ್ಲಿಯ
ನಾಗಾರ್ಜುನರು ಅವತರಿಸಿ ಚೈತನ್ಯ ಮುನಿಗೆ ಈ ವಿಚಾರ ತಿಳಸುತ್ತಾ
ಇದು ಯಾವ ಅವತಾರವೋ ? ಹೇಳುವುದನ್ನು ಮರೆತೇ ಬಿಟ್ಟಿದ್ದಾರೆ.

ನಂತರ ಶಾಂತಮುನಿ. ಹಿಂದೆ ಪರಶಿವನು ೧೨೦೦ ವರ್ಷಗಳ ಹಿಂ
ವ್ಯಾಸನಿಗೆ ಕೊಟ್ಟ ಭರವಸೆಯಂತೆ ಗೋಕರ್ಣ ಲಿಂಗದಿಂದ ನೀಲಕಂ
ಶಿವಾಚಾರ್ಯನಾಗಿ ಉದ್ಭವಿಸುತ್ತಾನೆ. ನಾಲ್ಕು ವೇದಗಳಿಗೂ, ವ್ಯಾ
ಸೂತ್ರಗಳಿಗೂ, ಭಾಷ್ಯವನ್ನೂ, ಪ್ರಸ್ಥಾನ ತ್ರಯಗಳಿಗೆ ವ್ಯಾಖ್ಯಾನವನ್ನು
ಬರೆದು ಶಕ್ತಿ ವಿಶಿಷ್ಟಾದ್ವೈತವನ್ನು ಸ್ಥಾಪಿಸಿದರು. ತಮ್ಮ ಶಿಷ್ಯ ಚಿದ್ಘನನಿ
ಉತ್ತರಾಧಿಕಾರವನ್ನು ಕೊಡುತ್ತಾರೆ. ಗೋವಿಂದ ಪಂಡಿತರಿಗೆ ಶಕ್ತಿ ವಿಶಿಷ್ಟಾ
ದ್ವೈತ ಪಾಠವನ್ನು ಹೇಳುತ್ತಾರೆ. ಆದಿ ಶಂಕರಾಚಾರ್ಯರ ಜನ್ಮ ಭವಿಷ್ಯ
ವನ್ನು ಹೇಳಿ ಅವರ ಮೂಲಕ ಅದ್ವೈತ ಪ್ರಚಾರ ಮಾಡಲು ತಿಳಿಸುತ್ತಾರೆ
ನೀಲಕಂಠರಿಂದ ಗೋವಿಂದ ಪಂಡಿತರು ಕಲಿತಿದ್ದು ಶಕ್ತಿ ವಿಶಿಷ್ಟಾದ್ವೈತ
ಈಗ ಅವರು ಶಂಕರಾಚಾರ್ಯರಿಗೆ ಹೇಳಿಕೊಡಬೇಕಾಗಿರುವುದು ಅದ್ವೈತ.
ನೀಲಕಂಠರಿಗೆ ಕೊನೆಗಾಲದಲ್ಲಿ ಶಕ್ತಿ ವಿಶಿಷ್ಟಾದ್ವೈತ ಸಾಕಾಗಿರಬೇಕು.

ಒಟ್ಟಿನಲ್ಲಿ ಭಾರತದಲ್ಲಿರುವ ಮಠಗಳೂ, ಮಂದಿರಗಳೂ, ಕ್ಷೇತ್ರಗಳೂ,
ಭಾಷ್ಯಗಳೂ, ವ್ಯಾಖ್ಯಾನಗಳೂ, ಎಲ್ಲವೂ ವೀರಶೈವ ಗುರುಗಳಿಂದ ಆದವು.
ಋಷಿಮುನಿಗಳೆಲ್ಲಾ ಲಿಂಗಧಾರಿಗಳಾದರು ಅಖಂಡ ಭಾರತವೇ ವೀರ
ಶೈವ ಮಯವಾಯಿತು. ಆದರೆ ಇಷ್ಟೇ ಮಾಡಿದ್ದು ಎಂದು ಯಾರೂ ತಿಳಿಯ
ಬೇಡಿ. ಈ ವಿಜಯ ಚರಿತದಲ್ಲಿ ಒಬ್ಬ ಆರಾಧ್ಯರು ಮಾಡಿದ್ದನ್ನು ಮಾತ್ರ
ಹೇಳಿದೆ. ಈ ಒಬ್ಬರಿಂದ ಭಾರತವೆಲ್ಲಾ ವೀರಶೈವ ಮಯವಾಗಿರುವಾಗ
ಉಳಿದ ನಾಲ್ವರು ಭಾರತದ ಹೊರಗೆ ಏನೇನು ಜರುಗಿಸಿದ್ದಾರೋ ? ಈ
ಬಗ್ಗೆ ಇತಿಹಾಸಜ್ಞರು ಶ್ರಮವಹಿಸಬೇಕು. ಆದರೆ ಈ ಸಂಶೋಧನೆಗೆ
ಬ್ರಾಹ್ಮಣರು ಕೈಹಾಕಬಾರದು. ಅವರು ಕೈ ಹಾಕಿದರೂ ಅಂದರೆ ಎಲ್ಲಾ
ಕುಲಗೆಡಿಸಿ ಬಿಡುತ್ತಾರೆ. ಮತ್ತೆ ಅದನ್ನು ಸರಿಪಡಿಸಲು ಬೇರೆ ಜೇ

ಚರಿತೆಗಳನ್ನು ಬರೆಯಬೇಕಾಗುತ್ತೆ. ಈಗ ಇದೊಂದನ್ನೇ ಬರೆಯಲು ಆಗಿರುವ ಕಷ್ಟಬಂದಿರುವ ತಾಪತ್ರಯವೆಲ್ಲವನ್ನೂ ಸಂಪಾದಕರು ಈ ಪುಸ್ತಕದಲ್ಲಿಯೇ ಹೇಳಿಕೊಂಡಿದ್ದಾರೆ.

ಇಷ್ಟೆಲ್ಲಾ ಮಾಡಿದರೂ ನೀಲಕಂಠರಿಗೆ ಯಾವ ಸಿಂಹಾಸನ ಮಠವೂ ಸಿಗಲಿಲ್ಲ. ಲಿಂಗೋದ್ಭವರಾಗಿದ್ದರು. ಮರುಳಾರಾಧ್ಯಾದಿಗಳಂತೆ ಗಣರ ಅವತಾರಿಗಳಲ್ಲ. ಸಾಕ್ಷಾತ್ ಶಿವನ ಅವತಾರಿಗಳು. ಭಾಷ್ಯವ್ಯಾಖ್ಯಾನಗಳನ್ನೆಲ್ಲಾ ಬರೆದರು. ಗೋವಿಂದ ಪಂಡಿತರಿಗೆ ಪಾಠ ಹೇಳಿದರು ಬಾಷ್ಯ ಬರೆಯಲು ಆಗದವರಿಗೆಲ್ಲಾ ಪೀಠಾಧಿಪತ್ಯ. ಇದೇ ಸಿಟ್ಟಿನಿಂದಲೇ ನೀಲಕಂಠರು ಕೊನೆಗಾಲದಲ್ಲಿ ಶಂಕರಾಚಾರ್ಯರ ಮೂಲಕ ಅದ್ವೈತ ಪ್ರಚಾರಮಾಡಲು ಗೋವಿಂದ ಪಂಡಿತರಿಗೆ ತಿಳಿಸಿರಬೇಕು. ಶಕ್ತಿವಿಶಿಷ್ಟಾದ್ವೈತ ತ್ಯಾಗ ಮಾಡಿದ್ದರಿಂದಲೇ ಲಿಂಗೋದ್ಭವ ನೀಲಕಂಠರಿಗೆ ಕೊನೆಗಾಲದಲ್ಲ ಲಿಂಗದಲ್ಲಿ ಅಡಗುವ ಸೌಭಾಗ್ಯ ಅಲ್ಲ; ಅಲ್ಲ; ಕಷ್ಟ ತಪ್ಪಿತೆಂದು ಕಾಣುತ್ತೆ. ಕೊನೆಗೆ ಅವರು ಗೋಕರ್ಣದ ಸಮೀಪದ ಸಾಗರದ ಪಾಲಾದರೋ ಏನೋ ವಿಜಯಚರಿತ ಅದನ್ನು ಹೇಳಿಯೇ ಇಲ್ಲ.

ಅನಂತರ ಶಂಕರಾಚಾರ್ಯರು ಅದ್ವೈತ ಪ್ರಚಾರಕ್ಕೆ ಹೊರಟರು. ರೇವಣಸಿದ್ಧರನ್ನು ಕಂಡರು ? ಚಂದ್ರಮೌಳೀಶ್ವರ ಲಿಂಗವನ್ನು ರತ್ನೋಧರಿ ಗಣೇಶನನ್ನೂ ಪಡೆದರು ? ಈ ಶಂಕರನು ಅದ್ವೈತ ಪ್ರಚಾರಮಾಡುತ್ತಿದ್ದಾನೆ. ಇವನಿಗೆ ಲಿಂಗಧಾರಣೆ ಮಾಡಿದರೆ ಅದನ್ನು ಬಿಟ್ಟು ಶಕ್ತಿವಿಶಿಷ್ಟಾದ್ವೈತಪ್ರಚಾರ ಮಾಡಬಹುದೆಂದು ರೇವಣಸಿದ್ಧರು ಭಾವಿಸಿರಬೇಕು. ಆದರೆ ಶಂಕರ ಹೇಗೆ ಒಪ್ಪುತ್ತಾನೆ. ಗುರುವಿನ ಗುರು ನೀಲಕಂಠನ ಮಾತಿನಂತೆ ಅದ್ವೈತ ಪ್ರಚಾರ ಮಾಡಲೇ ಬೇಕಾಗಿದೆ. ಕೊನೆಗೆ ರೇವಣ ಸಿದ್ಧರು ನಿರಾಶರಾದರು. ಲಿಂಗ ಧರಿಸದಿದ್ದರೂ ಚಿಂತೆಯಿಲ್ಲ. ಸ್ಥಾವರ ಲಿಂಗದಂತೆ ಇಷ್ಟಾಸರೂ ಪೂಜೆ ಮಾಡು ಎಂದು ಕೊಟ್ಟರು. ರೇವಣಸಿದ್ಧರು ಎಲ್ಲಾ ಶಿಷ್ಯರಿಗೂ ಈ ಲಿಂಗ ಶಿವಸ್ವರೂಪ ಎದೆಯಲ್ಲಿ ಧರಿಸಬೇಕು ಎಂದು ಹೇಳುತ್ತಾ ಶಂಕರರಿಗೆ ಆ ರೀತಿ ಹೇಳದೇ ಇರುವುದು ವಿಷಾದ. ಹೇಳದೇ ಏನು ಹೇಳಿಯೇ ಇರಬೇಕು. ತನ್ನ ಗುರು ನೀಲಕಂಠನನ್ನು ಸಮುದ್ರದ

ಫಾಲು ಮಾಡಿದ ಇವರ ಮಾತೇನು ಕೇಳುವುದು ಎಂದು ಅವನು ಹ
ಸ್ಮರಿಸಿರಬೇಕು. ಏನೋ ಉಭಯತೋಪಿ ಮರ್ಯಾದೆ ಉಳಿಯುವ
ಹಾಗೆ ಒಂದು ಒಪ್ಪಂದ ಮಾಡಿಕೊಂಡರು ಅಂತ ಕಾಣುತ್ತೆ. ಲಿಂಗದ
ಜೊತೆಗೆ ಗಣೇಶನನ್ನು ಕೊಟ್ಟಿರುವುದರಿಂದ ರಾವಣಸಿದ್ಧರಿಗೆ ಏಕೋ ದೇವ
ನಿಷ್ಠೆ ಇರಲಿಲ್ಲವೆಂದೂ ಭಾವಿಸಬೇಡಿ. ಲಿಂಗ ಅಂದರೆ ಪರಶಿವ. ಪರಶಿವ
ತಾನೇ ಗಣೇಶನ ತಂದೆ. ಇಷ್ಟಕ್ಕೂ ಮಹಿಮರ ವಿಚಾರ.

ಅನಂತರ ಒಂದು ಕಡೆ ಉಜ್ಜಯಿನಿ ಶಾಂತಮುನಿಗಳು ಶಕ್ತಿ ವಿಶಿ
ಷ್ಟಾದ್ವೈತವನ್ನೂ, ಮತ್ತೊಂದು ಕಡೆ ಗೋವಿಂದ ಶಂಕರ ಉಭಯರು
ಅದ್ವೈತವನ್ನೂ ಪ್ರಚಾರ ಮಾಡುತ್ತಾ ಹೊರಟರು. ಇದರಿಂದ ಜೈನ ಬೌದ್ಧ
ಧರ್ಮಗಳು ಕಳೆಗುಂದಿದವು. ಆದರೆ ಅದ್ವೈತದಿಂದ ಕಳೆಗುಂದಿದವೋ,
ಶಕ್ತಿ ವಿಶಿಷ್ಟಾದ್ವೈತದಿಂದ ಕಳೆಗುಂದಿದವೋ ? ಶಕ್ತಿ ವಿಶಿಷ್ಟಾದ್ವೈತದ
ಮುಂದೆ ಅದ್ವೈತ ಮರಿ. ಅದರ ಕೈಲೇನಾದೀತು ? ಜೈನಧರ್ಮ ಕಳೆ
ಗುಂದಲಿ. ಹಿಂದೊಮ್ಮೆ ಹೀಗೆ ಆಗಿಯೇ ಇದ್ದಿತು. ಆದರೆ ಬುದ್ಧನ ಧರ್ಮ
ಹಾಳುಮಾಡಿದ್ದು ಬಹಳ ಅನ್ಯಾಯ. ಏಕೆಂದರೆ ಆಚಾರ್ಯರಿಗೂ, ವಿಷ್ಣು
ವಿಗೂ, ಶಿವನು ಭೂಲೋಕದಲ್ಲಿ ಅವತರಿಸಲು ಹೇಳಿ ಬೇರೆ ಬೇರೆ ಸಿಬ್ಬಂದಿ
ಕೊಟ್ಟರೆ ಒಬ್ಬರಿಗೊಬ್ಬರು ಕಿತ್ತಾಡಬಹುದೆಂದು ತನ್ನ ಖಾಸಾಗಣ ಸಿಬ್ಬಂದಿ
ಯನ್ನೇ ಇಬ್ಬರಿಗೂ ಕೊಟ್ಟಿದ್ದರೂ ಇಬ್ಬರೂ ಇಲ್ಲಿ ಬಂದು ಕಿತ್ತಾಡಿ ಬಿಡೋ
ದೇ ? ಬೌದ್ಧಧರ್ಮ ಹಾಳಾಗಿಯೇ ಹೋಯಿತು. ಪಂಚಾಚಾರ್ಯರು
ಅಂದರೆ ಶಿವನಿಗೆ ಕೇವಲ ಸಮೀಪ. ಇವರು ಜಯಿಸಿಯೇ ಬಿಟ್ಟರು ಬೌದ್ಧ
ಧರ್ಮ ಹಾಳುಮಾಡಿದ್ದರಿಂದ ಶಿವನ ಅಪ್ಪಣೆಗೆ ತಿರಸ್ಕಾರ ಮಾಡಿದಂತಾಗ
ಲಿಲ್ಲವೇ ? ತಿರಸ್ಕಾರವೆಲ್ಲಿಯದು ? ಶಿವ ಹೇಳಿದ್ದೇನು ? ಎಲೈ ವಿಷ್ಣುವೇ,
ನೀನು ಬುದ್ಧನಾಗಿ ಅವತರಿಸು. ವೈಷ್ಣವ ಧರ್ಮವನ್ನು ಉದ್ಧಾರ ಮಾಡು
ಎಂದು. ಈ ಬುದ್ಧನು ಮಾಡಿದ್ದೇನು ? ಬೌದ್ಧರನ್ನು ಬೆಳೆಸಿದನೇ ವಿನಾ
ವೈಷ್ಣವರನ್ನು ಬೆಳಸಲೇ ಇಲ್ಲ. ಈಗ ನೀವೇ ಹೇಳಿ. ಶಿವನ ಅಪ್ಪಣೆ
ವಿರೋಧಿಸಿದವರಾರು ? ಇಂತಹ ಬೌದ್ಧ ಧರ್ಮವನ್ನು ಈ ಶಿವನ ಮಕ್ಕಳ್
ಪಂಚಾಚಾರ್ಯರು ಅಳಿಸದೇ ಬಿಟ್ಟಾರೆಯೇ ? ಅಳಿಸಿಯೇ ಬಿಟ್ಟರು. ಈ

ಶಾಂತಮುನಿಗಳ ತಪೋಭೂಮಿ ತರಗನಹಳ್ಳಿಯಲ್ಲಿದೆಯಂತೆ. ಹೋಗಿ ನೋಡಿ ಬರದೆ ಯಾರೂ ನಂಬಬೇಡಿ.

ನಂತರ ಭವಭೂತಿಮುನಿಗಳು ಬರುತ್ತಾರೆ. ಇವರೋ ಸುಪ್ರಸಿದ್ಧ ಕವಿಗಳು. ಕಾಲಿದಾಸನ ಮಿತ್ರರು. ಭೋಜರಾಜನ ಆಸ್ಥಾನ ವಿದ್ವಾಂಸರು. ಜಗದ್ಗುರುಗಳು ಆಸ್ಥಾನ ವಿದ್ವಾಂಸರು ಹೇಗೆ ಆಗಲಿಕ್ಕೆ ಬರುತ್ತದೆ? ಅದಕ್ಕೇನಂತೆ ಸಮಯ ಬಂದರೆ ಏನಾದರೂ ಮಾಡಲೇಬೇಕು. ಅಂತಹ ಸಮಯವೇನಪ್ಪಾ ಇತ್ತು? ಹಿಂದಿನ ಗುರುಗಳೆಲ್ಲಾ ಭಾಷ್ಯ, ಪುರಾಣ, ಆಗಮ ಎಲ್ಲಾ ಬರೆದಿದ್ದರು. ಆದರೆ ಈ ನಾಟಕ ಕಾವ್ಯಗಳೆರಡನ್ನು ಎಲ್ಲರೂ ಬಿಟ್ಟುಬಿಟ್ಟಿದ್ದರು. ಅವೇನು ಮಹಾ ಎಂದು ಬಿಟ್ಟರೆ ಬ್ರಾಹ್ಮಣರು ಸುಮ್ಮನಿರುತ್ತಾರೆಯೇ? ತಾವು ಬರದೇ ಬಿಡುತ್ತಾರೆ? ಆವಾಗ ಎಲ್ಲಾ ವೀರಶೈವರದೇ ಎಂಬುದೇ ಎಲ್ಲಿ ಉಳಿಯುತ್ತೆ? ಅದಕ್ಕಾಗಿಯೇ ಈ ಬ್ರಾಹ್ಮಣ ಭವಭೂತಿಗೆ ಲಿಂಗ ಧರಿಸಬೇಕಾಯಿತು. ಅವರು ಉತ್ತರರಾಮ ಚರಿತ್ರೆ, ಮಾಲತಿ ಮಾಧವ ಮುಂತಾದುವುಗಳನ್ನು ಬರೆದಿದ್ದಾರೆ ನೋಡಿ. ವೀರಶೈವ ಗುರುಗಳು ರಾಮನ ಕಥೆ ಏಕೆ ಬರೆದರಪ್ಪ ಎಂದು ಕೇಳಬೇಡಿ. ರಾಮ ನಮ್ಮವನಲ್ಲವೆಂದು ಬರೆಯದೆ ಬಿಟ್ಟರೆ ನಾಟಕ ಕಾವ್ಯ ಬರೆದವರು ವೀರಶೈವರಲ್ಲ ಎಂದು ಆಗಿ ಬಿಡುತ್ತೆ ನೋಡಿ? ಆದ್ದರಿಂದ ನಮ್ಮ ಸಿದ್ಧಾಂತ ಏನು ಅಂದರೆ ಎಲ್ಲವೂ ವೀರಶೈವಮಯವಾಗಬೇಕು. ಎಲ್ಲವೂ ವೀರಶೈವರಿಗೇ ಇರಬೇಕು. ಇಷ್ಟಕ್ಕಾಗಿಯೇ ಭವಭೂತಿಯ ಅವತಾರ. ಈ ಭವಭೂತಿಗಳಿಗೆ ಈ ಒಂದೆರಡು ನಾಟಕಗಳನ್ನು ಬರೆಯುವ ಹೊತ್ತಿಗೆ ಪುರುಷಾಯುಷ್ಯವು ಪೂರ್ತಿಯಾಯಿತು. ಆಮೇಲೆ ಇಮ್ಮಡಿ ಮುಕ್ತಿಮುನಿ. ನಂತರ ಶಕ್ತಿಮುನಿ, ಸಿದ್ಧಮುನಿ, ಶಾಂತಮುನಿ, ಮುಮ್ಮಡಿ ಸಿದ್ಧಮುನೀಶ, ಸಾಂಬಮುನಿ, ಇಮ್ಮಡಿ ಶಿವಮುನೀಂದ್ರ, ಈಶಾನಮುನಿ, ನಂತರ ಶಂಭುಮುನಿಗಳು ಬಂದರು.

ಇವರ ಕಾಲದಲ್ಲಿ ಜೈನಮತ ಪ್ರಬಲವಾಗಿತ್ತು. ಜೈನರನ್ನು ವಾದದಲ್ಲಿ ಸೋಲಿಸಲಿಕ್ಕೆ ಗುರುಗಳಿಂದ ಆಗಲಿಲ್ಲ. ಹೇಗೆತಾನೆ ಆಗುತ್ತೆ? ಆ ಜೈನ ಧರ್ಮಕ್ಕೆ ರಾಜಾಶ್ರಯ ಬೇರೆ ಇದೆ. ಅದಕ್ಕೆ ಸ್ವಾಮಿಗಳು ಆಖೈರ್ ತೀರ್ಮಾನ ಮಾಡೇ ಬಿಟ್ಟರು. ಪುಂಡಮಿಂಡ ಜಂಗಮರನ್ನು ಕಲೆಹಾಕಿದರು. ಶಸ್ತ್ರಾಸ್ತ್ರ

ಸಲಕರಣೆಯೂ ಆಯಿತು. ಇದರ ಜೊತೆಗೆ ದೈವೀಕ ತೇಜಸ್ಸು ಇದ್ದದ್ದೇ ಅಲ್ಲವೆ? ಇನ್ನು ರಾಜನು ಎದುರು ನಿಲ್ಲಲು ಸಾಧ್ಯವೇ? ಸೋತುಹೋದನು. ಆದರೂ ಈ ಬಡ ಜಂಗಮನಿಗೆ ಸೋತೆನಲ್ಲಾ ! ಎನ್ನುವ ಕೊರತೆ ರಾಜನಿಗಿದ್ದೇ ಇತ್ತು. ಗುರುಗಳು ಎಷ್ಟು ಶಾಂತಿ ಹೇಳಿದರೂ ಕೇಳಲೇ ಇಲ್ಲ! ರಣಭೇರಿ ಹೊಯ್ಸಿಯೇ ಬಿಟ್ಟನು. ಕಾಳಗ ಶುರುವಾಯಿತು. ಮತ್ತು ರಾಜಸೋತನು ? ಗುರುಗಳು ಯಾವಾಗ ತಮ್ಮ ವೃತ್ತಿಯನ್ನು ಮರೆತು ಶಸ್ತ್ರಾಸ್ತ್ರಗಳಿಗೆ ಕೈ ಹಾಕಿದರೋ ಆವಾಗಲೇ ವೇದಾಗಮ ಪುರಾಣಗಳು ಮರೆತು ಹೋಗಿದ್ದವು. ಸೋತರಾಜನಿಗೆ ಉಪದೇಶ ಮಾಡಲಿಕ್ಕೆ ಶಾಸ್ತ್ರಗಳು ಒಂದೂ ಜ್ಞಾಪಕಕ್ಕೆ ಬರಲಿಲ್ಲ. ಉಪದೇಶವಿಲ್ಲದೆ ಲಿಂಗಕಟ್ಟುವುದಾದರೂ ಹೇಗೆ ? ಶಂಕರಾಚಾರ್ಯರಿಗೆ ರೇವಣಸಿದ್ಧರು ಉಪದೇಶವಿಲ್ಲದೆ ಲಿಂಗವನ್ನು ಕೊಟ್ಟದ್ದಿಲ್ಲವೇ ? ಹಾಗೆ ಮಾಡಬಹುದಿತ್ತು ಅನ್ನಿ. ಆದರೆ ಈ ಗುರುಗಳು ರೇವಣಸಿದ್ಧರಲ್ಲಾ ನೋಡಿ ಇಂಥಾ ಸ್ಥಳದಲ್ಲಿ ಇರಬಾರದು ಅಂತ ಗುರುಗಳು ಕಾಡಿಗೆ ಹೊರಟು ಬಿಟ್ಟರು. ಅಲ್ಲಿಗೆ ಕೊನೆಗಾಲ ಬಂತು. ಮರುಳಸಿದ್ಧಾರಾಧ್ಯರಿಗೆ ಪಟ್ಟ ಕಟ್ಟಿದರು. ( ಇವರು ಲಿಂಗದಲ್ಲಿ ಹುಟ್ಟಲೂ ಇಲ್ಲ. ತಂದೆ-ತಾಯಿಗಳಾರೆಂಬುದನ್ನು ಹೇಳಿಯೂ ಇಲ್ಲ ) ಉತ್ಸವ ವಗೈರೆ ಏನೂ ನಡೆಯಲಿಲ್ಲ. ಕಾಡಿನಲ್ಲಿ ಮಾಡುವುದಾದರೂ ಹೇಗೆ ! ಸದ್ಧರ್ಮ ಪೀಠ ಬೇರೆ ಊರಲ್ಲಿ ಉಳಿಯಿತು. ಅದನ್ನು ಪುನಃ ಎಲ್ಲಿಯಾದರೂ ಸ್ಥಾಪಿಸಿದ ಮೇಲಲ್ಲವೇ ಉತ್ಸವ. ಅಷ್ಟರಲ್ಲಿ ರಾಜನು, ಇವರು ಇನ್ನೂ ನೂತನ ಗುರುಗಳು. ಇವರನ್ನು ಈಗಲೇ ಹೆದರಿಸಿಕೊಳ್ಳುವುದು ಸುಲಭ ಎಂದು ಧಾಳಿ ಇಟ್ಟ ? ಗುರುಗಳು ಅವನ ತಾಮಸವೃತ್ತಿಗೆ ನೋಡಿ ಹೇಸಿ ಪರಳಿಗೆ ಪ್ರಯಾಣ ಮಾಡಿದರು. ಅಲ್ಲಿ ವೈದ್ಯನಾಥ ಲಿಂಗವನ್ನು ಪೂಜಿಸಿದರು. ಕಷ್ಟಕಾಲದಲ್ಲಿ ಇಷ್ಟಲಿಂಗ ವೆಂಥಾದ್ದು ಎಂದು ವೈದ್ಯನಾಥಲಿಂಗವನ್ನು ಪೂಜೆ ಮಾಡಿರಬೇಕು. ಆಗ ವೈದ್ಯನಾಥ ರೇವಣಸಿದ್ಧರಲ್ಲಿಗೆ ಹೋಗಲು ಹೇಳಿದ.

**ಪುಟ ೨೦೮.**

" ಹಿಂದೆ ನೀಲಕಂಠ ಶಿವಾಚಾರ್ಯರು ಜೈನರನ್ನು ಪಂಚಮ ಸಾಲಿಯ ದೀಕ್ಷೆಯಲ್ಲಿ ತಕ್ಕೊಂಡಂತೆ " ಅಂದರೆ ಪಂಚಮಸಾಲೆಯವರಿಗೆ ಯಾವ

ಜಗದ್ಗುರು ಸಿಂಹಾಸನಕ್ಕೂ ಅಧೀಶರಲ್ಲದ ನೀಲಕಂಠರು ಗುರು
ಗಳಿಂದಾಯ್ತು. ಈಗಂತೂ ನೀಲಕಂಠರ ಮತವೇ ಇಲ್ಲ. ಅವರು ಮಾಡಿ
ರುವ ದೀಕ್ಷೆಯಾದರೂ ಎಂಥಾದ್ದು ? ಪಂಚಮಸಾಲಿ ದೀಕ್ಷೆ ಇದನ್ನು
ಯಾವ ಶಾಸ್ತ್ರದಲ್ಲಿ ಹೇಳಿದೆಯೆಂದು ಕೇಳಬೇಡಿ. ಈಗ ಯಾವ ಶಾಸ್ತ್ರದಲ್ಲಿ
ಲ್ಲದಿದ್ದರೊ ಪ್ರಸಂಗ ಬಂದಾಗ ಶಾಸ್ತ್ರಗಳನ್ನು ಸೃಷ್ಟಿಸಲಿಕ್ಕೆ ನಮ್ಮ ಪಂಚ
ಜಗದ್ಗುರುಗಳು ಇದ್ದೇ ಇದ್ದಾರೆ. ಆ ಚಿಂತೆ ಇತರರಿಗೇಕೆ ? ಈಗ ತ್ರಿಜಗ
ದ್ಗುರುಗಳವರು ಈ ಮರುಳಾರಾಧ್ಯ ಚರಿತವನ್ನು ಸೃಷ್ಟಿಮಾಡಿಲ್ಲವೇ ಹಾಗೆ
ಮಾಡಿಯೇ ಮಾಡುತ್ತಾರೆ.

### ೧೫ ನೆಯ ಸಂಧಿ. ಪುಟ ೨೧೩.

ಮರುಳಸಿದ್ಧನು ಮಾಯಾಮರ್ಧನದ ವೇದಿಯನ್ನು ರೇವಣಸಿದ್ಧನಿಗೆ
ವಿವರಿಸುತ್ತಾನೆ ಆಗ ರೇವಣಸಿದ್ಧರು ಕಲ್ಯಾಣದೊರೆಯನ್ನು ಕಂಡು
ಉಜ್ಜಯಿನಿ ಕ್ಷೇತ್ರ ನಿರ್ಮಾಣಕ್ಕೆ ದ್ರವ್ಯ ಸಹಾಯ ಪಡೆಯಲು ತಿಳಿಸುತ್ತಾನೆ
ದೊರೆಯನ್ನು ಕಾಣುವುದಕ್ಕಿಂತ ಮುಂಚೆ ಹೊಲಿಯ ಮುಕ್ತಿಮುನಿಯಲ್ಲಿ
ಹೋಗಿ ಅವನ ಸಲಹೆ ಪಡೆದರೆ ಎಲ್ಲಾ ಅನುಕೂಲವಾಗುತ್ತದೆ. ಕ್ಷೇತ್ರ
ನಿರ್ಮಾಣವಾದ ಮೇಲೆ ಓರಂಗಲ್ಲಿಗೆ ಹೋಗಿ ಗಣಪತಿರಾಜನಿಂದ ದ್ರವ್ಯ
ಸಹಾಯ ಪಡೆದು ಉಜ್ಜಯಿನಿಯಲ್ಲಿ ಮರುಳಾರಾಧ್ಯಲಿಂಗ ಸ್ಥಾಪನೆ, ಆದಿ
ಮರುಳಸಿದ್ಧರವರೆಗಿನ ೧೪ ಜನ ಗುರುಗಳ ಮೂರ್ತಿ ಸ್ಥಾಪನೆ ಮಾಡಲು
ತಿಳಿಸುತ್ತಾನೆ.

ಆದರೆ ಮರುಳಸಿದ್ಧನು ಕೊನೆಯವರೆಗೂ ಹೊಲಿಯ ಮುಕ್ತಿಮುನಿ
ಯನ್ನು ಕಂಡನೆಂದು ಚರಿತೆಯಲ್ಲಿ ಹೇಳಿಯೇ ಇಲ್ಲ. ಕಲ್ಯಾಣದ ಅರಸನ
ಖಾಸಾ ಗುರುಗಳಾದ ಸಿದ್ಧಾಶ್ರಮ ಜ್ಞಾನಶಕ್ತಿ ಮುನಿಗಳು ದೊರೆಗೆ ಮರುಳ
ಸಿದ್ಧನಪ್ರಭಾವವನ್ನು ವಿಶದವಾಗಿಹೇಳಿ ಅವನನ್ನು ಕರೆಸಿ ಸತ್ಕರಿಸಿ ಅವನಿಂದ
ಧರ್ಮ ಪ್ರಚಾರ ಕಾರ್ಯ ಜರಗಲು ಸಹಾಯಕನಾಗಬೇಕೆಂದು ಹೇಳು
ತ್ತಾರೆ. ಆದರೆ ಈ ಮಾತನ್ನು ರೇವಣಸಿದ್ಧನ ಆಜ್ಞೆಯಂತೆ ಮರುಳಸಿದ್ಧನು
ತನ್ನನ್ನು ಕಂಡಮೇಲೆಯೇ ಹೇಳಬೇಕಾಗಿದ್ದಿತು ಇಷ್ಟಕ್ಕೂ ರೇವಣಸಿದ್ಧನು

ಕಾಣಲು ಹೇಳಿದ್ದು ಮುಕ್ತಿಮುನಿಯನ್ನು ಇವನು ಜ್ಞಾನಶಕ್ತಿಮುನಿ ಅವನು ಹೂಲಿಯುವನು. ಇವನು ಸಿದ್ಧಾಶ್ರಮದವನು ತನಗೆ ಗೊತ್ತಿಲ್ಲದ ಮತ್ತು ಸಂಬಂಧಪಡದ ವಿಷಯವನ್ನು ಈ ಜ್ಞಾನಶಕ್ತಿ ಮುನಿ ದೊರೆಗೆ ಹೇಳಿದನೆಂದಿರುವುದು ಯುಕ್ತಿಬದ್ಧವಲ್ಲ.

ಮರುಳಸಿದ್ಧನು ಕಲ್ಯಾಣಕ್ಕೆ ಬರುತ್ತಾನೆ. ರಾಜನಿಂದ ವೈಭವಯುಕ್ತ ಸತ್ಕಾರ ದೊರೆಯುತ್ತೆ ರೇವಣಸಿದ್ಧನು ಹಿಂದೆ ತನಗೆ ತಿಳಿಸಿದಂತೆ ರಾಜ ನಿಗೆ ವೀರಶೈವ ದೀಕ್ಷೆ ಕೊಡುವುದನ್ನು ಮರತೇ ಬಿಟ್ಟಿದ್ದಾನೆ. ಈ ರಾಜನಲ್ಲಿ ರೇವಣಸಿದ್ಧನ ಆಜ್ಞೆಯಂತೆ ಹೊಸ ಉಜ್ಜಯಿನಿಯ ನಿರ್ಮಾಣದ ವಿಷಯ ಮಾತ್ರ ಹೇಳಿ ಅದಕ್ಕೆ ಮಾತ್ರ ಸಹಾಯ ಪಡೆಯಬೇಕಾಗಿದ್ದಿತು. ಆ ದಕ್ಕೆ ಹೊಸ ಉಜ್ಜಯಿನಿಯ ನಿರ್ಮಾಣದ ಜೊತೆಗೆ ಮರುಳಾರಾಧ್ಯರ ಮತ್ತು ಗಳ ಜನ ಗುರುಗಳ ಮೂರ್ತಿ ಸ್ಥಾಪನೆ ಎಲ್ಲವನ್ನೂ ಹೇಳಿಬಿಡುತ್ತಾನೆ. ಈ ಎಲ್ಲಾ ಕಾರ್ಯಗಳನ್ನೂ ಕಲ್ಯಾಣದ ಅರಸನ ಧನ ಸಹಾಯದಿಂದಲೇ ಮಾಡಿಸಿ ಬಿಡುತ್ತಾನೆ. ರೇವಣಸಿದ್ಧನು ಹೇಳಿದಂತೆ ಮರುಳಾರಾಧ್ಯರಲಿಂಗ ಮತ್ತು ಗಳ ಜನ ಗುರುಗಳ ಮೂರ್ತಿ ಇವುಗಳ ಸ್ಥಾಪನೆಯ ಖರ್ಚನ್ನು ಓರಂಗಲ್ ಗಣಪತಿರಾಯನಿಂದ ಪಡೆಯಬೇಕಾಗಿದ್ದಿತು. ಆದರೆ ಮರುಳ ಸಿದ್ಧ ಹಾಗೆಮಾಡದೆ ಈ ಕೆಲಸಗಳೆಲ್ಲಾ ಕಲ್ಯಾಣದ ದೊರೆಯಿಂದ ಪೂರ್ತಿ ಯಾದ ಮೇಲೆ ತಾನು ನೂತನ ಉಜ್ಜಯಿನಿ ಸಿಂಹಾಸನದ ಮೇಲೆ ಆರೋಹಿ ಸಿದ ಮೇಲೆ ಓರಂಗಲ್ಲಿಗೆ ಹೋಗುತ್ತಾನೆ. ಓರಂಗಲ್ಲಿನಲ್ಲಿ ರಾಜನಿಗೆ ಸಂತಾನದ ವರವನ್ನು ಮಾತ್ರ ಕೊಟ್ಟು ಬರುತ್ತಾನೆ.

ಒಟ್ಟಿನಲ್ಲಿ ಕೊಟ್ಟೂರು ಬಳಿಯಿರುವ ಉಜ್ಜಯಿನಿಯ ಶ್ರೀಮರುಳಸಿದ್ಧ ದೇವಾಲಯವು ತಮ್ಮ ಹಕ್ಕಿನದೆಂದು, ಸಾಧಿಸಿಕೊಳ್ಳಲು ಆ ದೇವಸ್ಥಾನ ವನ್ನೇ ಮಠ, ಮಂದಿರ, ಸಿಂಹಾಸನ, ಕ್ಷೇತ್ರ ಮುಂತಾದ ಪದಗಳಿಗೆ ಸಾಕ್ಷ್ಯ ವನ್ನಾಗಿ ಮಾಡಿದ್ದಾರೆ. ಈ ದೃಷ್ಟಿಯಿಂದಲೇ ವಿಜಯಚರಿತದ ಆವಿರ್ಭಾವ ಇದರಲ್ಲಿ ಅನೇಕ ಸ್ಥಳಗಳಲ್ಲಿ ಈ ಉಜ್ಜಯಿನಿಯಲ್ಲಿರುವುದು ಮರುಳಾರಾಧ್ಯ ಲಿಂಗ (ಮರುಳಸಿದ್ಧನದಲ್ಲ) ವೆಂದು ಉಲ್ಲೇಖಿಸಲಾಗಿದೆ.

ಉದಾಹರಣೆ:—

ಪುಟ. ೨೧೩,

" ಈ ಹೊಸ ಉಜ್ಜಯಿನಿ ಪುರದಲ್ಲಿ ಮೂಲಪೀಠಾಚಾರ್ಯರಾದ ಶ್ರೀಮರುಳಾಧ್ಯರ ಮಠ-ಮಂದಿರಗಳನ್ನು ಕಟ್ಟಿಸಿರಿ ಆ ಮಠದಲ್ಲಿ ಮೂಲ ಕರ್ತರ ( ಮರುಳಾರಾಧ್ಯರ ಎಂದರ್ಥ ) ಮೂರ್ತಿಯಲ್ಲದೆ ಈವರೆಗಾದ ಹದಿನಾಲ್ಕು ಜನ ಗುರುಗಳ ಮೂರ್ತಿಗಳನ್ನು ಕ್ರಮದಿಂದ ಸ್ಥಾಪನೆಮಾಡಿರಿ "

ಪುಟ. ೨೧೫,

"ನಿಮ್ಮ ರಾಜ್ಯದಲ್ಲಿ ಮೂಲಪೀಠದ ಉಜ್ಜಯಿನೀ ನಾಮದಿಂದ ಹೊಸದೊಂದು ಪತ್ತನವನ್ನು ಕಟ್ಟಿಸಬೇಕು. ಅಲ್ಲಿ ಶ್ರೀಮರುಳಾರಾಧ್ಯರ ತರುವಾಯ ಹದಿನಾಲ್ಕು ಜನ ಗುರುಪರಂಪರೆಯ ಮೂರ್ತಿಗಳನ್ನು ಸ್ಥಾಪನೆ ಮಾಡಿಸುವೆ "

" ಗುರುಗಳ ಆದೇಶದಂತೆ ಮರುಳಾರಾಧ್ಯರ ಲಿಂಗವೂ, ಹದಿನಾಲ್ಕು ಜನ ಗುರುಗಳ ವಿಗ್ರಹಗಳೂ, ಮಂದಿರದಲ್ಲಿ ಮೆರೆದುವು. "

" ಶ್ರೀರೇವಣಸಿದ್ಧರು ಸುಂದರ ಲಿಂಗವನ್ನು ತಂದರು.......... ಅಂದೇ ಲಿಂಗಸ್ಥಾಪನೆ ಮಾಡಿದರು ............ ಆಗಲೇ ಎಲ್ಲಾ ಪೂರ್ವ ಗುರುಗಳ ಮೂರ್ತಿ ಸ್ಥಾಪನೆಯಾಯಿತು. "

ಈ ಮೇಲ್ಕಂಡ ಉಲ್ಲೇಖಗಳಿಂದ ಕರ್ನಾಟಕ ಉಜ್ಜಯಿನಿಯಲ್ಲಿರುವುದು ಮರುಳಾರಾಧ್ಯಲಿಂಗವೆಂದು ಸಾಧಿಸುವುದೇ ಈ ವಿಜಯಚರಿತದ ಮತ್ತು ಇದರ ಪಂಡಿತ ವರ್ಗದ ಉದ್ದೇಶವಾಗಿದೆಯೆಂಬುದು ಸ್ಪಷ್ಟವಾಗುತ್ತದೆ ಈ ಉದ್ದೇಶವಾದರೂ ಈ ವರ್ಗಕ್ಕೆ ಈಚೆಗೆ ಹುಟ್ಟಿರುವುದಾಗಿ ತೋರುತ್ತದೆ ಏಕೆಂದರೆ ಈಗಲೂ ಉಜ್ಜಯಿನಿಯಲ್ಲಿರುವ ಮರುಳಸಿದ್ಧೇಶ್ವರ ಲಿಂಗವು ನಿಜವಾಗಿಯೂ ಮರುಳಾಧ್ಯರ ಲಿಂಗವೇ ಆಗಿದ್ದಲ್ಲಿ ಜನರಾದರೂ ಹಾಗೆಯೇ ಕರೆಯುತ್ತಿದ್ದರು. ಜನರ ಮಾತಿರಲಿ, ಇದನ್ನು ಮರುಳಾರಾಧ್ಯ ಲಿಂಗವೆಂದು ಈ ಶ್ರೀಮರುಳಸಿದ್ಧಾಂಕದಲ್ಲಿರುವ ಯಾವ ಲೇಖಕರೂ

ಒಪ್ಪಿಲ್ಲ. ಸಂಪಾದಕರೂ ಸಹ ತಮ್ಮ ಪ್ರಕಟಣೆಯೊಂದರಲ್ಲಿ ಮರುಳಾ ರಾಧ್ಯ ವಿಜಯಚರಿತ ಗದ್ಯಾನುವಾದಕ್ಕೆ ಮರುಳಸಿದ್ಧ ಗದ್ಯ ಪುರಾಣವೆಂದು ಹೇಳಿ ಮರುಳಾರಾಧ್ಯ ವಾದವನ್ನು ತಿರಸ್ಕರಿಸಿರುತ್ತಾರೆ. ಎಲ್ಲರೂ ಮರುಳಾ ರಾಧ್ಯ, ಮರುಳಸಿದ್ಧ ಪದಗಳು ಅಭಿನ್ನ ವಾಚಕಗಳೆಂಬುದನ್ನು ಒಪ್ಪಿಕೊಂಡಿ ರುತ್ತಾರೆ.

ಉದಾ:— ಪರಿಚಯ ಪತ್ರದಲ್ಲಿರುವ ಶ್ರೀ ಕಾಶೀಜ್ಞಾನ ಸಿಂಹಾ ಸನದ ಅಧಿಪತಿಗಳಾದ ಶ್ರೀ ವೀರಭದ್ರ ಶಿವಾಚಾರ್ಯ ಸ್ವಾಮಿಗಳವರ ದಿನಾಂಕ ೧೮-೩-೪೭ ರಲ್ಲಿಯ ೩೩೧ ನೆಯ ಪತ್ರ. ಈ ಪತ್ರವು ಶ್ರೀ ಶೈಲದ ವಾಗೀಶ ಪಂಡಿತಾರಾಧ್ಯ ಸ್ವಾಮಿಗಳವರಿಗೆ ಬರೆಯಲ್ಪಟ್ಟುದಾಗಿದೆ.

"ಶ್ರೀ. ಮಹಾ ಪಾದದಿಂದ ಮರುಳಾರಾಧ್ಯ ವಿಜಯ. ಕಾವ್ಯವೂ, ಮರುಳಸಿದ್ಧಾಂಕದ ಲೇಖಗಳೂ ರಿಜಿಷ್ಟರ್ ಪಾರ್ಸಲಿನಿಂದ ಬಂದಿವೆ. ಸನ್ಮಾನ ದಿಂದ ಇದನ್ನು ಸ್ವೀಕರಿಸಿದೆ. ಶ್ರೀ ದಾರುಕ ಮರುಳಸಿದ್ಧರ ಬಗ್ಗೆ ಇಷ್ಟು ಶ್ರದ್ಧೆ ವಹಿಸಿ ಕಾರ್ಯ ನಡೆಸುತ್ತಿರುವುದು ವಿಶೇಷ ಪ್ರಶಸ್ತವೇ ಸರಿ. ಅಪ್ಪಣೆಯಂತೆ ಸಾಧ್ಯವಾದಷ್ಟು ಬೇಗನೆ ಎಲ್ಲಾ ಸರಿನೋಡಿ ಸಮರ್ಪಿಸಲಾ ಗುವುದು."

ವಿಜಯ ಚರಿತವು ಹೇಳುವಂತೆ ದಾರುಕನ ಅವತಾರ ಮರುಳಾ ರಾಧ್ಯನೇ ವಿನಾ ಮರುಳಸಿದ್ಧನಲ್ಲ. ಸಿದ್ಧೇಶ್ವರ ಲಿಂಗದಲ್ಲಿ ಉದ್ಭವಿಸಿ ಅಲ್ಲಿಯೇ ಐಕ್ಯನಾದವನು ಮರುಳಾರಾಧ್ಯನು ಮರುಳಸಿದ್ಧನಲ್ಲ. ಹೀಗಿರು ವಾಗ ದಾರುಕ ಮರುಳಾರಾಧ್ಯ ಎಂಬ ಪ್ರಯೋಗವಾಗಬೇಕಾಗಿತ್ತು. ಆದರೆ ಮೇಲ್ಕಂಡ ಶ್ರೀ ಶ್ರೀಗಳವರ ಪತ್ರದಲ್ಲಿ ದಾರುಕ ಮರುಳಸಿದ್ಧ ಎಂಬ ಪ್ರಯೋಗವಿದೆ. ಇದರಿಂದ ಈ ಪತ್ರ ಬರೆದಿರುವ ಶ್ರೀ ಶ್ರೀಗಳವರ ಅಭಿ ಪ್ರಾಯದಲ್ಲಿ ಮರುಳಾರಾಧ್ಯ ಮರುಳಸಿದ್ಧ ಪದಗಳು ಅಭಿನ್ನವಾಚಕ (ಏಕವ್ಯಕ್ತಿ ವಾಚಕ) ಗಳೆಂಬುದು ಸುಸ್ಪಷ್ಟವಾಗಿದೆ. ಕಾಶೀವೀರಭದ್ರ ಸ್ವಾಮಿಗಳವರೂ ಸಹ ಶ್ರೀಮರುಳ ಸಿದ್ಧಾಂಕಕ್ಕೆ ತಮ್ಮ ಮುದ್ರೆಯನ್ನೊತ್ತಿ ದ್ದಾರೆಂದು ಅವರ ಪತ್ರದಿಂದ ಸ್ಪಷ್ಟವಾಗುತ್ತದೆ.

## ಪುಟ. ೧೪ ರಲ್ಲಿ, ಸಂಪಾದಕೀಯದಲ್ಲಿ

"ಪ್ರಸಿದ್ಧವಾದ ಮರುಳಸಿದ್ಧರ ದೇವಾಲಯವೇ ಬೇರೆ, ಆ ಮಹಿಮರ ಸೇವಕ ವರ್ಗವಾದ ಮಾದಿಗರ ಸಿಂದೋಗಿಯ ಮರುಳಪ್ಪನ ಸಮಾಧಿ ಅಥವಾ ದೇವಾಲಯವೇ ಬೇರೆಯೆಂಬುದು ಆಗ ಸ್ಪಷ್ಟವಾಯಿತು."

ಈ ಮೇಲ್ಕಂಡ ಲೇಖನದಲ್ಲಿ "ಪ್ರಸಿದ್ಧವಾದ ಮರುಳಸಿದ್ಧರ ದೇವಾಲಯ" ಎಂಬ ಪದಗಳಿವೆ. ಆದರೆ ವಿಜಯ ಚರಿತ ಹೇಳಿರುವಂತೆ ಮರುಳಸಿದ್ಧನ ದೇವಾಲಯವು ಉಜ್ಜಯಿನಿಯಲ್ಲಿಲ್ಲ. ಅಲ್ಲಿ ಈ ಮರುಳಸಿದ್ಧನಿಂದ ಕಲ್ಯಾಣದರಸನ ಸಹಾಯದಿಂದ ಕಟ್ಟಿಸಲ್ಪಟ್ಟ ಮರುಳಾರಾಧ್ಯರ ದೇವಾಲಯವಿದೆ. ಇಲ್ಲಿ ಸಂಪಾದಕರು ಉಜ್ಜಯಿನಿಯಲ್ಲಿರುವ ವಿಜಯಚರಿತದ ಅದೇ ಮರುಳಾರಾಧ್ಯರ ದೇವಾಲಯವನ್ನು ಪ್ರಸಿದ್ಧವಾದ ಮರುಳಸಿದ್ಧ ದೇವಾಲಯವೆಂದು ಉಲ್ಲೇಖಿಸಿರುತ್ತಾರಾಗಿ ಸಂಪಾದಕರು ಮರುಳಾರಾಧ್ಯ ಮರುಳಸಿದ್ಧ ಪದಗಳು ಏಕ-ವ್ಯಕ್ತಿವಾಚಕ ಪದಗಳೆಂಬುದನ್ನು ಇಲ್ಲಿ ಒಪ್ಪಿಕೊಂಡಿರುವುದು ಸ್ಪಷ್ಟವಾಗಿದೆ.

## ಪುಟಗಳು ೧೪-೧೫ ರಲ್ಲಿ

ಹೂಲಿಯ ಬೃಹನ್ಮಠದ ನೀಲಕಂಠ ಶಿವಾಚಾರ್ಯರು ದಿನಾಂಕ ೧೮-೮ ೪೬ ರಲ್ಲಿ ಉಜ್ಜಯಿನಿ ಶ್ರೀ ಸಿದ್ಧೇಶ್ವರ ಸ್ವಾಮಿಗಳಿಗೂ, ಶ್ರೀ ಶೈಲದ ಶ್ರೀ ವಾಗೀಶ ಪಂಡಿತಾರಾಧ್ಯ ಸ್ವಾಮಿಗಳಿಗೂ ಬರೆದಿರುವ ತಮ್ಮ ಪತ್ರದಲ್ಲಿ:-

"ಅ. ನ. ಕೃಷ್ಣರಾಯರು ಮಾದಿಗ ಮರುಳಸಿದ್ಧನನ್ನು ಸಿಂಹಾಸನ-ಸ್ವಾಮಿಯೆಂದು ಬರೆದು ಈ ಉತ್ತರ ಕರ್ನಾಟಕದಲ್ಲಿ ಗೊಂದಲವನ್ನೆಬ್ಬಿಸಿರುವರಲ್ಲದೆ ಅವರಿಗೆ ಉತ್ತೇಜನ ಕೊಟ್ಟ ವಿರೋಧಿ ಪಂಗಡದವರು ಶ್ರೀ ಸದ್ಧರ್ಮ ಪೀಠದ ಬಗ್ಗೆ ಅನಾದರವನ್ನೂ, ಅವಹೇಳನವನ್ನೂ ಹುಟ್ಟಿಸುತ್ತಿದ್ದಾರೆ. ಈ ವಿಷಯವನ್ನು ತಿಳಿದು ನಾವು ಶ್ರೀ ಮರುಳಾರಾಧ್ಯರ ಪ್ರೀತ್ಯರ್ಥ ಏಕಭೋಜನ ವ್ರತವನ್ನು ಹಿಡಿದು ಅವರ ಪ್ರಾಚೀನ ಇತಿಹಾಸ ಗ್ರಂಥಗಳನ್ನು ಶೋಧಿಸುತ್ತಿರಲು ಮರುಳಾರಾಧ್ಯ ವಿಜಯವೆಂಬ ಅಪ್ರತಿಮ ಗ್ರಂಥವು ದೊರೆಯಿತು."

ಈ ಪತ್ರ ಲೇಖಕರ ಅಭಿಪ್ರಾಯದಲ್ಲಿ ಮರುಳಸಿದ್ಧನೆಂದರೆ ಮರುಳಾರಾಧ್ಯರ ತರುವಾಯ ೧೬ ನೆಯವನಾಗಿ ಉತ್ತರೋಜ್ಜಯಿನಿಯನ್ನು ಬಿಟ್ಟು ದಕ್ಷಿಣೋಜ್ಜಯಿನಿಗೆ ಬಂದು ಮಠ, ಮಂದಿರಗಳನ್ನು ಸ್ಥಾಪಿಸಿದವನು. ಇವನಿಗೆ ಇವರು ವಿಜಯ ಚರಿತವ ಆಧಾರದ ಮೇಲೆ ಆದಿ ಮರಳಸಿದ್ಧನೆಂದು ಕರೆಯುತ್ತಾರೆ. ಶ್ರೀ ಅ. ನ. ಕೃ. ರವರ ದೇವಕನ್ಯ ಕಾವ್ಯದಲ್ಲಿ ವಾದಿಗನೆಂದು ಹೇಳಿರುವುದು ಇವನನ್ನೇ ಎಂಬುದನ್ನೂ, ಮರುಳಾರಾಧ್ಯ ಮರುಳಸಿದ್ಧ ಪದಗಳು ಭಿನ್ನವ್ಯಕ್ತಿ ವಾಚಕಗಳೆಂಬುದನ್ನೂ ಈ ಪತ್ರಕಾರರು ತಮ್ಮ ಅಭಿಪ್ರಾಯವಿರುವುದಾಗಿ ಒಪ್ಪುತ್ತಾರೆಯಷ್ಟೆ. ಅಂದರೆ ಶ್ರೀ ಅ. ನ. ಕೃ. ರವರು ಅವಮಾನಗೊಳಿಸಿ ನೋವನ್ನುಂಟುಮಾಡಿರುವುದು ಆದಿ ಮರಳಸಿದ್ಧನಿಗೆ ಆದ್ದರಿಂದ ಅಪ್ರಸನ್ನನಾಗಿರುವವನು ಆದಿ ಮರುಳಸಿದ್ಧನು. ಈಗ ಈ ಪತ್ರಕಾರರು ಈ ಆದಿ ಮರುಳಸಿದ್ಧನ ಅಪ್ರಸನ್ನತೆಯನ್ನು ನಿವಾರಿಸಬೇಕಾಗಿದೆ. ಆದ್ದರಿಂದ ಪತ್ರಕಾರರ ಏಕಭೋಜನ ವ್ರತವು ಆದಿ ಮರುಳಸಿದ್ಧನ ಅಪ್ರಸನ್ನತೆಯ ನಿವಾರಣೆಗಾಗಿ ಆಗಬೇಕಾಗಿದೆ. ಆದರೆ ಇವರು ಏಕಭೋಜನ ವ್ರತದಿಂದ ಪ್ರೀತಿಗೊಳಿಸ ಹೊರಟಿರುವುದು ಮರುಳಾರಾಧ್ಯರನ್ನು. ಇದರಿಂದ ಇವರೂ ಸಹ ಮರುಳಾರಾಧ್ಯ ಮರುಳಸಿದ್ಧ ಪದಗಳ ಏಕವ್ಯಕ್ತಿ ವಾಚಕತ್ವವನ್ನು ಒಪ್ಪಿಕೊಂಡಿದ್ದಾರೆಂದು ಅರ್ಥವಾಗುವುದಿಲ್ಲವೇ!

### ಪುಟ. ೨೦ ರಲ್ಲಿ,

### ಉಜ್ಜಯಿನಿ ಕ್ಷೇತ್ರ ಸಂಕ್ಷೇಪ ಪರಿಚಯ.

ಇದರ ಸಂಗ್ರಾಹಕರು ಶ್ರೀ ಎಂ. ವಿ. ಮಠದ ಹರಿಹರ ಇವರು. ಇವರು ವೀರಶೈವ ಧರ್ಮಾಲಯದ(ಶ್ರೀಮರುಳಸಿದ್ಧಾಂಕ ಹೊರಡಿಸಲಿಕ್ಕಾಗಿ ಅವತರಿಸಿದ್ದು) ವ್ಯವಸ್ಥಾಪಕರು. ಇದರ ಸಂಪಾದಕದ್ವಯರಲ್ಲಿ ಇವರೂ ಒಬ್ಬರೂ. ಇವರು ಕ್ಷೇತ್ರಪರಿಚಯದಲ್ಲಿ:—

೧) " ಉಜ್ಜಯಿನಿ ಕ್ಷೇತ್ರವು ಹದಿನಾರು ಮೈಲಿ ವಿಸ್ತಾರವುಳ್ಳ ಭೂಮಿಯನ್ನು ವ್ಯಾಪಿಸಿದೆ. ಈ ಭೂ ಭಾಗದ ಮಧ್ಯದಲ್ಲಿ ಶ್ರೀ ಮರುಳಸಿದ್ಧೇಶ್ವರ ಮಹಾಲಿಂಗ ವುಂಟು "

## ಪುಟ ೨೧ ರಲ್ಲಿ

೨) " ಶ್ರೀ ಮರುಳ ಸಿದ್ದೇಶ್ವರನು ಈ ಕ್ಷೇತ್ರದ ಮುಖ್ಯ ಅಧಿಪತಿ "

೩) " ಈ ಕ್ಷೇತ್ರದಲ್ಲಿ ಚತುಷ್ಪಾದಗಳನ್ನೂರಿ ನಿಂತಿರುವ ಸದ್ಧರ್ಮ ರೂಪಿ ನಂದೀಶ್ವರನು ಮರುಳಸಿದ್ಧೇಶ್ವರ ದೇವಾಲಯದ ಶಿಖರದ ಗುಮ್ಮಟ ದಲ್ಲಿ ಪ್ರತಿಮಾ ರೂಪದಿಂದ ಸ್ಥಾಪಿಸಲ್ಪಟ್ಟಿರುವನು. "

೪) ". ಈ ಕ್ಷೇತ್ರದಲ್ಲಿ ಮರುಳಸಿದ್ಧೇಶ್ವರ ಸ್ವಾಮಿಯು ಜಗದಾ ಚಾರ್ಯ ರೂಪದಿಂದ ಶೋಭಿಸುತ್ತಾ ಸದ್ಧರ್ಮ ನಾಮಕ ಪೀಠವನ್ನು ನೆಲೆಗೊಳಿಸಿದ್ದಾನೆ "

ಇವರ ವಿಜಯ ಚರಿತವು ಹೇಳಿರುವಂತೆ ಈ ಕ್ಷೇತ್ರ (ಉಜ್ಜಯಿನಿ) ದಲ್ಲಿ ಆದಿ ಮರುಳಸಿದ್ಧನಿಂದ ಸ್ಥಾಪಿಸಲ್ಪಟ್ಟ ಮರುಳಾರಾಧ್ಯ ದೇವಾಲಯ ವಿರಬೇಕೇ ವಿನಾ ಮರುಳಸಿದ್ಧ ದೇವಾಲಯವಲ್ಲ.

೫) " ಮರುಳಸಿದ್ಧನಿಗೆ ಶಿವಾಗಮಗಳಲ್ಲಿ ನಂದಿಗೋತ್ರ ನಾಥ ನೆಂದು ಸ್ತುತಿಯಿದೆ. "

ಮೂಲ ಆಚಾರ್ಯನಾದ ಮರುಳಾರಾಧ್ಯನು ಗೋತ್ರನಾಥನಾಗ ಬೇಕೇ ವಿನಾ ೧೬ ನೆಯ ಮರುಳಸಿದ್ಧನಲ್ಲ.

೬) ಈ ಕ್ಷೇತ್ರದಲ್ಲಿರುವ ಶಿವಲಿಂಗಗಳು:-

" ಅನಾದಿ ಮರುಳಸಿದ್ಧೇಶ್ವರಲಿಂಗ (ಕ್ಷೇತ್ರಾಧಿಪತಿ) "

ವಿಜಯಚರಿತ ಹೇಳುವಂತೆ ರೇವಣಸಿದ್ಧರಿಂದ ಇಲ್ಲಿ ಸ್ಥಾಪಿಸಲ್ಪಟ್ಟ ಮರುಳಾರಾಧ್ಯಲಿಂಗವೇ ಕ್ಷೇತ್ರಾಧಿಪತಿಯಾಗಬೇಕು.

## ಪುಟ ೨೪ ರಲ್ಲಿ

೭) " ಈಶ್ವರಮೂರ್ತಿಗಳು ಎಂಬಲ್ಲಿ ಶ್ರೀ ಮರುಳಸಿದ್ಧೇಶ್ವರ ಮಹಾಲಿಂಗ " ಎಂದು ಹೇಳಲಾಗಿದೆ. ಚರಿತದಲ್ಲಿ ಕರ್ನಾಟಕ ಉಜ್ಜಯಿನಿ ಯಲ್ಲಿ ಮರುಳಸಿದ್ಧೇಶ್ವರನನ್ನು ಸ್ಥಾಪಿಸಿದ ವಿಷಯವನ್ನು ಹೇಳಿಯೇ ಇಲ್ಲ.

ಅ) ಮರುಳಸಿದ್ಧೇಶ್ವರ ಮಹಾಲಿಂಗ:-

" ಇದು ಜಗದ್ಗುರು ಸದ್ಧರ್ಮ ಸಿಂಹಾಸನ ಮಠದ ಆವರಣದ ಮಧ್ಯಭಾಗದಲ್ಲಿ ಅತ್ಯಂತ ಸುಂದರವಾದ ಮಂದಿರದ ಒಳಭಾಗ (ಗರ್ಭಾಂಕಣ)ದಲ್ಲಿ ಉತ್ತರಾಭಿಮುಖವಾಗಿದೆ. ಪೂರ್ವ-ಪಶ್ಚಿಮ ಉತ್ತರ ದ್ವಾರಗಳಿಂದ ಕೂಡಿದ ಈ ಮಂದಿರವು ಜಗದ್ಗುರು ಮಹಾಪಾದರ ವ... ದಲ್ಲಿದ್ದು."

ಈ ಮೇಲ್ಕಂಡ ಎಲ್ಲಾ ಉದಾಹೃತ ಭಾಗಗಳನ್ನು ಪರಿಶೀಲಿಸಿದರೆ ಮರುಳಾರಾಧ್ಯ ಮರುಳಸಿದ್ಧ ಪದಗಳು ಏಕವ್ಯಕ್ತಿ ವಾಚಕವಾಗಿಯೇ ಪ್ರಯೋಗಿಸಲ್ಪಟ್ಟವೆಯೆಂಬುದು ಸ್ಪಷ್ಟವಾಗುತ್ತದೆ. ಉದಾಹೃತ ಭಾಗಗಳಲ್ಲಿ ಹೇಳಿರುವ ಸ್ಥಳಗಳಲ್ಲಿ ವಿಜಯಚರಿತ ಹೇಳುವಂತೆ ಮರುಳಾರಾಧ್ಯನೆಂಬ ಪ್ರತ್ಯೇಕ ವ್ಯಕ್ತಿಯಿದ್ದುದಾದರೆ ಆ ಮರುಳಾರಾಧ್ಯನ ಹೆಸರನ್ನೇ ಉಲ್ಲೇಖಿಸಬೇಕಾಗಿತ್ತು. ಶ್ರೀ ಎಂ. ವಿ. ಮಠರು ಅನೇಕ ಮರುಳಸಿದ್ಧ ವಾದವನ್ನು ಸಾಧಿಸುವ ಸಲುವಾಗಿಯೇ ಇಷ್ಟೆಲ್ಲಾ ಆರ್ಭಟಗಳನ್ನು ಮಾಡಿದವರಾಗಿದ್ದಾರೆ. ಆದರೆ ತಾವೇ ಮರುಳಾರಾಧ್ಯ ಎಂಬ ವಾಚ್ಯವನ್ನು ಮರುಳಸಿದ್ಧ ಎಂಬ ವಾಚಕದ ಪ್ರಯೋಗದಿಂದ ಗ್ರಹಿಸಲು ಅವಕಾಶ ಮಾಡಿ ಮರುಳಾರಾಧ್ಯ ಮರುಳಸಿದ್ಧ ಪದಗಳು ಏಕವ್ಯಕ್ತಿ ವಾಚಕಗಳೆಂಬುದನ್ನು ಇಲ್ಲಿ ಎಂಟು ಬಾರಿ ಒಪ್ಪಿಕೊಂಡಿರುತ್ತಾರೆ. ಪುಟ ೩೨-೩೩ರ ಮಧ್ಯದಲ್ಲಿ ಒಂದು ಚಿತ್ರವಿದೆ. ಇದು ಉಜ್ಜಯಿನಿ ಮರುಳಸಿದ್ಧೇಶ್ವರನದೆಂದು ಸಂಪಾದಕರು ಬರೆಯುತ್ತಾರೆ. ಈ ಚಿತ್ರವೇ ವಿಜಯಚರಿತದ ಮರುಳಾರಾಧ್ಯ ಲಿಂಗದ್ದು.

ಪುಟ ೪೨. (ಶ್ರೀ ಶ್ರೀಗಳವರು)

" ಕೊಟ್ಟೂರು ಉಜ್ಜಯಿನಿಯ ಮರುಳಸಿದ್ಧೇಶ್ವರ ದೇವಸ್ಥಾನದ ರಚನೆ, ಶಿಥಿಲವಾದ ಉಪ್ಪಡಂದ ಕೆಲವು ಶೇಷಗಳು" ಇದು ಶ್ರೀಗಳವರ ಲೇಖನದ ಉದಾಹೃತ ಭಾಗ. ಇಲ್ಲಿ ಶ್ರೀಗಳವರು ಚರಿತದ ಮರುಳಾರಾಧ್ಯಲಿಂಗದ ದೇವಸ್ಥಾನವನ್ನು ಮರುಳಸಿದ್ಧೇಶ್ವರ ದೇವಸ್ಥಾನವೆಂದು ಕರೆದಿರುತ್ತಾರೆ.

## ಪುಟ ೬೩.

" ಸಿದ್ಧೇಶಲಿಂಗವು ಈ ಒಂದನೇ ಉಜ್ಜಯಿನಿಯಲ್ಲೇ ಇರುವುದನ್ನು ಇಬ್ಬರು ಕವಿಗಳೂ ಒಪ್ಪುವರು........................ಎರಡನೆಯ ಉಜ್ಜಯಿನಿಯಲ್ಲಿರುವ ಲಿಂಗವು ಮರುಳ ಸಿದ್ಧೇಶ್ವರ ಎಂದು ಗ್ರಹಿಸಬೇಕು. "

## ಪುಟ ೧೨೭.

" ಕರ್ನಾಟಕದ ಈಗಿನ ಉಜ್ಜಯಿನಿಯಲ್ಲಿ ಮೆರೆಯುತ್ತಿರುವ ಸಿದ್ಧೇಶ್ವರ ಲಿಂಗವನ್ನು ರೇವಣಸಿದ್ಧರು ಸ್ಥಾಪಿಸಿದಂತೆಯೂ, "

## ಪುಟ ೨೧೫. (ವಿಜಯಚರಿತೆ).

" ಗುರುಗಳ ಆದೇಶದಂತೆ ಮರುಳಾರಾಧ್ಯರ ಲಿಂಗವೂ, ೧ಳ ಜನ ಗುರುಗಳ ವಿಗ್ರಹಗಳೂ, (ಕರ್ನಾಟಕ ಉಜ್ಜಯಿನಿಯ ಎಂದು ಅರ್ಥ.) ಮಂದಿರದಲ್ಲಿ ಮೆರದವು. "

ಇಲ್ಲಿ ಮರುಳ ಸಿದ್ಧೇಶ್ವರ, ಸಿದ್ಧೇಶ್ವರ, ಮರುಳಾರಾಧ್ಯ ಲಿಂಗ. ಈ ಮೂರು ಪದಗಳೂ ಏಕ ವ್ಯಕ್ತಿ ವಾಚಕ ಪದಗಳೆಂದು ಸ್ಪಷ್ಟವಾಗುತ್ತವೆ.

## ಪುಟ ೭೦. (ಪುರಾಣಿಕ ಮಠದ ವಿರೂಪಾಕ್ಷ ಶಾಸ್ತ್ರಿಗಳ ಲೇಖನದಲ್ಲಿ)

" ಪಂಚಾಚಾರ್ಯರಲ್ಲಿ ಪರಿಗಣಿತನಾದ ಆಚಾರ್ಯ ಮರುಳಸಿದ್ಧ ಅಥವಾ ಮರುಳಾರಾಧ್ಯನೆಂದು ಸ್ಪಷ್ಟವಾಗಿ ಹೇಳಲವಕಾಶವಿಲ್ಲೆಂದು. " ಇದು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಲೇಖನದಲ್ಲಿದೆ. ಇದನ್ನು ಶ್ರೀ ವಿರೂಪಾಕ್ಷ ಶಾಸ್ತ್ರಿಗಳು ಬಳಸಿಕೊಂಡಿದ್ದಾರೆ. ಇಲ್ಲಿ ಮರುಳಸಿದ್ಧ ಮತ್ತು ಮರುಳಾರಾಧ್ಯ ಈ ಪದಗಳ ಮಧ್ಯದಲ್ಲಿರುವ ಅಥವಾ ಶಬ್ದವು ಆ ಎರಡು ಪದಗಳ ಏಕವ್ಯಕ್ತಿ ವಾಚಕತ್ವವನ್ನು ಸೂಚಿಸುತ್ತವೆ.

## ಪುಟ ೭೧.

" ಮಹಾನುಭಾವರಾದ ಶ್ರೀ ಜಗದ್ಗುರು ಮರುಳಸಿದ್ಧ ಮೂಲಾಚಾರ್ಯರ ವಿಷಯ ಪ್ರತಿಪಾದಿಸುವ ಆಧಾರ ಗ್ರಂಥಗಳನ್ನು ಇಲ್ಲಿ ಇನ್ನೊಂದು

ಸಾರಿ ವಿವರಿಸಲಾಗುವುದು." ಇವರು ಕೊಟ್ಟಿರುವ ಗ್ರಂಥಗಳನ್ನು ಕೆ
ಉಲ್ಲೇಖಿಸಿ ಅವುಗಳಲ್ಲಿ ಕೆಲವು ಗ್ರಂಥಗಳಲ್ಲಿ ಹೇಳಿರುವ ಈ ಸಂಬಂಧಪ
ವಿಷಯವನ್ನು ಉದಾಹರಿಸಿದ್ದೇನೆ.

೧) ವೀರಲೈಂಗೋಪನಿಷತ್.

"ವಾಮದೇವಮುಖಮಾಸೀತ್ ದಾರುಕಾಚಾರ್ಯಾರಾಧ್ಯ ಉದ್ಭವತಿ

೨) ಸ್ವಾಯಂಭುವಾಗಮ.

" ತದ್ವನ್ಮಾರುಳಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ ।
ಸಿದ್ಧೇಶ ಲಿಂಗಾಜ್ಜನನಂ ಸ್ಥಾನಮುಜ್ಜಯಿನೀಪುರೇ ॥

೩) ಸುಪ್ರಭೇದಾಗಮ.

" ಪೂರ್ವಂಮಮಮುಖಾಜ್ಜಾತೋ । ವಾಮದೇವಾಚ್ಚ ದಾರುಕಃ ।

---

ಸ ಏವ ಮರುಳಾರಾಧ್ಯೋ । ಭೂತ್ವಾಲೀಲಾಮಥಕರೋತ್ ॥
ನಂದಿಗೋತ್ರಾಧಿನಾಥಶ್ಚ । ಸಿಂಹಾಸನಪತಿಶ್ಚಯಃ ।
ಮರುಳಾರಾಧ್ಯಸನ್ನಾಮಾ । ಜಗದ್ಗುರುತಮಶ್ಚಯಃ ॥

೪) ರೇಣುಕ ವಿಜಯ (ಸಂಸ್ಕೃತ)

" ಗೋಗಿರಿ ಭೈರವಗಿರಿ ಪ್ರಮುಖ ಪಾವನತಮ ಪರ್ವತ ಪ್ರಕ
ಗರಿವೇಷ್ಟಿತಂ, ಗಣನಾತೀತ ಶಿವಲಿಂಗಸಂಘ ಸಂಗತ ಸಿದ್ಧೇಶ್ವರಾಯತನೋ
ಪಶೋಭಿತ ಶೃಂಗಾಟಕಂ,..........................ಉಜ್ಜಯಿನೀ ಮಹಾಕ್ಷೇತ್ರ
ಮಾಸಾದ್ಯ ತನ್ಮಧ್ಯೇ ವಿದ್ಯೋತಮಾನಸದ್ಧರ್ಮ ಪೀಠಮಧಿಷ್ಠಂತಂ......
................ಶ್ರೀ ಮರುಳಾರಾಧ್ಯ ದೇಶಿಕಂ....................ಸಂದೃಷ್ಟೇ."

೫) ಶ್ರೀಕರಭಾಷ್ಯ.

" ಸಮಗ್ರೇಣ ದೇಶಿಕೇಂದ್ರ ಧೃತಷಟ್ಲಿಂಗಾವಧಾನೋಜ್ವಲಂ
ಸಿದ್ಧಾರ್ಯಂ ಮರುಳಪ್ರಭುಂ, ಬುಧನುತಂ ತರಿಮುನ್ಮಹೇ ಶ್ರೇಯಸೇ

ಹೀಗೆಯೇ ವೀರಶೈವಾಚಾರ ಪ್ರದೀಪಿಕಾ, ವೀರಶೈವ ಕೌಸ್ತುಭ, ವೀ
ಶೈವ ಸದಾಚಾರ ಸಂಗ್ರಹ, ವೀರಶೈವಾನ್ವಯ ಚಂದ್ರಿಕಾ, ವೀರಶೈವಾಮೃತ
ಪುರಾಣ, ಚನ್ನಬಸವ ಪುರಾಣ, ಗಾಜುದ್ಗಣ ಪುರಾಣ, ರಾಜಶೇಖರ ವಿಳಾಸ
ವಿವೇಕ ಚಿಂತಾಮಣಿ, ಚತುರಾಚಾರ್ಯ ಪುರಾಣ ಇತ್ಯಾದಿ" ಈ ವೀ

ಶಾಸ್ತ್ರಿಗಳು ೧೫ ಪುಸ್ತಕಗಳನ್ನು ಉಲ್ಲೇಖಿಸಿದ್ದಾರೆ. ಇವುಗಳಲ್ಲಿ ಕೆಲವು ಗ್ರಂಥಗಳ ವಿಷಯವನ್ನು ನಾನು ಮೇಲೆಯೇ ವಿವರಿಸಿದ್ದೇನೆ. ಈಗಾಗಲೇ ಈ ಬಗ್ಗೆ ಸಾಕಷ್ಟು ನಿದರ್ಶನಗಳನ್ನು ಕೊಟ್ಟಿರುವುದರಿಂದಲೂ, ಈ ಮುಂದೆಯೂ ಇನ್ನೂ ಕೆಲವು ನಿದರ್ಶನಗಳನ್ನು ಕೊಡಲಿರುವುದರಿಂದಲೂ ಇಲ್ಲಿ ವಿಸ್ತಾರವನ್ನು ನಿಲ್ಲಿಸಿದ್ದೇನೆ. ಶ್ರೀ ಶಾಸ್ತ್ರಿಗಳು "ಶ್ರೀ ಜಗದ್ಗುರು ಮರುಳಸಿದ್ಧ ಮೂಲಾಚಾರ್ಯ" ಎಂದು ಪ್ರಯೋಗಿಸುತ್ತಾರೆ. ಮರುಳ ಸಿದ್ಧನೆಂದರೆ ಚರಿತದ ಆದಿ ಮರುಳಸಿದ್ಧನೇ. ಉದಾಹೃತ ಗ್ರಂಥ ಭಾಗ ಗಳಲ್ಲಿರುವ ದಾರುಕಾಚಾರ್ಯಾರಾಧ್ಯ, ಮರುಳಸಿದ್ಧ, ಮರುಳಾರಾಧ್ಯ, ಮರುಳಪ್ರಭು, ಈ ಎಲ್ಲಾ ಪದಗಳೂ ಉಜ್ಜಯಿನಿ ಜಗದ್ಗುರು (ಆದಿ)ಮರುಳ ಸಿದ್ಧನ ಬಗ್ಗೆ ಆಧಾರಗಳೆಂದು ಶಾಸ್ತ್ರಿಗಳ ಆಶಯ. ಆದ್ದರಿಂದ ಈ ಎಲ್ಲಾ ಪದಗಳೂ ಪರ್ಯಾಯ ವಾಚಕಗಳೆಂಬುದು ನಿರ್ವಿವಾದ.

**ಪುಟ ೭೨.** (ರುದ್ರಯ್ಯನವರು, ಯರೆಹಂಚಿನಾಳು ಇವರ ಲೇಖ.)

"ಶಿವಾಗಮಗಳು ಮೂಲ ಮರುಳಸಿದ್ಧರನ್ನು ಶಿವಲಿಂಗ ಮುಖೋ ದ್ಭೂತರೆಂದು ಹೇಳುತ್ತಿರುವವು."

ವಿಜಯಚರಿತದಲ್ಲಿ ಮರುಳಾರಾಧ್ಯನು ಮಾತ್ರ ಲಿಂಗೋದ್ಭವನು. ಲಿಂಗೋದ್ಭವ ವ್ಯಕ್ತಿ ಒಬ್ಬನೇ ವಿನಾ ಎರಡು ಜನರಲ್ಲ. ಆದ್ದರಿಂದ ಈ ಲೇಖಕರು ಮರುಳಸಿದ್ಧನು ಲಿಂಗೋದ್ಭವನೆಂದು ಮರುಳಾರಾಧ್ಯನನ್ನೇ ಕರೆದಿರುತ್ತಾರೆ.

**ಪುಟ ೧೩೦.**

"ಉಜ್ಜಯಿನಿಯಿಂದ ಮರುಳಸಿದ್ಧೇಶ್ವರ ಸ್ವಾಮಿಯನ್ನು ಬರಮಾಡಿ ಕೊಂಡು ಸುಖಿಸಿದನೆಂದು" ಶ್ರೀಗಳು ಹೇಳುತ್ತಾರೆ. ಚರಿತದಲ್ಲಿ ಹೇಳಿ ರುವ ಮರುಳಾರಾಧ್ಯಲಿಂಗವೇ ಇಲ್ಲಿ ಮರುಳಸಿದ್ಧೇಶ್ವರ ಸ್ವಾಮಿಯಾಗಿದೆ.

**ಪುಟ ೧೪೫.** (ಶ್ರೀ ಅಮರನಾಥ ಶಾಸ್ತ್ರಿಗಳು ಬನ್ನಿಕೊಪ್ಪ)

"ಪ್ರತಿಯುಗದಲ್ಲಿ ಶಿವನಮುಖಗಳಿಂದ ಉದ್ಭವಿಸಿದ ಏಕೋರಾಮ, ಪಂಡಿತಾರಾಧ್ಯ, ರೇವಣಾರಾಧ್ಯ, ಮರುಳಾರಾಧ್ಯ, ಮತ್ತು ವಿಶ್ವಾರಾಧ್ಯ ಎಂಬ ಐದು ಜನ ಯತಿಗಳಿಂದ ಈ ಮತವು ಸ್ಥಾಪಿಸಲ್ಪಟ್ಟಿತು."

## ಪುಟ ೧೪೬.

" ಹೀಗಿದ್ದು ವೀರಶೈವ ಮತಸ್ಥಾಪಕ ಪಂಚಾಚಾರ್ಯರಲ್ಲಿ ಒಬ್ಬರಾ ಉಜ್ಜಯಿನಿಯ ಮರುಳಸಿದ್ಧರ ವಿಷಯಕ್ಕೆ "

" ದ್ವಾಪರಯುಗದಲ್ಲಿ ...................... ದಾರುಕಾಚಾರ್ಯ ಎಂ ಹೆಸರಿನ ಗುರುಗಳಾದವರೂ, ೨೮ ಜನ ಯೋಗಾಚಾರ್ಯರ ಮಾಲಿಕೆಯ ಸೇರಿದವರೂ, ಕಲಿಯುಗದಲ್ಲಿ ಕುಲ್ಯಪಾಕ ಕ್ಷೇತ್ರನಿವಾಸಿ ದೇವನಂದ ಮಹಾರಾಜನ ಸತ್ವ ಪರೀಕ್ಷಿಸಿ ಬೋಧಿಸಿದವರೂ, ಉಜ್ಜಯಿನೀ ಮಹಾ ಕ್ಷೇತ್ರದಲ್ಲಿ ಸದ್ಧರ್ಮ ಪೀಠವನ್ನು ಸ್ಥಾಪಿಸಿ ಮಲ್ಲಿಕಾರ್ಜುನ ಶಿವಯೋಗಿ ಗಳು (ಮುಕ್ತಿ ಮುನಿಯಲ್ಲ) ಎಂಬ ಮಹಿಮರಿಗೆ ಉತ್ತರಾಧಿಕಾರವನ್ನು ವಹಿಸಿ ಮೆರೆದವರೂ ಮರುಳ ಸಿದ್ಧರಲ್ಲವೇ ?

" ವೀರಶೈವ ಮತಸ್ಥಾಪನಾಚಾರ್ಯನೆನಿಸಲುದಿಸಿದ ಲಿಂಗದಲ್ಲಿಯೇ ದಿವ್ಯ ದೇಹಧಾರಿಯಾಗಿ ಅಡಗಿದ ಮರುಳಸಿದ್ಧನೆತ್ತ. "

" ಜಗದಾಚಾರ್ಯ ಮರುಳಸಿದ್ಧರು ಸದ್ಬುದ್ಧಿಯನ್ನು ಕೊಡಲೆಂದೂ"

" ಶ್ರೀ ಜಗದ್ಗುರು ಮರುಳಸಿದ್ಧರ ವಿಷಯಕ್ಕೆ ಪ್ರಮಾಣಗಳು. ವೀರ ಲೈಂಗೋಪನಿಷತ್ತಿನಲ್ಲಿ :- " ದಾರುಕಾಚಾರ್ಯಾರಾಧ್ಯ ಉದ್ಭವತಿ, " ಪಾಶುಪತ ತಂತ್ರದಲ್ಲಿ " ದಾರುಕ, " " ದ್ವ್ಯಕ್ಷರ " " ದ್ವಿವಕ್ತ್ರ, " " ಮರುಲ, " ಸ್ವಾಯಂಭುವಾಗಮದಲ್ಲಿ " ಮರುಲಸಿದ್ಧ, " ಸುಪ್ರಭೇದಾ ಗಮದಲ್ಲಿ " ಮರುಲಾರಾಧ್ಯ " ವೀರಶೈವ ಸ ದಾ ಚಾ ರ ಸಂಗ್ರಹದಲ್ಲಿ " ಮರುಲಾರಾಧ್ಯ " ಸಾಂಬ ಪುರಾಣದಲ್ಲಿ " ಆರಾಧ್ಯ ಪಂಚಕ " ಅಂದರೆ ಅವರಲ್ಲೊಬ್ಬನಾದ ಮರುಳಾರಾಧ್ಯ, ಸಂಸ್ಕೃತ ರೇ ಣು ಕ ವಿಜಯದಲ್ಲಿ " ಶ್ರೀ ಮರುಲಾರಾಧ್ಯ " ಭಕ್ತಾಧಿಕ್ಯ ಶಿಖಾಮಣಿಯಲ್ಲಿ " ದಾರುಕ " ರಾಜಶೇಖರ ವಿಳಾಸದಲ್ಲಿ " ಮರುಳಾರ್ಯ " ರೇವಣ ಸಿದ್ಧ ಪುರಾಣದಲ್ಲಿ " ಮರುಳ ಸಿದ್ಧೇಶ " ಶರಣ ಬಸವೇಶ್ವರ ಪುರಾಣದಲ್ಲಿ " ಮರುಳಾರ್ಯ " " ರೇಣುಕವಿಜಯ ಪುರಾಣದಲ್ಲಿ " ದಾರುಕ " " ಮರುಳಾರಾಧ್ಯ "

ಪಂಡಿತ ಶಂಕರ ಶಾಸ್ತ್ರಿಗಳ ದಾರುಕಾಚಾರ್ಯ ಸ್ತುತಿಯಲ್ಲಿ " ದಾರುಕ " ಈ ಪದಗಳನ್ನು ಪ್ರಯೋಗಿಸಿರುವುದನ್ನು ಲೇಖಕರು ಉದಾಹರಿಸಿರುತ್ತಾರೆ. ಈ ಎಲ್ಲಾ ಪದಗಳೂ ಜಗದ್ಗುರು ಮರುಳಸಿದ್ಧನ ವಿಷಯಕ್ಕೆ ಪ್ರಮಾಣಗಳೆಂದು ಲೇಖಕರು ಹೇಳಿದ್ದಾರೆ. ಆದ್ದರಿಂದ ಇವೆಲ್ಲಾ ಪರ್ಯಾಯ ಪದಗಳೆಂದು ಶಾಸ್ತ್ರಿಗಳ ಆಶಯವಾಗಿದೆಯೆಂಬುದು ಸುಸ್ಪಷ್ಟ. ಅದನ್ನೇ ಶ್ರೀಯುತರು ಮುಂದೆ ವಿಶದೀಕರಿಸಿದ್ದಾರೆ. " ರೇಣುಕನಿಗೆ ರೇವಣ, ರೇವಣಸಿದ್ಧ, ಎಂಬ ನಾಮಗಳಿರುವಂತೆ ಈತನಿಗೆ (ಮರುಳಸಿದ್ಧ ಆದಿ) ದಾ ರು ಕ , ಮರುಳ, ಮರುಳಸಿದ್ಧ ಎಂಬ ನಾಮಗಳಿರುವುವು. "

## ಪುಟ ೧೫೨.

ಲೇಖಕ ಶ್ರೀ ಶಾಂತವೀರ ಶಿವಾಚಾರ್ಯರೂ ಸಹ ಮರಳಾರಾಧ್ಯ ಮರುಳಸಿದ್ಧ ಪದಗಳನ್ನು ಪರ್ಯಾಯ ವಾಚಕಗಳೆಂದು ಒಪ್ಪಿಕೊಂಡಿದ್ದಾರೆ. ಈ ಬಗ್ಗೆ ಅವರು ಕೊಟ್ಟಿರುವ ಪ್ರಮಾಣಗಳನ್ನು ಕೆಳಗೆ ವಿವರಿಸುತ್ತೇನೆ.

" ವಿವೇಕ ಚಿಂತಾಮಣಿಯ ಎರಡನೆಯ ಪ್ರಕರಣದ ದೀಕ್ಷಾ ಕ್ರಮ ದಲ್ಲಿ ಪೂರ್ವಾದಿ ನಾಲ್ಕು ಕಲಶಂಗಳನೇ ಕ್ರಮದಿಂ ರೇವಣಾಸಿದ್ಧ, ಮರುಳ ಸಿದ್ಧ, ರಾಮದೇವ, ಪಂಡಿತಾರಾಧ್ಯರೆಂಬಾಚಾರ್ಯ, "

" ಚನ್ನಬಸವಣ್ಣನು ಲಿಖಿಸಿದ ದೀಕ್ಷಾ ವಿಧಿಯಲ್ಲಿ ರೇ ವ ಣ ಸಿ ದ್ಧ , ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾರಾಧ್ಯರೆಂಬ ಐವರಾ ಚಾರ್ಯರು, "

ವೀರಶೈವಾಮೃತ ಮಹಾ ಪುರಾಣದಲ್ಲಿ :- ಏಕಾಕ್ಷರ, ದ್ವ್ಯಕ್ಷರ, ಪಂಚಾಕ್ಷರ, ಷಡಾಕ್ಷರಾಖ್ಯ "

ರೇಣುಕ, ದಾರುಕ, ಗೋಕರ್ಣ, ಶಂಖಕರ್ಣ, ರೇವಣಾಸಿದ್ಧೇಶ್ವರ ಮರುಲ ಸಿದ್ಧೇಶ, ಏಕೋರಾಮ, ಪಂಡಿತಾರಾಧ್ಯ, "

ಲೇಖಕರ ಮೇಲೆ ಉದಾಹೃತ ಭಾಗಗಳಲ್ಲಿ " ದ್ವ್ಯಕ್ಷರ, ದಾ ರು ಕ , ಮರುಳಸಿದ್ಧ ಇವು ಪರ್ಯಾಯ ವಾಚಕಗಳಾಗಿವೆ. ಇವರ ಲೇಖನದಲ್ಲಿ ಮರುಳಾರಾಧ್ಯ ಪದವೇ ಇಲ್ಲ.

ಪುಟ ೧೫೩.

ಮೊರಬದ ಶ್ರೀ ಗಂಗಾಧರ ಶಿವಾಚಾರ್ಯರು ಮರುಳಸಿದ್ಧರು ಇಬ್ಬ
ಜನರೆಂದು ಹೇಳುತ್ತಾರೆ. ಆದರೆ ಉಜ್ಜಯನಿ ಜಗದ್ಗುರು ಪೀಠಾಧಿಪತಿಗಳ
ಒಬ್ಬರೇ ಎಂದು ಇವರ ಅಭಿಪ್ರಾಯ. ಅನೇಕ ಜನ ಮರುಳಸಿದ್ಧರು ಉಜ್ಜ
ಯನಿ ಗುರುಗಳಾಗಿದ್ದರೆಂಬುದನ್ನು ಇವರು ಒಪ್ಪಿಲ್ಲ. ಇವರು ಮರುಳಾ
ರಾಧ್ಯ ಎಂಬ ಪದವನ್ನೇ ಉಪಯೋಗಿಸಿಲ್ಲ. ತಮ್ಮ ಲೇಖನದಲ್ಲಿ ಚನ್ನ
ಬಸವ ಪುರಾಣ, ಶ್ರೀಕರಭಾಷ್ಯ, ಸ್ವಯಂಭುವಾಗಮ ಇವುಗಳ ಪ್ರಮಾಣ
ವನ್ನು ಕೊಟ್ಟು ವಿಜಯಚರಿತ ಆದಿ ಮರುಳಸಿದ್ಧನೇ ಲಿಂಗೋದ್ಭವಾಚಾರ್ಯ
ಮರುಳಸಿದ್ಧ (ಮರುಳಾರಾಧ್ಯ) ನೆಂದು ದೃಢಪಡಿಸಿರುತ್ತಾರೆ.

ಈ ಮೇಲೆ ಉದಾಹರಿಸಿದ ಅಂಶಗಳೆನ್ನೆಲ್ಲಾ ಪರಿಶೀಲಿಸಿದ ಮೇಲೆ
ಮರುಳಾರಾಧ್ಯ ಮರುಳಸಿದ್ಧ ಪದಗಳು ಅಭಿನ್ನ ವ್ಯಕ್ತಿ ವಾಚಕಗಳೆಂಬುದನ್ನು
ತ್ರಿಜಗದ್ಗುರುಗಳವರು (ಶ್ರೀ ಶೈಲ, ಕಾ ಶೀ , ಉಜ್ಜಯಿನಿ) ಒಪ್ಪಿಕೊಂಡಿ
ದ್ದಾರೆಂಬುದನ್ನು ಅವರು ತಮ್ಮ ತಮ್ಮ ಲೇಖನಗಳಲ್ಲಿ ಪ್ರಯೋಗಿಸಿರುವ ಪದ
ಗಳನ್ನೇ ಉದಾಹರಿಸಿ ತೋರಿಸಿರುತ್ತೇನೆ. ಉಜ್ಜಯನಿಯವರು ಯಾವ
ಲೇಖನವನ್ನು ಬರೆದಿಲ್ಲವಾದರೂ ತಾವು ಬರೆದಿರುವ ಪತ್ರವೊಂದರಲ್ಲಿ ಶ್ರೀ
ಶೈಲವದರ ಕಾರ್ಯ ಚಟುವಟಿಕೆಗಳಲ್ಲಿ ತಮಗೆ ಸಹಾನುಭೂತಿಯಿದೆಯೆಂದು
ಅಭಿಪ್ರಾಯವನ್ನು ಸೂಚಿಸಿರುತ್ತಾರೆ.

ಹರಪನಹಳ್ಳಿಯ ಶ್ರೀ ನೀಲಕಂಠ ಶಾಸ್ತ್ರಿಗಳೂ ಸಹ ಉಜ್ಜಯಿನಿಯಿಂದ
ಮರುಳಾರಾಧ್ಯ ಲಿಂಗಸ್ವಾಮಿಗೆ ಬದಲಾಗಿ ಮರುಳಸಿದ್ಧ ಸ್ವಾಮಿಗಳು
ಹರಪನಹಳ್ಳಿಗೆ ಬಂದರೆಂದು ಹೇಳಿ ಈ ಪದಗಳ ಪರ್ಯಾಯ ವಾಚಕತ್ವವನ್ನು
ಒಪ್ಪಿಕೊಂಡಿದ್ದಾರೆ. ಈವರೆಗಿನ ನನ್ನ ವಿಮರ್ಶೆಯಿಂದ ಮರುಳಾರಾಧ್ಯ
ಬೇರೆ, ಮರುಳಸಿದ್ಧ ಬೇರೆ ಎಂದು ಸಾಧಿಸಲು ಹೊರಟಿರುವ ಜಗದ್ಗುರುಗಳೂ
ಶಾಸ್ತ್ರಿಗಳೂ ಮುಂತಾದವರು ತಾವೇ ಹೇಗೆ ತಮ್ಮ ಲೇಖನಗಳಲ್ಲಿ ಮರುಳಾ
ರಾಧ್ಯ ಮರುಳಸಿದ್ಧ ಪದಗಳು ಏಕ ವ್ಯಕ್ತಿ ವಾಚಕಗಳೆಂಬುದನ್ನು ಒಪ್ಪಿರುವ
ರೀತಿಯನ್ನು ಸ್ಪಷ್ಟಪಡಿಸಿರುತ್ತೇನೆ.

ಒಟ್ಟಿನಲ್ಲಿ ತಮಗೇ ಒಪ್ಪಿಗೆಯಿಲ್ಲದ ಅಸತ್ಯ ತತ್ವವನ್ನು ಜಗತ್ತಿನ ಮುಂದೆ ಸತ್ಯವೆಂದು ಎತ್ತಿ ಹಿಡಿಯಲು ಇವರು ತೋರಿಸಿರುವ ಧಾರ್ಷ್ಟ್ಯಕ್ಕೆ ಮೆಚ್ಚಬೇಕಾಗಿದೆ.

ಕರ್ನಾಟಕ ಉಜ್ಜಯಿನಿಯಲ್ಲಿ ಆದಿ ಮರುಳಸಿದ್ಧನು ೧೪ ಜನ ಗುರುಗಳ ವಿಗ್ರಹಗಳನ್ನು ಸ್ಥಾಪಿಸಿದನೆಂದು ಹೇಳಲಾಗಿರುವ ಬಗ್ಗೆ ಈಗ ವಿಮರ್ಶೆಯನ್ನು ಪ್ರಾರಂಭಿಸಿದ್ದೇನೆ.

ವಿಜಯಚರಿತವು ಹೇಳುವಂತೆ ಕ್ರಿ. ಶ. ೧೦೪೦ ರಲ್ಲಿ ಹೊಸ ಉಜ್ಜಯಿನಿ ನಿರ್ಮಾಣವಾಗಿದೆ. ಕಲಿಯುಗ ಪ್ರಮಾಣ ಇಲ್ಲಿಗೆ ೫೦೫೦ ವರ್ಷಗಳು. ಕ್ರಿ. ಶ. ೧೦೪೦ ಕ್ಕೆ ೪೧೪೧ ವರ್ಷಗಳು ಕಲಿಯುಗದ ಪ್ರಮಾಣ. ಈ ದೀರ್ಘ ಅವಧಿಯಲ್ಲಿ ಆದಿ ಮರುಳಸಿದ್ಧನ ಹಿಂದೆ ಕೇವಲ ೧೫ ಜನ ಗುರುಗಳಿದ್ದರೆಂದು ಹೇಳುವುದು ಯುಕ್ತಿ ಸಂಗತವಲ್ಲ. ಏಕೆಂದರೆ ಮರುಳಾರಾಧ್ಯರ ವಿನಾ ಉಳಿದ ೧೪ ಜನಗಳ ಆಳ್ವಿಕೆಯ ಕಾಲವನ್ನು ಸ್ಪಷ್ಟವಾಗಿ ಹೇಳಿರುತ್ತಾನೆ. ಯಾವ ಆಧಾರದ ಮೇಲೆ ಕಾಲವನ್ನು ನಿರ್ಣಯಿಸಿದನೋ ನಂಬಲಿಕ್ಕಂತೂ ಸಾಧ್ಯವೇ ಇಲ್ಲ. ಆದರೆ ಮರುಳಾರಾಧ್ಯರ ಕಾಲವನ್ನು ಮಾತ್ರ ಹೇಳಿಲ್ಲ. ಅವರ ಯೋಗನಿದ್ರೆಯ ಕಾಲವನ್ನು ಹೇಳಿರುತ್ತಾನೆ. ಆ ಕಾಲ ೬೦೬ ವರ್ಷಗಳು. ಜೀವನ ಕಾಲವು ೬೦೦ ವರ್ಷಗಳೆಂದು ಕಟ್ಟಿಕೊಂಡರೆ ಅವನು ೧೨೦೬ ವರ್ಷಗಳು ಜೀವಿಸಿದ್ದನೆಂದು ಊಹಿಸಬಹುದು. ಉಳಿದವರ ಕಾಲ (ಆದಿ ಮರುಳಸಿದ್ಧನಪರಳಿ ಪಯಣದವರೆಗಿನ ೨೦ ವರ್ಷಗಳೂ ಸೇರಿ ೧೫೨೦ ವರ್ಷಗಳು ಆಗುತ್ತವೆ. ಒಟ್ಟು ೨೭೨೬ ವರ್ಷಗಳು ಆದಿ ಮರುಳಸಿದ್ಧನ ಪರಳಿ ಪಯಣದ ಕಾಲಕ್ಕಾಗಬೇಕು. ಪರಳಿಗೆ ಬಂದು ೧೩೮ ವರ್ಷಗಳು ಕಳೆದ ಮೇಲೆ ಹೊಸ ಉಜ್ಜಯಿನಿ ನಿರ್ಮಾಣವಾಗಿದೆ. ಅಲ್ಲಿಗೆ ಮರುಳಾರಾಧ್ಯ ಅವತರಿಸಿ ೨೮೬೪ ವರ್ಷಗಳಾಗುತ್ತವೆ. ಆಗಬೇಕಾಗಿರುವುದು ೪೧೪೧ ವರ್ಷಗಳು. ೧೨೭೭ ವರ್ಷಗಳು ಕವಿಯು ಮಾಡಿರುವ ಕಾಲ ನಿರ್ಣಯದಲ್ಲಿ ವ್ಯತ್ಯಾಸವಾಗುತ್ತದೆ. ಆದ್ದರಿಂದ ಈ ಕಾಲ ನಿರ್ಣಯವೇ ಕೃತಿಮವಾದುದೆಂಬುದು ನಿಸ್ಸಂದೇಹ.

ಅದೇನೇ ಇರಲಿ. ಆದಿ ಮರುಳಸಿದ್ಧನು ೪೧೪೧ ವರ್ಷಗಳ ದೀಕ್ಷಾ ಕಾಲಾವಧಿಯಲಿದ್ದ ೧೪ ಜನ ಗುರುಗಳ ವಿಗ್ರಹಗಳನ್ನು ನಿರ್ಮಾಣ ಮಾಡಿ ಸುವುದು ಸಾಧ್ಯವಿಲ್ಲ. ಏಕೆಂದರೆ ಯಾರ ಯಾರ ಆಕಾರಗಳು ಹೇಗೆ ಹೇಗೆ ಇದ್ದವೆಂದು ಯಾವ ಶಿಲ್ಪಿಯು ತಾನೇ ಕಲ್ಪಿಸಲು ಸಾಧ್ಯ. ಅಥವಾ ಆಕಾರ ಮುಖ್ಯವಲ್ಲ. ಅವರ ಸ್ಮಾರಕಕ್ಕಾಗಿ ಮನುಷ್ಯಾಕಾರ ಹೋಲುವ ವಿಗ್ರಹ ಗಳನ್ನು ಸ್ಥಾಪಿಸಿರಬಹುದೆಂದರೆ ಅದೂ ಒಪ್ಪತಕ್ಕ ಮಾತಲ್ಲ. ಏಕೆಂದರೆ ಆ ರೀತಿಯಾದ ವಿಗ್ರಹಗಳನ್ನು ಸ್ಥಾಪಿಸುವುದಾದರೂ ಅವು ಅವಶ್ಯಕವಾಗಿ ವೀರಶೈವ ಗುರುಗಳ ಸಾಮಾನ್ಯ ಲಕ್ಷಣಗಳನ್ನಾದರೂ ಹೊಂದಿರಲೇ ಬೇಕು. ಈಗಲೂ ಆ ದೇವಸ್ಥಾನದಲ್ಲಿ ೧೪ ವಿಗ್ರಹಗಳಿರುವುದು ನಿಜ. ಆದರೆ ಯಾವ ವಿಗ್ರಹವೂ ವೀರಶೈವ ಗುರುಗಳ ಲಕ್ಷಣಗಳಿಂದ ಕೂಡಿಲ್ಲ. ಈ ವಿಜಯ ಚರಿತವು ಪ್ರಕಟವಾದ ಮೇಲಾದರೂ ಆ ೧೪ ವಿಗ್ರಹಗಳನ್ನು ಮುಕ್ತಿಮುನಿ, ಸಿದ್ಧಮುನಿ, ಶಿವಮುನಿ, ಶಾಂತಮುನಿ, ಭವಭೂತಿಮುನಿ ಇತ್ಯಾದಿ ಎಂದು ಜನರು ಕರೆಯುವಂತೆ ಏನಾದರೂ ವ್ಯವಸ್ಥೆ ಮಾಡಿದ್ದರೋ ಹೇಗೋ ತಿಳಿಯದು. ಈ ಮುಂಚೆ ಆ ೧೪ ವಿಗ್ರಹಗಳಿಗೂ ಈ ಹೆಸರುಗಳಿ ರಲಿಲ್ಲ. ರೇಣುಕ, ಘಂಟಾಕರ್ಣ, ಧೇನುಕರ್ಣ, ವಿಶ್ವಕರ್ಣ ಮೊದಲಾದ ಹೆಸರುಗಳನ್ನು ಒಂದೊಂದು ಹಲಗೆಯ ಮೇಲೆ ಬರೆದು ಅವನ್ನು ಆ ವಿಗ್ರಹ ಗಳ ಮೇಲೆ ನೇತು ಹಾಕಿದ್ದನ್ನು ನಾನು ನೂರಾರು ಸಲ ನೋಡಿದ್ದೇನೆ. ನನ್ನಂತೆಯೇ ಸಾವಿರಾರು ಜನರು ನೋಡಿದ್ದಾರೆ. ಆ ರೇಣುಕಾದಿ ನಾಮ ಧೇಯವಾದರೂ ನಿಜವಾಗಿದ್ದಲ್ಲಿ ಆ ಹಲಗೆಗಳ ಅವಶ್ಯಕತೆ ಏನಿತ್ತು. ವಾಸ್ತವವಾಗಿ ಅವು ೧೪ ಜನ ಗುರುಗಳ ವಿಗ್ರಹಗಳೂ ಅಲ್ಲ. ರೇಣುಕಾದಿ ಗಳ ವಿಗ್ರಹಗಳೂ ಅಲ್ಲ. ಮಂದಿರವನ್ನು ನಿರ್ಮಿಸಿದ ಶಿಲ್ಪಿಯ ಕೌಶಲ್ಯ ಪ್ರದರ್ಶನಕ್ಕಾಗಿ ನಿರ್ಮಿಸಿದ ವಿಗ್ರಹಗಳು. ಅವುಗಳಲ್ಲಿ ಕೆಲವಕ್ಕೆ ದ್ವಿಭುಜ ಗಳೂ, ಕೆಲವಕ್ಕೆ ಚತುರ್ಭುಜಗಳೂ, ಒಂದು ರುದ್ರನನ್ನು ಹೋಲುವುವಾದರೆ ಮತ್ತೊಂದು ವೀರಭದ್ರನನ್ನೂ ಒಂದು ವಿಷ್ಣುವನ್ನು ಹೋಲುವುವಾದರೆ ಮತ್ತೊಂದು ಕೃಷ್ಣನನ್ನೂ ಹೋಲುವ ಸ್ಥಿತಿಯಲ್ಲಿರುವಾಗ, ಅವನ್ನು ೧೪ ಜನ ಗುರುಗಳೆಂದು ಹೇಗೆ ಹೇಳುವುದು? ರೇಣುಕಾದಿ ವಿಗ್ರಹಗಳೆಂದಾದರೂ ಹೇಗೆ ಹೇಳುವುದು? ಈ ವಿಜಯ ಚರಿತದಲ್ಲಿರುವ ಒಂದು ವಿಶೇಷ

ವೇನೆಂದರೆ ೧೬ ಜನ ಗುರುಗಳಲ್ಲಿ ಆದಿ ಮರುಳಸಿದ್ಧನ ವಿನಾ ಉಳಿದ ೧೫ ಜನಕ್ಕೆ ಸ್ಮಾರಕ ವಿಗ್ರಹಗಳನ್ನೂ ಅಥವಾ ಮೂರ್ತಿಗಳನ್ನೂ ಸ್ಥಾಪಿಸಲು ಹೇಳಿ ಸದ್ಧರ್ಮ ಸಿಂಹಾಸನವನ್ನು ಸ್ಥಿರಗೊಳಿಸಿದ, ಮಾಯಾ ಮರ್ದನವನ್ನು ಮಾಡಿದ ಆದಿ ಮರುಳಸಿದ್ಧನಿಗೆ ಯಾವ ಸ್ಮಾರಕವನ್ನೂ ಮಾಡಲು ಹೇಳದಿರುವಾಗ ಉಳಿದ ೧೫ ಜನರ ಸ್ಮಾರಕ ವಿಗ್ರಹ ಕಲ್ಪನೆಯು ಬಹಿರಂಗವಾಗಿ ಸತ್ಯವನ್ನು ಕೊಲೆ ಮಾಡಿದಂತಾಗಿದೆ. ನಿಜವಾಗಿಯೂ ಈಗ ಉಜ್ಜಯಿನಿಯಲ್ಲಿರುವ ದೇವಸ್ಥಾನದ ಗರ್ಭಾಂಕಣದಲ್ಲಿರುವ ಲಿಂಗವೇ ಮರುಳಸಿದ್ಧೇಶ್ವರನ ಕುರುಹು. ಅದಕ್ಕೆ ಮರುಳಾರಾಧ್ಯ ಎಂದಾದರೂ ಅನ್ನಬಹುದು. ಮರುಳಸಿದ್ಧ ಎಂದಾದರೂ ಅನ್ನಬಹುದು. ಸಿದ್ಧೇಶ್ವರ ಎಂದಾದರೂ ಎನ್ನಬಹುದು. ಎಲ್ಲವೂ ಪರ್ಯಾಯ ವಾಚಕಗಳೇ. ಇದು ಸತ್ಯವಾಗಿ ಜನರಲ್ಲಿ ರೂಢಿ ಇರುವ ಸಂಗತಿ.

ಒಟ್ಟಿನಲ್ಲಿ ದೇವಸ್ಥಾನದಲ್ಲಿರುವ ೧೪ ವಿಗ್ರಹಗಳನ್ನೂ ಗರ್ಭಾಂಕಣದಲ್ಲಿರುವ ಲಿಂಗವನ್ನೂ ನೋಡಿ ೧೫ ವಿಗ್ರಹಗಳ ಆಧಾರದ ಮೇಲೆ ೧೫ ಜನ ಗುರುಗಳನ್ನು ಕಲ್ಪಿಸಿ ಮಾಳವೋಜ್ಜಯಿನಿಯಿಂದ ಈ ಉಜ್ಜಯಿನಿಯು ಸ್ಥಾಪಿತವಾಗುವವರೆಗೆ ಆಳಿದವರೆಂದು ಅನುಚಿತ, ಅಸಂಬದ್ಧ, ಐತಿಹಾಸಿಕಾಭಾಸ ಕಲ್ಪನೆಗಳನ್ನು ಮಾಡಿಕೊಂಡು ಇಂತಹ ಗ್ರಂಥಗಳನ್ನು ವೀರಶೈವಾಚಾರ್ಯರ ಹೆಸರಿನ ಮೇಲೆ ಸೃಷ್ಟಿಸಿ ಜಗದ್ಗುರುಂ ಮಾನ್ಯರು ಕೆಲವರು ವೀರಶೈವ ಸಾಹಿತ್ಯ ಸಂಸ್ಕೃತಿಗಳಿಗೆ ಮಾಡುತ್ತಿರುವ ಈ ಅಸಹ್ಯ ಅಘಾತಗಳನ್ನು ಇನ್ನಾದರೂ ವೀರಶೈವ ಜನತೆಯು ಸಹಿಸಿಕೊಂಡು ಹೋಗುತ್ತದೆ ಎಂದು ತಿಳಿಯುವುದು ಮೂರ್ಖತನವಾದೀತು. ೧೪ ಜನ ಗುರುಗಳಿಗೆ ೧೪ ಪ್ರತ್ಯೇಕ ಪ್ರತ್ಯೇಕ ಹೆಸರುಗಳೇಕೆ ಇರಲಿಲ್ಲವೊ? ಇಮ್ಮಡಿ, ಮುಮ್ಮಡಿಗಳಲ್ಲಿ ಹೆಸರುಗಳನ್ನು ಪೂರ್ತಿಗೊಳಿಸಲಾಗಿದೆ.

ಆದಿ ಮರುಳಸಿದ್ಧನು ಓರುಂಗಲ್ಲಿನಿಂದ ಹಂಪೆಗೆ ಹೋಗಿ ೬೮ ಸಾವಿರ ವಚನಗಳನ್ನು ರಚಿಸಿದನೆಂದು ಹೇಳಿರುವುದು ಶುದ್ಧ ಅನುಚಿತ ಕಲ್ಪನೆ. ವಚನಗಳನ್ನು ಯಾರೂ ಒಂದೇಕಡೆ ಕುಳಿತು ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ನಿರ್ಮಿಸಿಲ್ಲ. ವಚನಗಳೆಂದರೆ ಮಹಾ ಪುರುಷರ ಜೀವನದ ಅನುಭವ

ವಾಣಿ. ಹಾಗೂ ಆ ವಚನಗಳನ್ನು ವಿರಕ್ತರಿಗೆ ಬೋಧಿಸಿದರೆನ್ನು
ಹೊಸ ಮಾತು. ಇದರಿಂದ ವಚನ ಶಾಸ್ತ್ರವನ್ನು ತಮ್ಮದನ್ನಾಗಿ ಮಾ
ಕೊಂಡು ವಿರಕ್ತರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳಬೇಕೆ
ಹವಣಿಕೆಯು ಈ ಗುಂಪಿನವರಿಗಿದೆಯೆಂದು ತಿಳಿಯ ಬರುತ್ತಲ್ಲದೆ ಈ
ವಚನಶಾಸ್ತ್ರ ದೂಷಕರಾಗಿದ್ದ ಇವರು ಈವರೆಗೆ ವಚನಗಳ ಬಗ್ಗೆ ತಮ
ತಮ್ಮವರಿಗೆ ಇದ್ದ ಅನಾದರ ಬುದ್ಧಿಯನ್ನು ನಷ್ಟಗೊಳಿಸುವ ನಿಮಿತ್ತ ತ
ಆಚಾರ್ಯರಿಂದ ವಚನಗಳು ರಚಿತವಾದವೆಂದು ಹೇಳುವ ಸಾಹಸ ಮ
ದ್ದಾರೆ. ಮರುಳಸಿದ್ಧನು ವಚನಗಳನ್ನು ರಚಿಸಿದ್ದನು. ವಚನಕ
ಮರುಳಸಿದ್ಧನ ಮೇಲೆ ಇವರಿಗೆ ಈಗ ಬೆಳೆದಿರುವ ಆದರಾಭಿಮಾನಗಳ
ನೋಡಿ ಕನ್ನಡ ಪ್ರಪಂಚವು ವಿಸ್ಮಯಗೊಳ್ಳದಿರದು.

ಅಲ್ಲಿಂದ ಮುಂದೆ ಮರುಳಸಿದ್ಧನು ಮಹದೇವಿಯಕ್ಕನಿಗೆ ಅನುಗ್ರ
ಕೂಡಲ ಸಂಗಮಕ್ಕೆ ತೆರಳುತ್ತಾನೆ. ಅಲ್ಲಿ ಒಂದು ಮಠವನ್ನೂ ಅಲ್ಲಿ
ಮಠಕ್ಕೆ ಪಟ್ಟಾಧಿಕಾರಿಯನ್ನು ನೇಮಿಸುತ್ತಾನೆ? ಅವನಿಗೆ ಬಸವೇಶ್ವ
ಜನ್ಮ ಭವಿಷ್ಯವನ್ನು ಹೇಳುತ್ತಾನೆ? ಇದು ಎಂತಹ ವಂಚನೆ. ಅಲ್ಲಿ
ಮುದನೂರು, ಮೈಲಾರ ಮುಂತಾದ ಸ್ಥಳಗಳನ್ನು ನೋಡಿ ಹರಸನಹ
ಬರುತ್ತಾನೆ. ಅಲ್ಲೊಬ್ಬ ಚಂದ್ರಕಾಂತನೆಂಬ ರಾಜ. ಅವನಿಗೆ ವೀರಶೈ
ದೀಕ್ಷೆಯನ್ನು ಕೊಟ್ಟು ಜೈನ ಚತುರ್ಥರಿಗೆ ಲಿಂಗಧಾರಣೆ ಮಾಡಿ ಮು
ತೆರಳುತ್ತಾರೆ. ಅವರು ಪಂಚಮಸಾಲೆಯವರನ್ನು ಸೋದರರೆಂದು ಹೇ
ರಿಂದ ಸಾದರ ಆಗಿ ಸಾದ ಆದರಂತೆ? ಈ ಬಗ್ಗೆ ಮುಂದೆ ವಿವ
ಕೊಡಲಾಗುತ್ತೆ.

ಅಲ್ಲಿಂದ ರಂಭಾಪುರಿ ಪಟ್ಟ ಪೂರೈಸಿ ಅನೇಕರನ್ನು ವೀರಶೈವರನ್ನಾ
ಮಾಡಿ ಉಜ್ಜಯಿನಿಗೆ ಬಂದು ಮುಕ್ತಿಮುನಿ ಎಂಬುವನಿಗೆ ಪಟ್ಟಗ
ಬಯಲಾಗುತ್ತಾನೆ. ಲಿಂಗದಿಂದ ಹುಟ್ಟಲಿಲ್ಲ. ಲಿಂಗದಲ್ಲಿ ಅಡಗಲಿಲ್ಲ.

ಈ ಮರುಳಸಿದ್ಧನ ನಂತರ ಮುಕ್ತಿಮುನಿ, ಸಿದ್ಧಲಿಂಗ, ಸಿದ್ಧೇಶ್ವ
ಸಿದ್ಧನಾಥ ಇವರು ೨೪೫ ವರ್ಷಗಳು ಆಳಿದನಂತರ ಹೂಲಿ ಮರುಳಸಿದ್ಧನ
ಪಟ್ಟಕ್ಕೆ ಬರುತ್ತಾನೆ. ಇವನು ಪಟ್ಟಕ್ಕೆ ಬಂದಿರುವುದು ಕ್ರಿ. ಶ. ೧೦೬೮ ರ

ಮರುಳಸಿದ್ಧ ಕಾಲವಾಗಿರುವುದು ಕ್ರಿ. ಶ. ೧೧೫೨ ರಲ್ಲಿ ಈ ಎರಡು ಜನರ ಮಧ್ಯೆ ೪ ಜನರ ಆಳ್ವಿಕೆಯ ಕಾಲ ೨೪೫ ವರ್ಷಗಳು. ಇವರು ಈ ಬಗ್ಗೆ ೫೯ ವರ್ಷಗಳ ಅಂತರ ಮಾತ್ರ ಕೊಟ್ಟಿದ್ದಾರೆ. ಇದೆಷ್ಟು ಅಸಂಬದ್ಧ? ಹೂಲಿ ಮರುಳಸಿದ್ಧ ಪಟ್ಟಕ್ಕೆ ಬಂದನೆಂಬುದು ಎ ಷ್ಟ ರ ಮ ಟ್ಟಿ ನ ಸತ್ಯ? "ಮೂಲಾಭಾವೇ ಕುತಸ್ಯಾಖಾ" ಎನ್ನುವಂತೆ ಹೂಲಿ ಮರುಳಸಿದ್ಧನೇ ಇಲ್ಲದಿರುವಾಗ ಇವನು ಕಗ್ಗಲ್ಲು ಗೌಡನ ಮಗನಾಗಿರುವುದಿನ್ನೆಂತು?

ಕಗ್ಗಲ್ಲುಪುರದ ಗೌಡ ಅಂದರೆ ಗೌಡನು ಕಗ್ಗಲ್ಲುಪುರದವನು ಎಂದು ಒಂದು ಕಡೆ ಹೇಳಿ ಮತ್ತೊಂದು ಕಡೆ ಆವನು ಮುದೂರಿನವನು ಎಂದು ಹೇಳುವುದು ಎಷ್ಟರಮಟ್ಟಿನ ಔಚಿತ್ಯ ಮುದೂರಿನಲ್ಲಿ ಈಗ ಒಬ್ಬನಾದರೂ ಕಗ್ಗಲ್ಲುಗೌಡನಿದ್ದಾನೆಯೇ? ಅಲ್ಲಿ ಕಗ್ಗಲ್ಲುಪುರದ ಐತಿಹಾಸಿಕ ಕುರುಹೇನಾದರೂ ಇದೆಯೇ? ಇಲ್ಲವೇ ಇಲ್ಲ. ಈಗಲೂ ಕೊಟ್ಟೂರು ಬಳಿ ಇರುವ ಉಜ್ಜಯಿನಿಯ ಗೌಡರು ಕಗ್ಗಲ್ಲವರೇ. ಈ ಗ ಲೂ ಉಜ್ಜಯಿನಿಯಲ್ಲೂ, ನಾಡಿನ ಅನೇಕ ಭಾಗಗಳಲ್ಲೂ ಕಗ್ಗಲ್ಲು ಗೌಡರ ವಂಶೀಕರ ಮನೆತನಗಳು ನೂರಾರು ಇವೆ. ಸಾವಿರಾರು ಗ್ರಂಥಗಳನ್ನು ರಚಿಸಿ ಬೇಕಾದಷ್ಟು ಅಪಲಾಪ ಮಾಡಿದರೂ ಅವು ನಾಶವಾಗಲಾರವು. ಈಗಲೂ ಉಜ್ಜಯಿನಿಯಲ್ಲಿರುವ ಗೌಡ(ಕಗ್ಗಲ್ಲವರು)ರಿಗೂ ಮರುಳ ಸಿದ್ಧೇಶ್ವರ ದೇವಸ್ಥಾನದ ಸೇವಾಕಾರ್ಯ ಗಳಲ್ಲಿರುವ ಅನೇಕ ಪದ್ಧತಿಗಳಿಗೂ ಇರುವ ಸಾಮೀಪ್ಯ ಸಂಬಂಧವು ಮರುಳ ಸಿದ್ಧನು ಕಗ್ಗಲ್ಲು ಗೌಡರ ಮನೆಯಲ್ಲಿ ಬೆಳೆದವನೆಂಬುದಕ್ಕೆ ನಿದರ್ಶನವಾಗಿದೆ. ಭಾರತ ಹುಣ್ಣಿಮೆಯಲ್ಲಿ ನಡೆಯುವ ಕಾಳಗವು ಮರುಳಸಿದ್ಧನ ಜೀವಿತ ಕಾಲ ದಲ್ಲಿ ಮರುಳಸಿದ್ಧನಿಗೂ, ಕಗ್ಗಲ್ಲುಗೌಡನಿಗೂ ಕ್ಷೇತ್ರಕ್ಕಾಗಿ ಜಮೀನನ್ನು ಆಕ್ರಮಿಸಕೊಂಡ ವಿಷಯದಲ್ಲುಂಟಾದ ಭಿನ್ನಾಭಿಪ್ರಾಯದಿಂದ ಹು ಟ್ಟಿ ದ ಕಲಹದ ಸ್ಮಾರಕವೆಂಬುದು ಸ್ಪಷ್ಟವಾಗುತ್ತದೆ. ಹೂಲಿ ಮರುಳಸಿದ್ಧನನ್ನು ಪಟ್ಟಕ್ಕೆ ತಂದಿರುವ ಕಲ್ಪನೆಯು ಅವನನ್ನು ಕಗ್ಗಲ್ಲು ಗೌಡನಿಗೆ ಮಗನಾಗಿ ಸಲು ಮಾತ್ರ. ಇವನಿಗೂ, ಗೌಡನಿಗೂ ಯಾವ ಸಂಬಂಧವೂ ಇಲ್ಲ. ಆದ್ದರಿಂದ ಮರುಳಸಿದ್ಧನನ್ನು ಕಗ್ಗಲ್ಲು ಗೌಡನಿಂದ ದೂರವಿಡಲು ಹೂಲಿ ಮರುಳ ಸಿದ್ಧನು ಕಲ್ಪಿಸಲ್ಪಟ್ಟಿರುತ್ತಾನೆ. ನಂತರ ಸಿದ್ಧಮಲ್ಲೇಶನು ಪಟ್ಟಕ್ಕೆ ಬರು.

ತ್ತಾನೆ. ಇವನ ಕಾರ್ಯವೇನು ಗೊತ್ತೆ? ಸಿಂದೋಗಿಯ ಮಾರನಿಗೆ ಪುತ್ರದಾನ ಮಾಡುವುದು. ಆ ಫಲವಾಗಿ ಪ್ರತ್ಯೇಕ ಮಾದಿಗ ಮರುಳಸಿದ್ಧನ ಉತ್ಪತ್ತಿಯನ್ನು ಕಲ್ಪಿಸುವುದು. ಮರುಳಸಿದ್ಧನು ಮಾದಿಗನಲ್ಲವೆಂಬುದನ್ನು ಸಿದ್ಧಪಡಿಸಲು ಇರುವ ಐತಿಹಾಸಿಕ ಕುರುಹುಗಳು ಆತಂಕವಾಗಿರುವುದರಿಂದ ಆದಕ್ಕಾಗಿ ಪ್ರತ್ಯೇಕ ಮರುಳಸಿದ್ಧನನ್ನು ಕಲ್ಪಿಸಿ ಅವನಿಗೂ ಆದಿ ಮರುಳ ಸಿದ್ಧನಿಗೂ ಸಂಬಂಧವನ್ನು ತಪ್ಪಿಸಲು ಸಿದ್ಧಮಲ್ಲೇಶನನ್ನು ಪಟ್ಟಕ್ಕೆ ತರುವ ಕಲ್ಪನೆಯು ಮಾಡಲ್ಪಟ್ಟಿದೆ.

ಈ ಸಿದ್ಧಮಲ್ಲೇಶನಿಗೆ ಮಳೆ ಮಲ್ಲೇಶನೆಂದೂ ಹೆಸರು ಇವನು ನವನಂದಿ ಸಿಂಹಾಸನದ ಸಿದ್ಧನಂಜೇಶ ಕವಿ ವಿರಚಿತ ಗುರುರಾಜ ಚಾರಿತ್ರದಲ್ಲಿ ಹೇಳಲ್ಪಟ್ಟಿರುವ ವಿಶ್ವೇಶ್ವರಾಚಾರ್ಯನ ಶಿಷ್ಯ ಪರಂಪರೆಗೆ ಸೇರಿದವನು. ಇವನು ಗಜಪತಿ ಮಹೇಂದ್ರನಿಗೆ ವೀರಶೈವ ದೀಕ್ಷೆ ಕೊಟ್ಟದ್ದು ಗುರುರಾಜ ಚಾರಿತ್ರದಲ್ಲಿದೆ. ಇಲ್ಲಿಯೂ ಇವನ ಕೆಲಸ ಇದೇ ಆಗಿದೆ. ಇವನು ಉಜ್ಜಯಿನೀ ಪೀಠಕ್ಕೆ ಅಧಿಪತಿಯಾದುದನ್ನಾಗಲೀ, ಸಿಂದೋಗಿಯ ಮಾರನಿಗೆ ಪುತ್ರದಾನ ಮಾಡಿದುದನ್ನಾಗಲೀ ಅಲ್ಲಿ ಹೇಳಿಲ್ಲ. ಗುರುರಾಜ ಚಾರಿತ್ರ ವಾದರೂ ಪಂಚವಣ್ಣಿಗೆಯ ಸಿದ್ಧನಂಜೇಶನು ತನ್ನ ಸತಿಗೆ ಹೇಳಿದುದನ್ನೇ ಆಧಾರವಾಗಿಟ್ಟುಕೊಂಡು ರಚಿಸಲ್ಪಟ್ಟಿದೆ. ಈ ಕವಿಯೂ ಸಹ ತಾನೂ ಹಾಗೇ ಮಾಡಿರುವುದಾಗಿ ಹೇಳಿದ್ದಾನೆ. ಆದರೆ ಅಲ್ಲಿ ಇಲ್ಲದ ಈ ಕಥಾ ಪ್ರಸಂಗ ಇಲ್ಲಿಗೆ ಹೇಗೆ ಬಂದಿತೆಂಬುದು ಚಿದಂಬರ ರಹಸ್ಯವಾಗಿದೆ. ಪಂಚವಣ್ಣಿಗೆ ಸಿದ್ಧನಂಜೇಶನೇನಾದರೂ ಎರಡು ಜನ ಕವಿಗಳಿಗೂ ಬೇರೆ ಬೇರೆ ರೀತಿಯಲ್ಲಿ ಹೇಳಿರಬಹುದೇ? ಆದರೆ ಸಿದ್ಧನಂಜೇಶನು ಇದನ್ನು ಈ ಎರಡು ಜನ ಕವಿ ಗಳಿಗೆ ಹೇಳಿಲ್ಲ. ಅವನು ಹೇಳಿರುವುದು ತನ್ನ ಸತಿಗೆ. ಒಬ್ಬ ವ್ಯಕ್ತಿಗೆ ಹೇಳುವಾಗ ಎರಡು ವಿಧವಾಗಿ ಹೇಳುವುದೆಂದರೆ ಪ್ರಾಮಾಣಿಕತೆಯೇ ಇಲ್ಲ ವೆನ್ನಬೇಕಾಗುತ್ತದೆ. ಆದ್ದರಿಂದ ಈ ಸಿದ್ಧಮಲ್ಲೇಶನ ಕಥಾ ಪ್ರಸಂಗವು ಕವಿಯ ಅಕ್ಷಮ್ಯ ಅಪರಾಧ. ಇವನು ಹಂಪೆಯಲ್ಲಿ ಪ್ರೌಢರಾಯನ ಆಶ್ರಯ ದಲ್ಲಿ ವಿದ್ವಾಂಸರನ್ನು ಕೂಡಿಸಿ ಅವರಿಂದ ಬಸವೇಶ್ವರ, ಅಲ್ಲಮಪ್ರಭು ಮುಂತಾದವರ ವಚನಗಳನ್ನು ರಚಿಸಲು ವ್ಯವಸ್ಥೆ ಮಾಡಿದನೆಂಬುದು

ಕಟ್ಟುಕಥೆ. ಇಂದು ವೀರಶೈವ ಸಮಾಜ, ಸಾಹಿತ್ಯ ಮತ್ತು ಸಂಸ್ಕೃತಿಗಳು ಉಳಿದಿರುವುದು ಆ ಮಹಾತ್ಮರ ಬಲಿದಾನದ ಫಲದಿಂದ. ಇವರು ಸ್ವತಃ ವಚನಗಳನ್ನು ರಚಿಸಲಿಲ್ಲವೆಂದೂ, ಅವು ಸಿದ್ಧಮಲ್ಲೇಶನಿಂದ ಅವರ ಹೆಸರಿನ ಮೇಲೆ ಹಲವು ವಿದ್ವಾಂಸರ ಸಹಾಯದಿಂದ ರಚಿಸಲ್ಪಟ್ಟವೆಂದು ಹೇಳುವ ಧಾರ್ಷ್ಟ್ಯವನ್ನು ನೋಡಿ ಸಮಾಜ ನಾಚಿಕೆಯಿಂದ ತಲೆ ಬಾಗಿಸಬೇಕಾಗಿದೆ. ಮಾದಿಗ ಹರಳನ ಕಥೆಯೂ ಇಷ್ಟೇ ಅಸತ್ಯವಾದುದು. ಆದರೆ ಸಿಂದೋಗೀ ಮರುಳಸಿದ್ಧ ಮತ್ತು ಹರಳರಿಗೆ ಪೂಜೆ ಮಾಡಲು ಸಿದ್ಧಮಲ್ಲೇಶನು ಒಂದೊಂದು ಮರುಳಸಿದ್ಧ ದೇವಾಲಯಗಳನ್ನು ಸಿಂದೋಗಿ ಮತ್ತು ಉಜ್ಜಯಿನಿ ಮಾದಿಗರ ಕೇರಿಗಳಲ್ಲಿ ಕಟ್ಟಿಸಿಕೊಟ್ಟು ಅವರನ್ನೇ ಅಲ್ಲಿಯ ಅರ್ಚಕರನ್ನಾಗಿ ಮಾಡಿದನೆಂದು ಹೇಳಿ ಕವಿಯು ಮಹೋಪಕಾರವನ್ನು ಮಾಡಿದ್ದಾನೆ. ಈ ಇಬ್ಬರು ಮಾದಿಗರು ತಮ್ಮ ಗುರುವಾದ ಸಿದ್ಧಮಲ್ಲೇಶನ ಗುಡಿಗಳನ್ನು ಕಟ್ಟಿಸಿಕೊಳ್ಳದೆ ತಮಗೆ ಸಂಬಂಧವಿಲ್ಲದ ಮರುಳಸಿದ್ಧನ (ಮರುಳಾರಾಧ್ಯನದೋ, ಆದಿ ಮರುಳಸಿದ್ಧನದೋ, ಹೂಲಿ ಮರುಳಸಿದ್ಧನದೋ, ಹೇಳಿಲ್ಲ.) ಗುಡಿಗಳನ್ನು ಕಟ್ಟಿಸಿಕೊಂಡಿರುವುದು ಅವರ ಮೂರ್ಖತನವೇ ಸರಿ. ಆದರೆ ಗುರುಸಿದ್ಧ ಮಲ್ಲೇಶನಾದರೂ ತನ್ನ ಗುಡಿಗಳನ್ನು ಕಟ್ಟಿಸಿಕೊಡುವುದು ಉಚಿತವಿತ್ತು. ಏಕೆಂದರೆ ಆ ಮಾದಿಗ ಶಿಷ್ಯರು ಜೀವಂತವಿದ್ದ ಗುರುಸಿದ್ಧ ಮಲ್ಲೇಶನ ಪಾದಪೂಜೆಯನ್ನು ಬಯಸಿದ್ದರೇ ವಿನಾ ಜೀವಂತವಿಲ್ಲದ ಮರುಳಸಿದ್ಧನ ಪೂಜೆಯನ್ನು ಬಯಸಿರಲಿಲ್ಲ. ಹಾಗೂ ಯಾವ ಗುರುವಿನ ಆಶೀರ್ವಾದದಿಂದ ಮಗನು ಹುಟ್ಟಿದನೋ, ಆ ಗುರುವಿನ ಹೆಸರನ್ನಿಡುವುದೂ, ಗುಡಿಯನ್ನು ಕಟ್ಟಿಸುವುದೂ ಸಹಜವಾದುದು. ಇದೆಲ್ಲವನ್ನೂ ಪರಿಶೀಲಿಸಿದರೆ ಈ ಪ್ರಸಂಗ ಎಷ್ಟು ಅಸತ್ಯವಾದುದೆಂಬುದು ಸ್ವಯಂ ಸ್ಪಷ್ಟವಾಗುತ್ತದೆ

ಇವನ ನಂತರ ಸಿದ್ಧನಾಥಾಚಾರ್ಯ, ಸಿದ್ಧೇಶ್ವರ, ಗುರುಸಿದ್ಧ, ಇವರು ಪಟ್ಟಕ್ಕೆ ಬಂದರು. ಇಲ್ಲಿಗೆ ೨೫ ಜನ ಗುರುಗಳಾಗುತ್ತಾರೆ. ಇಲ್ಲಿಗೆ ಚರಿತ ಸಮಾಪ್ತಿಯಾಗಿದೆ. ಈಗ ಈ ೨೫ ಜನರ ಪರಂಪರೆಯು ಸತ್ಯವಾದುದೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಇದೇ ಪುಸ್ತಕದಲ್ಲಿ ಲೇಖಕರಾಗಿರುವ ಹಿರೇ ಹಡಗಲಿ ಶ್ರೀ ವಿರೂಪಾಕ್ಷ ಶಾಸ್ತ್ರಿಗಳು ಒರೆದಿರುವ ಸಿದ್ಧಲಿಂಗೇಶ

ವಿಜಯವೆಂಬ ಪುಸ್ತಕದಲ್ಲಿ ಕಲಿಯುಗಾದಿಯಿಂದ ಬಂದ ಉಜ್ಜಯಿನೀ ಪೀ
ಗುರು ಪರಂಪರೆಯೊಂದು ಇದೆ. ಈ ಶಾಸ್ತ್ರಿಗಳು ಉಜ್ಜಯಿನೀ ಮಠ
ಕೈ| ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಗೆ ಉಸಿರಾಗಿ ಬಾಳಿದವರೆಂದು ತಾ
ಹೇಳಿಕೊಂಡಿರುತ್ತಾರೆ. ಇವರ ಈ ಪುಸ್ತಕದ ಬಗ್ಗೆ ಶ್ರೀ ಶೈಲದ ಶ್ರೀ
ಗಳವರು ತಮ್ಮ ಸದಭಿಪ್ರಾಯವನಿತ್ತು "ಇದು ಇತಿಹಾಸ ಗ್ರಂಥ"ವೆ
ಹೇಳಿದ್ದಾರೆ. ಶ್ರೀ ಮರುಳಸಿದ್ಧಾಂಗದಲ್ಲಿ ಅಭಿಪ್ರಾಯದಾತರಾಗಿ
ಹುಬ್ಬಳ್ಳಿಯ ಶ್ರೀ ಪಿ. ಆಯ್. ಹಿರೇಮಠ ವಕೀಲರೂ ಸಹ ತಮ್ಮ ಸ
ಪ್ರಾಯವನ್ನಿತ್ತಿರುತ್ತಾರೆ. ಈ ವಕೀಲರು ಶ್ರೀಶೈಲ ಮಠದ ಆಜೀವ ಸಾ
ಕರಣ ಶಿಷ್ಯರು. ಗುರುವಿನ ಮುದ್ರೆ ಇದೆ ಎಂದ ಮೇಲೆ ಇವರ ಒಪ್ಪ
ಇದ್ದೇ ಇರಬೇಕು. ಶ್ರೀವಿರೂಪಾಕ್ಷಶಾಸ್ತ್ರಿಗಳು ಮರುಳಾರಾಧ್ಯ ವಿಜ
ದಲ್ಲಿರುವ ಗುರುಪರಂಪರೆಗೆ ತಾವು ಇಲ್ಲಿ ಲೇಖಕರಾಗಿರುವುದರಿಂದ ಒಪ್ಪಿ
ಕೊಟ್ಟಂತೆ ಆಗಿದೆ. ಮತ್ತೊಂದು ಗುರುಪರಂಪರೆಯು ಉಜ್ಜಯಿನಿ ಮ
ಶಿಷ್ಯನಾದ ಕೆಳದಿ ಬಸವರಾಜನಿಂದ ಶಿವತತ್ವ ರತ್ನಾಕರದಲ್ಲಿ ಹೇಳಲ್ಪಟ್ಟಿ
ಚಂದ್ರಮೌಳೀಶ್ವರ ಲಿಂಗವನ್ನು ಶಂಕರಾಚಾರ್ಯರು ರೇವಣಸಿದ್ಧರಿಗೆ ಕೊ
ರೆಂಬ ಬಗ್ಗೆ ಈ ಗ್ರಂಥವನ್ನು ಆಧಾರವಾಗಿ ತೋರಿಸಿರುವ ಶ್ರೀ ಶೀ ಗ
ಈ ಗ್ರಂಥವನ್ನು ಅದರಲ್ಲಿರುವ ಪರಂಪರೆಯ ಬಗ್ಗೆಯೂ, ಪ್ರಮಾಣವೆ
ನಂಬಿಯೇ ಇರುತ್ತಾರೆ. ಒಟ್ಟಿನಲ್ಲಿ ಈ ಮೂರು ಪರಂಪರೆಗಳು ಇವ
ಮನ್ನಣೆಯನ್ನು ಪಡೆದಿವೆ. ಇವುಗಳಲ್ಲಿ ಯಾವುದು ನಿಜವೆಂಬುದನ್ನು ನಿ
ಯಿಸಲು ಮೆದುಳನ್ನು ದುರುಪಯೋಗಪಡಿಸುವುದಕ್ಕಿಂತ ಎಲ್ಲವೂ ಸತ
ಗಳೆಂದು ತಿಳಿಯುವುದೇ ಯುಕ್ತವಾದುದು. ವಾಚಕರ ತಿಳಿವಳಿಕೆಗಾಗಿ ಈ
ಮೂರು ಪರಂಪರೆಗಳನ್ನೂ ವಿವರಿಸಿದ್ದೇನೆ.

## ಶಿವತತ್ವ ರತ್ನಾಕರ

೧) ಮರುಳಸಿದ್ಧ.
೨) ವಸಂತದೇವ.
೩) ಮಲ್ಲಿಕಾರ್ಜುನ
೪) ಚೆನ್ನವೀರ.

೫) ಗುರುಪಾದಸ್ವಾಮಿ.
೬) ವಸಂತ.
೭) ಉನ್ನತ ಚೆನ್ನವೀರ (ಕಾಲ ಕ್ರಿ.ಶ. ೧೭೧೫.)

## ಶ್ರೀ ಮರುಳಾರಾಧ್ಯ ವಿಜಯಚರಿತ

### ಆಳ್ವಿಕೆಯ ಕಾಲ

| | | | | | | |
|---|---|---|---|---|---|---|
| ೧) | ಮರುಳಾರಾಧ್ಯ | ೧೨೦೬ | ವರ್ಷಗಳು | ಕ್ರಿ.ಪೂ. | ೧೮೯೫ರಲ್ಲಿ | ಐಕ್ಯ |
| ೨) | ಮುಕ್ತಿಮುನಿ | ೩೦೦ | ,, | ,, | ೧೫೯೫ | ,, |
| ೩) | ಸಿದ್ಧಮುನಿ | ೨೦೦ | ,, | ,, | ೧೩೯೫ | ,, |
| ೪) | ಶಿವಮುನಿ | ೧೨೦ | ,, | ,, | ೧೨೭೫ | ,, |
| ೫) | ಶಾಂತಮುನಿ | ೭೦ | ,, | ,, | ೧೨೦೫ | ,, |
| ೬) | ಭವಭೂತಿ | ೧೦೦ | ,, | ,, | ೧೧೦೫ | ,, |
| ೭) | ಇಮ್ಮಡಿ ಮುಕ್ತಿಮುನಿ | ೫೦ | ,, | ,, | ೯೫೫ | ,, |
| ೮) | ಶಕ್ತಿಮುನಿ | ೨೦೦ | ,, | ,, | ೭೫೫ | ,, |
| ೯) | ಇಮ್ಮಡಿಸಿದ್ಧಮುನಿ | ೪೦ | ,, | ,, | ೭೧೫ | ,, |
| ೧೦) | ಇಮ್ಮಡಿ ಶಾಂತಮುನಿ | ೯೦ | ,, | ,, | ೬೨೫ | ,, |
| ೧೧) | ಮುಮ್ಮಡಿ ಸಿದ್ಧಮುನಿ | ೫೫ | ,, | ,, | ೫೭೦ | ,, |
| ೧೨) | ಸಾಂಬಮುನಿ | ೧೦೦ | ,, | ,, | ೪೭೦ | ,, |
| ೧೩) | ಇಮ್ಮಡಿ ಶಿವಮುನಿ | ೩೦ | ,, | ,, | ೪೪೦ | ,, |
| ೧೪) | ಈಶಾನಮುನಿ | ೭೫ | ,, | ,, | ೩೬೫ | ,, |
| ೧೫) | ಶಂಭುಮುನಿ | ೭೦ | ,, | ,, | ೨೯೫ | ,, |
| ೧೬) | ಆದಿ ಮರುಳಸಿದ್ಧ | ೧೨೦ | ,, | ,, | ೧೨೫ | ,, |

(ವಿಜಯಚರಿತದ ಪ್ರಕಾರ ಕ್ರಿ. ಶ. ೧೦೫೨)

| | | | | | | |
|---|---|---|---|---|---|---|
| ೧೭) | ಮುಕ್ತಿಮುನಿ | ೯೦ | ,, | ,, | ೩೫ | ,, |
| ೧೮) | ಸಿದ್ಧಲಿಂಗ | ೪೫ | ,, | ಕ್ರಿ. ಶ. | ೧೦ | ,, |
| ೧೯) | ಸಿದ್ಧೇಶ್ವರ | ೮೦ | ,, | ,, | ೯೦ | ,, |

೨೦) ಸಿದ್ಧನಾಥ . ೩೦ ,, ,, ೧೨೦ ,,
೨೧) ಹೂಲಿ ಮರುಳಸಿದ್ಧ ೮೦ ,, ,, ೨೦೦ ,,

(ವಿಜಯಚರಿತದ ಪ್ರಕಾರ ಕ್ರಿ. ಶ. ೧೧೬೧)

೨೨) ಸಿದ್ಧಮಲ್ಲ ೮೦ ,, ,, ೨೮೦ ,,

(ವಿಜಯಚರಿತದ ಪ್ರಕಾರ ಕ್ರಿ. ಶ. ೧೪೪೬)

೨೩) ಸಿದ್ಧನಾಥ ೬೫ ,, ,, ೩೪೫ ,,
೨೪) ಸಿದ್ಧೇಶ್ವರ ೯೫ ,, ,, ೪೪೦ ,,
೨೫) ಗುರುಸಿದ್ಧ ಇವರಿಗೆ ಕ್ರಿ. ಶ. ೪೪೦ ರಲ್ಲಿ ಪಟ್ಟವಾಗುತ್ತದೆ.

## ಸಿದ್ಧಲಿಂಗೇಶ ವಿಜಯ

೧) ಮರುಲಾರಾಧ್ಯ
೨) ಮಲ್ಲಿಕಾರ್ಜುನ
೩) ಸಿದ್ಧೇಶ್ವರ
೪) ಗುರುನಾಥ
೫) ಶಿವಯೋಗೀಂದ್ರ
೬) ತ್ರ್ಯಂಬಕ
೭) ಶಿವಾನಂದ
೮) ಮಡುಲಸಿದ್ಧ
೯) ಅಮಿತಾನಂದ
೧೦) ನೀಲಗ್ರೀವ
೧೧) ನಂದೀಶ್ವರ
೧೨) ಗುರುರಾಜ
೧೩) ಮಹಾದೇವ
೧೪) ಮಾಯಾಂತಕ
೧೫) ಗುರುಶಾಂತ
೧೬) ವೃಷಭಧ್ವಜ
೧೭) ವೀರವೃಷೇಂದ್ರ
೧೮) ದ್ವಿತೀಯ ಮಲ್ಲಿಕಾರ್ಜುನ
೧೯) ಶಿವಲಿಂಗ
೨೦) ದ್ವಿತೀಯ ಸಿದ್ಧೇಶ್ವರ
೨೧) ಲಿಂಗಾನಂದ
೨೨) ಸೋಮೇಶ್ವರ
೨೩) ಮುಕ್ತಿನಾಥ
೨೪) ವಾಮದೇವ
೨೫) ಜಗದೀಶ್ವರ
೨೬) ನಿಜಾನಂದ
೨೭) ವಿದ್ಯೇಶ್ವರ
೨೮) ಮಾಹೇಶ್ವರ
೨೯) ಅಘೋರ
೩೦) ಚೆನ್ನವೀರ

೩೧) ಜಟಾಸಿದ್ಧ
೩೨) ಗಂಗಾಧರ
೩೩) ಸಿದ್ಧವೀರ
೩೪) ರುದ್ರೇಶ್ವರ
೩೫) ಶಾಂತಲಿಂಗ
೩೬) ವೈ| ನಂದೀಶ್ವರ
೩೭) ಗಂಗಾಧರ
೩೮) ಮಹಾಲಿಂಗ
೩೯) ಪಂಚಾನನ
೪೦) ಬಿಲ್ವದಳ-ಭೂಷಣ
೪೧) ಮಾರಮರ್ದನ
೪೨). ನಾಗಭೂಷಣ
೪೩) ಶ್ಯಾಮಕಂದರ
೪೪) ಚಂದ್ರಶೇಖರ
೪೫) ಗುರುಸಿದ್ಧ
೪೬) ಭವಹರ.
೪೭) ಚಂಡೀಶ್ವರ.
೪೮) ಅಮೃತೇಶ್ವರ.
೪೯) ಸುಜ್ಞಾನಶೇಖರ.
೫೦) ಸಿದ್ಧಲಿಂಗ.
೫೧) ಶೇಷಭೂಷಣ.
೫೨) ಶಂಕರಾನಂದ.
೫೩) ಮಹಾಮಲ್ಲಿಕಾರ್ಜುನ.
೫೪) ಶಂಭುಲಿಂಗ.
೫೫) ಶಿವಯೋಗ ಪ್ರಭಾಕರ.
೫೬) ಚಿನ್ಮಹೋದಧಿ.
೫೭) ಶಿವಜ್ಞಾನ ಸಂಜೀವನ.
೫೮) ಗಜೇಂದ್ರಮಂದಾರ.
೫೯) ಸಿದ್ಧೇಶ್ವರ.
೬೦) ಪರಶಿದ್ಧೇಶ್ವರ.
೬೧) ಮಹಾಂತದೇವ.
೬೨) ಮಲ್ಲಿಕಾರ್ಜುನ.
೬೩) ವೃಷ್ಟಿಶಂಕರ.
೬೪) ಶಂಭುಲಿಂಗ.
೬೫) ಮದನಾರಿ.
೬೬) ಮಾಯಾಕೋಲಾಹಲ.
೬೭) ಶಿವಲೀಲಾ ಚೆನ್ನವೀರ.
೬೮) ಪಂಚಾಕ್ಷರ.
೬೯) ಓಂಕಾರ.
೭೦) ಮುಕ್ತಿನಾಥ.
೭೧) ಮಹಾದೇವ.
೭೨) ಭರ್ಗೋದೇವ.
೭೩) ಬಾಲಸಿದ್ಧೇಶರ.
೭೪) ಚೆನ್ನವೃಷಭ.
೭೫) ವೃದ್ಧವೃಷಭೇಂದ್ರ.
೭೬) ಚೆನ್ನಮಲ್ಲಿಕಾರ್ಜುನ.
೭೭) ಮುಕ್ತಮಲ್ಲಿಕಾರ್ಜುನ.
೭೮) ಸಿದ್ಧಮಲ್ಲಿಕಾರ್ಜುನ.
೭೯) ಏಕೋದೇವ.
೮೦) ಆಚಾರ್ಯಭಾಸ್ಕರ.
೮೧) ಮೋಕ್ಷೇಶ್ವರ.
೮೨) ಸಿದ್ಧವೀರೇಶ.
೮೩) ಭದ್ರೇಶ್ವರ.
೮೪) ಅಮೃತಾನಂದ.

೮೫) ಷಡಕ್ಷರ.
೮೬) ಭಕ್ತಿವರ್ಧನ.
೮೭) ಪಾಶಹರ,
೮೮) ಮಹಿಮಾಕರ.
೮೯) ಶಿವಲಿಂಗ.
೯೦) ನಯನತ್ರಯ.
೯೧) ವಿರೂಪಾಕ್ಷ.
೯೨) ಮರುಳಸಿದ್ಧ.
೯೩) ಮಹಾಂತಮಲ್ಲಿಕಾರ್ಜುನ
೯೪) ಕೃಷ್ಣಮಲ್ಲಿಕಾರ್ಜುನ.
೯೫) ಶಿವಲಿಂಗ.
೯೬) ವೃಷಭಚೆನ್ನವೀರ.
೯೭) ಪರಚೆನ್ನವೀರ.
೯೮) ಸಿದ್ಧಲಿಂಗ.
೯೯) ಮರುಳಸಿದ್ಧ.
೧೦೦) ಜಹಾಗುರುಸಿದ್ಧ.
೧೦೧) ಚೆನ್ನವೃಷಭ.
[illegible]
೧೦೩) ಚೆನ್ನವೀರ.
೧೦೪) ಚೆನ್ನವೃಷಭ.
೧೦೫) ಗುರುಸಿದ್ಧ.
೧೦೬) ಮರುಳಸಿದ್ಧ.
೧೦೭) ಚೆನ್ನವೃಷಭ.
೧೦೮) ಸಿದ್ಧಲಿಂಗ.
೧೦೯) ಸಿದ್ಧೇಶ್ವರ ಸ್ವಾಮಿಗಳು.
(ಈಗಿನವರು)

ವಿಜಯಚರಿತದ ಪರಂಪರೆಗೆ ಆಳ್ವಿಕೆಯ ಮತ್ತು ಐಕ್ಯದ ಕಾಲಗಳನ್ನು ಕೊಟ್ಟಿದೆ. ಕಲಿಯುಗಾದಿಯ ಮೊದಲನೆಯ ದಿನ ಅವತರಿಸಿದ ಮರುಳಾರಾಧ್ಯರಿಂದ ಮೊದಲುಗೊಂಡು ೨೫ ನೆಯ ಗುರುಗಳವರೆಗೆ ಚರಿತವು ಕೊಟ್ಟಿರುವ ಆಯುಃಪ್ರಮಾಣದ ಆಧಾರದ ಮೇಲೆ ಅವರವರ ಆಳ್ವಿಕೆಯ ಮತ್ತು ಐಕ್ಯದ ಕಾಲಗಳನ್ನು ಕ್ರಿ. ಪೂ. ಹಾಗೂ ಕ್ರಿ. ಶ ಗಳ ರೀತಿಯಲ್ಲಿ ಅವರವರ ಮುಂದೆ ಜೋಡಿಸಲಾಗಿದೆ. ಮರುಳಾರಾಧ್ಯರ ಯೋಗಸಿದ್ಧಿ ೬೦೬ ವರ್ಷಗಳು. ಅಂದಾಜು ಜೀವಿತ ಕಾಲ ೬೦೦ ವರ್ಷಗಳು. ಈ ರೀತಿ ಅವರಿಗೆ ೧೨೦೬ ವರ್ಷಗಳ ಆಯುಃಪ್ರಮಾಣವನ್ನು ನಿಶ್ಚಯಿಸಿದೆ. ಹೂಲಿ ಮರುಳಸಿದ್ಧನ ಆಯುಷ್ಯವನ್ನು ೮೦ ವರ್ಷಗಳ ಅಂದಾಜು ಮಾಡಿದೆ. ಪಂಚಾಂಗದ ರೀತ್ಯಾ ಈ ವಿರೋಧಿ ಸಂವತ್ಸರಕ್ಕೆ ಕಲಿಯುಗ ಹುಟ್ಟಿ ೫೦೭೦ ವರ್ಷಗಳು ಆದವು. ಇದರಲ್ಲಿ ಮರುಳಾರಾಧ್ಯರ ಆಯುಃಮಾನ, (೧೨೦೬)ವನ್ನು ಕಳೆದರೆ ಉಳಿಯುವ ೩೮೬೪ ವರ್ಷಗಳಲ್ಲಿ ಕ್ರಿಸ್ತಶಕಾರಂಭದಿಂದ ಈವರೆಗಿನ ೧೯೬೯ ವರ್ಷಗಳನ್ನೂ ಕಳೆದರೆ ಕ್ರಿ. ಪೂ. ೧೮೯೫ ಕ್ಕೆ ಮರುಳಾರಾಧ್ಯರ ಐಕ್ಯ ಕಾಲವಾಗು

ತ್ತದೆ. ಈ ರೀತಿ ಲಿಕ್ಯಾಚಾರದ ಮೇಲೆ ತಯಾರಿಸಿದ ಪರಂಪರೆಯನ್ನು ಈ ಹಿಂದೆ ವಾಚಕರ ಅವಗಾಹನೆಗೆ ತಂದಿರುತ್ತೇನೆ.

ಈ ಮೂರು ಪರಂಪರೆಗಳನ್ನು ಶ್ರೀ ಶ್ರೀಗಳವರು ಮತ್ತು ಶ್ರೀ ವಿರೂಪಾಕ್ಷ ಶಾಸ್ತ್ರಿಗಳು ಇಂತಹ ಅಜ್ಞಾನದ ಪ್ರವೃತ್ತಿಯವರು [illegible] ಸಾಧ್ಯವೇ ವಿನಾ ಮಾನವ ಸಾಮಾನ್ಯ ಪ್ರಕೃತಿಯುಳ್ಳ ಪ್ರಪಂಚವು ಒಪ್ಪಲಾರದು.

## ಪುಟ ೧೧೭.

ಮುಂತಾಗಿದ್ದವರಿಷ್ಟ ಜನ ಎ.ಒ [illegible] ಶ್ರೀಗಳವರ ಲೇಖನದ ಕೆಲವು ಅಂಶಗಳ ಬಗ್ಗೆ ಪ್ರತ್ಯೇಕವಾದ ವಿಮರ್ಶೆಯನ್ನು ಪ್ರಾರಂಭಿಸುತ್ತೇನೆ.

“ಕರ್ನಾಟಕ ಕವಿ ಚರಿತೆಕಾರರ ಅಭಿಪ್ರಾಯದಂತೆ ಕ್ರಿ. ಶ. ೧೬೫೦ ರಲ್ಲಿ ಪ್ರಸಿದ್ಧನಾದ ಹೂಲಿಯ ಸಿದ್ಧನಂಜೇಶ ಕವಿಯು ತನ್ನ ಗುರುರಾಜ ಚಾರಿತ್ರದಲ್ಲಿ ಸ್ತುತಿಸಿರುವ ಮರುಳಸಿದ್ಧನೂ, ಈ ಸಿದ್ಧನಂಜೇಶ ಕವಿಯ ಶಿಷ್ಯನಾದ ಹೂಲಿಯ ನಂದೀಶ ಕವಿಯು ತನ್ನ ಮರುಳಾರಾಧ್ಯ ವಿಜಯದಲ್ಲಿ ಸ್ತುತಿಸಿ ಶಾಲಿವಾಹನ ಶಕ ೮೦೪ ರಲ್ಲಿ ಕಾಲಿಟಾ ಉಜ್ಜಯಿನಿಯಿಂದ ಕರ್ನಾಟಕಕ್ಕೆ ಬಂದವನೆಂದು ಹೇಳಿರುವ ಮರುಳಸಿದ್ಧನೂ ಒಬ್ಬನೆಂತಲೇ ತಿಳಿಯುತ್ತದೆ.”

ಶ್ರೀಗಳವರು ಕವಿ ಚರಿತೆಯನ್ನು ನೋಡಿದ್ದಾರೆಂಬುದು ಮೇಲಿನ ಅವರ ವಾಕ್ಯಗಳಿಂದ ತಿಳಿಯುತ್ತದೆ. ಆದರೆ ಅವರು ತಿಳಿದಿರುವಂತೆ ಗುರುರಾಜ ಚಾರಿತ್ರವನ್ನು ಬರೆದವನು ಹೂಲಿ ಸಿದ್ಧನಂಜೇಶನೆಂದು ಕವಿ ಚರಿತೆಕಾರರ ಅಭಿಪ್ರಾಯವಿಲ್ಲ. ಗುರುರಾಜ ಚಾರಿತ್ರವನ್ನು ಬರೆದವನು ಹೂಲಿಯ ಸಿದ್ಧನಂಜೇಶನ ಶಿಷ್ಯ ನವನಂದಿ ಸಿಂಹಾಸನದ ಸಿದ್ಧನಂಜೇಶ ಕವಿಯೆಂಬುದನ್ನು ಅವರು ಅಲ್ಲಿ ಸ್ಪಷ್ಟಗೊಳಿಸಿದ್ದಾರೆ. ಗುರುರಾಜ ಚಾರಿತ್ರಕರ್ತನಾದ ಸಿದ್ಧನಂಜೇಶ ಕವಿಯು ತಾನೇ ಪೂರ್ವದಲ್ಲಿ ಪಂಚವಣ್ಣಿಗೆಯ (ಹೂಲಿ) ಸಿದ್ಧನಂಜೇಶ (ಚನ್ನವೀರಾಂಬಾ ಪತಿ) ನಿಗೆ ಶಿಷ್ಯನಾಗಿದ್ದನೇ ವಿನಾ, (ರಾಚವಟ್ಟೆಯಾ.

ರಾಧ್ಯನೂ ಹೂಲಿ ಸಿದ್ಧನಂಜೇಶನ ಶಿಷ್ಯ) ತಾನು ಯಾವ ಶಿಷ್ಯನನ್ನು ಪಡೆದಿರಲಿಲ್ಲ. "ಘಶಾಂತ ಬಂಧುರ ಸಂಸ್ಕೃತ ಪ್ರಾಕೃತೋಭಯ ಕವಿತ್ವಾಯಿಲರ ಶಿರೋಮಣಿಯೆನಿಪ ನಂದೀಶ ಕವಿಯ ಕೃಪೆಯಿಂ ಪ್ರಕಟಮಂ ಮಾಡಿದೆಂ" ಎಂದು ಹೇಳಿ ನಂದೀಶನು ತನ್ನ ಮಿತ್ರನೆಂದು ಸೂಚಿಸಿದ್ದಾನೆ. ಆದ್ದರಿಂದ ಈ ಕವಿಯು ಗುರುರಾಜ ಚಾರಿತ್ರಕರ್ತ ಸಿದ್ಧನಂಜೇಶನ ಶಿಷ್ಯನಲ್ಲ. ಹೂಲಿಯ ಸಿದ್ಧನಂಜೇಶನು ಗುರುರಾಜ ಚಾರಿತ್ರವನ್ನು ಬರೆದವನೂ ಅಲ್ಲ. ಇದು ಶ್ರೀಗಳವರಿಗೆ ಈಗಲಾದರೂ ಮನವರಿಕೆಯಾದರೆ ನಾನು ಅವರಿಗೆ ಋಣಿಯಾಗಿರುತ್ತೇನೆ.

ಇನ್ನು ಗುರುರಾಜ ಚಾರಿತ್ರದ ಮರುಳಸಿದ್ಧನೂ ವಿಜಯಚರಿತದ ಆದಿ ಮರುಳಸಿದ್ಧನೂ ಒಂದೇ ಎಂಬ ವಾದವನ್ನು ವಿಮರ್ಶಿಸುವಾ. ಗುರುರಾಜ ಚಾರಿತ್ರದಲ್ಲಿ ಮರುಳಸಿದ್ಧನು ಕಗ್ಗಲ್ಲುಗೌಡನಿಗೆ ಮಗನಾಗಿ ಸಿಕ್ಕಿದಂತೆಯೂ, ಕೊಲ್ಲಾಪುರದ ಮಾಯೆಯನ್ನು ಸೋಲಿಸಿದಂತೆಯೂ, ಉಜ್ಜಯಿನಿಯಲ್ಲಿ ಬಯಲಾದಂತೆಯೂ, ಹೇಳಲ್ಪಟ್ಟಿದೆ. ವಿಜಯಚರಿತದಲ್ಲಿ ಆದಿ ಮರುಳಸಿದ್ಧನು ಕೊಲ್ಲಾಪುರದ ಮಾಯೆಯನ್ನು ಸೋಲಿಸಿ ಉಜ್ಜಯಿನಿಯಲ್ಲಿ ಬಯಲಾಗುತ್ತಾನೆ. ಕಗ್ಗಲ್ಲುಗೌಡನಿಗೆ ಇವನು ಮಗನಾಗಿ ಸಿಗುವುದಿಲ್ಲ. ಆದ್ದರಿಂದ ಗುರುರಾಜ ಚಾರಿತ್ರದ ಮರುಳಸಿದ್ಧನೂ, ಇವನೂ ಒಬ್ಬರೇ ಎನ್ನುವ ಶ್ರೀಗಳವರ ಮಾತು ಒಪ್ಪತಕ್ಕದ್ದಲ್ಲ.

## ಪುಟ ೧೧೮ ರಲ್ಲಿ

"ಹೂಲಿಯ ನಂದೀಶ ಕವಿಯ ಮರುಳಾರಾಧ್ಯ ವಿಜಯದಿಂದ ಕಲಿಯುಗದ ಆರಂಭ ಕಾಲದಲ್ಲಿದ್ದ ೧) ಮರುಳಾರಾಧ್ಯ, ಶಾ. ಶ. ೮೨೪ ರಲ್ಲಿದ್ದ ೨) ಆದಿ ಮರುಳಸಿದ್ಧ, ಶಾಲಿವಾಹನ ಶಕ ೧೦೦೩ ರಲ್ಲಿ ಹೂಲಿಯ ಮಾಹೇಶ್ವರ ವಂಶದಿಂದ ಕರ್ನಾಟಕ ಉಜ್ಜಯಿನಿಗೆ ಪಟ್ಟಕ್ಕೆ ಬಂದ. ೩) ಮರುಳಸಿದ್ಧ ಕ್ರಿ. ಶ. ೧೪೮೦ ರಲ್ಲಿ ಪ್ರಸಿದ್ಧನಾದ ಹಂಪೆಯ ಪ್ರೌಢ ದೇವರಾಯನಿಂದ ತುಂಗಭದ್ರಾ ದಂಡೆಯಲ್ಲಿ ಪಾವನಾಶ್ರಮವನ್ನು ನಿರ್ಮಿಸಿಕೊಂಡು ತಪಸ್ವಿಯಾಗಿ ಮೆರೆದ ಉಜ್ಜಯಿನೀ ಪೀಠದ ಸಿದ್ಧ ಮಲ್ಲಾರ್ಯರ ವರದಿಂದ

ಹುಟ್ಟಿದ ೪) ಸಿಂದೋಗಿಯ ಮೂದಿಗ ಮರುಳಸಿದ್ಧ, ಹೀಗೆ ನಾಲ್ವರ ಚಾರಿತ್ರ್ಯವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ಅನುಕೂಲವಾಗಿದೆ.

ಶ್ರೀಗಳು ಇಲ್ಲಿ ನಾಲ್ಕು ಜನ ಮರುಳಸಿದ್ಧರ ಹೆಸರನ್ನು ಉಲ್ಲೇಖಿಸಿರುತ್ತಾರೆ. ನಾನು ಈ ಹಿಂದೆಯೇ ಮರುಳಾರಾಧ್ಯ ಮರುಳಸಿದ್ಧ ಪದಗಳು ಪರ್ಯಾಯ ವಾಚಕಗಳೆಂದೂ, ಇದನ್ನು ಮರುಳಸಿದ್ಧಾಂಕದ ಸಂಪಾದಕರೂ, ಅವರ ಪ್ರೋತ್ಸಾಹಕರೂ ಯಾವ ರೀತಿಯಲ್ಲಿ ಒಪ್ಪಿಕೊಂಡಿದ್ದಾರೆಂಬುದನ್ನು ವಿಶದಪಡಿಸಿರುತ್ತೇನೆ. ಆದ್ದರಿಂದ ಇಲ್ಲಿ ಮರುಳಾರಾಧ್ಯ ಎಂಬುದು ಕಲ್ಪನೆಯೆಂಬುದನ್ನು ಇನ್ನೊಮ್ಮೆ ಹೇಳಬೇಕಾಗಿಲ್ಲ. ಹಾಗೆಯೇ ಎರಡು ಉಜ್ಜಯಿನಿಗಳೂ ಕಾಲ್ಪನಿಕವಾದವು. ಸಂಸ್ಕೃತ ರೇಣುಕ ವಿಜಯದಲ್ಲಿ :–

" ಗೋಗಿರಿ ಭೈರವಗಿರಿ ಪ್ರಮುಖ ಪಾವನತಮ ಪರ್ವತ ಪ್ರಕರ ಪರಿವೇಷ್ಟಿತಂ, ಗಣನಾತೀತ ಶಿವಲಿಂಗಸಂಘ ಸಂಗತ ಸಿದ್ಧೇಶ್ವರಾಯತನೋಪಶೋಭಿತ ಶೃಂಗಾಟಕಂ,............................ಉಜ್ಜಯಿನೀ ಮಹಾಕ್ಷೇತ್ರಮಾಸಾಧ್ಯ ತನ್ಮಧ್ಯೇ ವಿದ್ಯೋತಮಾನ ಸದ್ಧರ್ಮ ಪೀಠಮಧಿಷ್ಠಂತಂ ..........................ಶ್ರೀ ಮರುಳಾರಾಧ್ಯ ನಾಮದೇಶಿಕಂ ಸಂದೃಕ್ಷ್ಯ" ಎಂದು ಹೇಳಿರುತ್ತಾನೆ. ಇಲ್ಲಿ ವರ್ಣಿಸಿರುವ ಉಜ್ಜಯಿನಿ ಪಕ್ಕದಲ್ಲಿ ಗೋಗಿರಿ ಭೈರವಗಿರಿಗಳಿವೆಯೆಂದು ಹೇಳಿರುವುದರಿಂದಲೂ, ಇಲ್ಲಿಯೇ ಮರುಳಾರಾಧ್ಯರಿದ್ದರೆಂದು ಹೇಳಿರುವುದರಿಂದಲೂ, ಇಲ್ಲಿಯೇ ಸಿದ್ಧೇಶ್ವರ ಲಿಂಗವಿದೆಯೆಂದು ಸೂಚಿಸಿರುವುದರಿಂದಲೂ, ಒಂದೇ ಉಜ್ಜಯಿನಿಯೆಂಬುದು ಸ್ಪಷ್ಟವಾಗುತ್ತದೆ. ಮರುಳಾರಾಧ್ಯ, ಸಿದ್ಧೇಶ್ವರ ಲಿಂಗಗಳಿಗಾಗಿಯೇ ಪ್ರತ್ಯೇಕ ಇನ್ನೊಂದು ಉಜ್ಜಯಿನಿಯನ್ನು ಮಾಡಲಾಗಿತ್ತು. ರೇಣುಕ ವಿಜಯವು ಹೇಳುವಂತೆ ನೋಡಿದರೆ ಎರಡು ಉಜ್ಜಯಿನಿ ಸುಳ್ಳು. ಮಾಳವ ಉಜ್ಜಯಿನಿಗೂ ಈ ಪೀಠಕ್ಕೂ ಸಂಬಂಧವೇ ಇಲ್ಲವೆಂದು ಅರ್ಥವಾಗುತ್ತದೆ. ಆದರೆ ಕರ್ನಾಟಕ ಉಜ್ಜಯಿನಿಯೊಂದೇ ನಿಜವಾದುದೆಂದೂ, ಆದಿ ಮರುಳಸಿದ್ಧನೇ ಮರುಳಾರಾಧ್ಯನೆಂದೂ, ಕಲೆಯಲ್ಪಟ್ಟಿದ್ದಾನೆಂದೂ, ಪ್ರತ್ಯೇಕ ಮರುಳಾರಾಧ್ಯರ ಕಲ್ಪನೆಯು ಕೃತಿಮವಾದುದೆಂದೂ ಸಿದ್ಧವಾಗುತ್ತದೆ.

ಮಾಳವ ಉಜ್ಜಯಿನಿಯೇ ಕಾಲ್ಪನಿಕವಾದ ಮೇಲೆ ಆದಿ ಮರುಳಸಿದ್ಧನು ಅಲ್ಲಿಂದ ಕ್ರಿ. ಶ. ೬೦೨ ರಲ್ಲಿ ಪರಳಿಗೆ ಬಂದದ್ದು ಸಹ ಸತ್ಯವಲ್ಲ.

ಹಿಂದೆ ಪರಂಪರೆಯಲ್ಲಿ ತಿಳಿಸಿರುವಂತೆ ಕ್ರಿ.ಪೂ. ದಲ್ಲಿಯೇ ಪರಳಿಗೆ ಬಂದಿರಬೇಕಾಗುತ್ತದೆ. ಈ ಬಗ್ಗೆ ಇಲ್ಲಿ ಕೊಟ್ಟಿರುವ ಕಾಲವೂ ಕೃತ್ರಿಮವಾದುದು. ಅಂತೆಯೇ ಹೂಲಿ ಮರುಳಸಿದ್ಧನು ಕ್ರಿ. ಶ. ೧೦೮೯ ರಲ್ಲಿ ಉಜ್ಜಯಿನಿ ಪೀಠಕ್ಕೆ ಬಂದನೆಂಬುದೂ ಅಸತ್ಯ. ಏಕೆಂದರೆ ಆದಿ ಮರುಳಸಿದ್ಧನು ಕ್ರಿ. ಶ. ೧೦೫೨ ರಲ್ಲಿ ಕಾಲವಾದ ನಂತರ ೨೫೩ ವರ್ಷಗಳ ತನಕ ನಾಲ್ಕು ಜನ ಗುರುಗಳು ಆಳಿದ್ದಾರೆ. ಆವನು ಪಟ್ಟಕ್ಕೆ ಬಂದಿರುವುದು ನಿಜವಾಗಿದ್ದಲ್ಲಿ ಕ್ರಿ. ಶ. ೧೩೦೫ ರಲ್ಲಿ ಬರಬೇಕಾಗುತ್ತೆ. ಕ್ರಿ. ಶ. ೧೦೮೯ ರಲ್ಲಿ ಬಂದನೆಂದು ಹೇಳಿರುವುದರಿಂದ ಕ್ರಿ. ಶ. ೧೦೫೨ ಕ್ಕೂ, ಕ್ರಿ. ಶ. ೧೦೮೯ ಕ್ಕೂ ೩೭ ವರ್ಷಗಳು ಮಾತ್ರ ಅಂತರವಾಗುತ್ತೆ. ನ್ಯಾಯವಾಗಿ ೨೫೩ ವರ್ಷಗಳ ಅಂತರವಿರಬೇಕು. ಚರಿತವೇ ೨೫೩ ವರ್ಷಗಳ ಮತ್ತು ೩೭ ವರ್ಷಗಳ ಅಂತರಗಳನ್ನು ಹೇಳಿರುವುದು. ನಂದೀಶ ಕವಿಯು ಕವಿ ಸಿದ್ಧನಂಜನ ಮಿತ್ರನೆಂಡ ಮೇಲೆ ಇಂತಹ ಅವಿವೇಕತನವನ್ನು ಮಾಡುತ್ತಾನೆಂದು ಹೇಳಲು ಸಾಧ್ಯವೇ ಇಲ್ಲ. ಈ ಕಾವ್ಯ ಕೃತ್ರಿಮವಾದುದೆಂದು ಹೇಳಲು ಸಿಕ್ಕಿರುವ ಸಾವಿರಾರು ಕಾರಣಗಳಲ್ಲಿ ಇದು ಪ್ರಬಲವಾದ ಕಾರಣ. ಈ ಅವಿವೇಕತನವನ್ನು ಕವಿಯ ಮೂಲಕ ಮಾಡಿಸಿದ್ದಾರೆ. ಶ್ರೀಗಳವರಾದರೂ ಕೊನೆಯವರಿಗೂ ನೋಡಿಲ್ಲ. ಒಟ್ಟಿನಲ್ಲಿ ಶ್ರೀಗಳೇ ನಂದೀಶ ಕವಿಯೆಂದರೆ ತಪ್ಪಾಗುವುದೇ ಇಲ್ಲ. ವಾಚಕರು ಕಾಲದ ವಿಷಯದಲ್ಲಿ ಕೊಟ್ಟಿರುವ ಪದ್ಯಗಳನ್ನು ಒಮ್ಮೆ ಓದಬೇಕಾಗಿ ವಿನಂತಿಸುತ್ತೇನೆ.

ಈ ಚರಿತಕ್ಕೆ ಮರುಳಾರಾಧ್ಯ ವಿಜಯವೆಂಬ ಹೆಸರಿದೆ. ಇದರಲ್ಲಿ ಮುಖ್ಯವಾಗಿ ವರ್ಣಿಸುವುದು ಆದಿ ಮರುಳಸಿದ್ಧನ ಚರಿತ್ರೆಯೆಂದು ಹೇಳಲಾಗಿದೆ. ಮತ್ತೆ ಮೊದಲನೆಯ ಸಂಧಿಯಲ್ಲಿ ೩೨, ೩೩, ೩೪ ನೆಯ ಪದ್ಯಗಳಲ್ಲಿ ಮರುಳಾರಾಧ್ಯ, ಮರುಳಸಿದ್ಧ (ಆದಿ) ಹೂಲಿ ಮರುಳಸಿದ್ಧ ಇವರ ಚರಿತೆಯನ್ನು ಹೇಳುವೆನೆಂದು ಹೇಳುತ್ತಾನೆ. ಒಟ್ಟಿನಲ್ಲಿ ಮರುಳಸಿದ್ಧರನೇಕರೆಂಬುದನ್ನು ಸಾಧಿಸಲೇ ಬೇಕೆಂಬ ಧ್ಯೇಯವೇ ಈ ಗ್ರಂಥ ನಿರ್ಮಾಣದ ಉದ್ದೇಶವೆಂಬುದನ್ನು ಕವಿಯು ತನ್ನ ಕಣ್ಣೆದುರಿನಲ್ಲಿಟ್ಟುಕೊಂಡಿದ್ದಾನೆಂಬುದು ಸ್ಪಷ್ಟವಾಗುತ್ತದೆ.

ಇನ್ನು ಪ್ರಕೃತಕ್ಕೆ ಬರುತ್ತೇನೆ. ಈ ಹೂಲಿ ಮರುಳಸಿದ್ಧನು ಯಾವ ದೃಷ್ಟಿಯಿಂದಲೂ ಈ ಪೀಠಕ್ಕೆ ಸಂಬಂಧಪಟ್ಟವನಲ್ಲ. ಇವನು ರೇಣುಕನ ಅವತಾರವೆಂದು ಪುಲಿಗೆರೆಯ ಶಿಲಾ ಶಾಸನದಲ್ಲಿ ಹೇಳಿದೆ. ಆ ಶಾಸನದಲ್ಲಿ ಅವನು ಲಿಂಗಮೂರ್ತಿಯಾದ (ಲಿಂಗೈಕ್ಯನಾದ) ಕಾಲವನ್ನು ಹೇಳಲಾಗಿದೆ.

ಉ॥ "ಶಕಮುಬಾಣ (೧೩) ಪುರಾಂಬುರಾಸಿ ಸಸಿಸಂಖ್ಯಾ ಶ್ರೀ ಮುಖೀವತ್ಸರಂ। ಪ್ರಕಟಂಬೆತ್ತಿ ಸುಮಾಸ ಭಾದ್ರಪದ ಶುದ್ಧಂ ಪಂಚಮಿಾ (೧೪) ವಾರಜಂ॥ ಡಕರಾಖ್ಯೋದಯ ಕಾಲದೊಳ್ ವಿಮಲ ಲಿಂಗಾಕಾರ ದಿಂನಿಂದನೋ। ಲ್ದ ಕಲಂಕ ಸ್ಥಲನಾದನ್ಯ (?) ಪ್ರಪುರ (೧೫) ದೊಳ್ಪೊ ವಲ್ಲಿ ಸಿದ್ಧೇಶ್ವರಂ॥

ಕಂ॥ ಇದು ದಕ್ಷಿಣ ಕಾಶಿ ಬಳಿ। ಕ್ಕಿದು ಪುರಿಸಹಿತಂದು ರಜತಗಿರಿಗೆ ಇದಿದ (೧೬) ಪು॥ ನ್ಯದತಾಣಮೆಂದು ತಾನ್ನೆಲ। ಸಿದನೀ ಪು ರಿ ಗೆ ರೆ ಯೊಳೊಲ್ದು ಪುಲಿಯಾಸಿದ್ಧಂ॥

ವ॥ ಸ್ವಸ್ತಿ ಶ್ರೀ ಮ ತ್ಕೈಲಾ ಸ ವಾ ಸಿ ಯಾ (೧೪) ದ ಶ್ರೀ ಮತ್ಪರಮೇಶ್ವ। ರಾವತಾರಮಪ್ಪರೇವಣಾಚಾರ್ಯ ಭಕ್ತಜನ ಹಿತಾರ್ಥ ಯಾತ ಮರ್ತ್ಯಕ್ಕೆ ಪೂಲಿ(ಯ) ಮ(೧೫)ರುಳ ಸಿದ್ಧೇಶ್ವರ ನಾಮವಂ ಧರಿಸಿ ಕತಿಪಯದಿವಸಂ ತನ್ನ ಮಹಾತ್ಮ್ಯಮಂ ಮೆರೆದು ಚರಿಸುತಪುಲಿಕರ ಪುರಕ್ಕೆ(೧೬)ಯ್ತಂದು ಸಕಲ ಭಕ್ತಾರಿಷ್ಟಾರ್ಥ ಸಿದ್ಧಿಯಿಂ ಸಾರ್ಚಿ ಶ್ರೀ ದಕ್ಷಿಣ ಸೋಮೇಶ್ವರನ ಸಾನಿಧ್ಯದಲ್ಲಿ ಸಾ ಲಿ ವಾ ಹ ನ ಶಕ(೨೭)ದ ಸಾವಿರದ ನಾನೂರ ಮೂವತ್ತಯ್ದನೆಯ ಶ್ರೀಮುಖಿ ಸಂವತ್ಸರದ ಭಾದ್ರ ಪದ ಶುದ್ಧ ಪಂಚಮಿ ಆದಿತವಾ(೨೮)ರದರುಣೋದಯದ ಕಾ ಲ ದ ಲ್ಲಿ ಶ್ರೀ ಲಿಂಗಮೂರ್ತಿಯಾಗಿ ನೆಲಸಿದ ಮರುಳ ಸಿದ್ಧೇಶ್ವರ ದೇವರಿಗೆ ನಿಜ ಶಿಷ್ಯನಪ್ಪ ಕೊ(೨೯)ಡಲಿಗೆಯ ಸಂಗಿಸಟ್ಟಿಯರ ಸತ್ಪುತ್ರ ಪರ್ವತಶೆಟ್ಟಿ ಸ್ವಯುಧಮಾರ್ಜಿತ ವಿತ್ತದಿಂ ಪೂದೋಟಮುಂ ಬಾ ವಿ ಯು ಂ (೩೦) ಶಿವಾಲಯಮುಂ ಲೋಕ ಪ್ರಸಿದ್ಧಮಾಗೆ ವಿರಚಿಸಿದಂ.

ಕಂ || ವರಮೂರ್ತಿ ಮರುಳಸಿದ್ಧೇ | ಶ್ವರ ಭವನವನಿಂ | ದು
ಶಾಲೆಯಂ ಶಾಸನಮಂ || ವಿರಚಿಸಿದರ್ ಮಾದೋಜಂ ಪರಿಣತ ಸಿದ್ಧೋ
ಜರಿರ್ವರತಿ ಕುಶಲತೆ ಇಂ || ೩೨ || ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ

ಈ ಶಾಸನದಲ್ಲಿ ಹೂಲಿಯ ಮರುಳಸಿದ್ಧನು ರೇವಣಾಚಾರ್ಯನ ಅವ ತಾರನೆಂದೂ, ಪುಲಿಗೆರೆಯ ದಕ್ಷಿಣ ಸೋಮೇಶ್ವರ ಸಾನ್ನಿಧ್ಯದಲ್ಲಿ ಶಾ. ಶ. ೧೪೩೫ (ಕ್ರಿ. ಶ. ೧೫೧೩) ರಲ್ಲಿ ಐಕ್ಯವಾದನೆಂದೂ ಹೇಳಲಾಗಿದೆ. ಕ್ರಿ. ಶ. ೧೫೧೩ರಲ್ಲಿ ಕಾಲವಾಗಿರುವ ವ್ಯಕ್ತಿ ವಿಜಯಚರಿತ ಹೇಳುವಂತೆ ಕ್ರಿ.ಶ.೧೧೮೧ ರಲ್ಲಾಗಲಿ, ಕ್ರಿ. ಶ. ೧೪೯೭ ರಲ್ಲಾಗಲಿ, ಪಟ್ಟಕ್ಕೆ ಬರಲು ಸಾಧ್ಯವೇ ಇಲ್ಲ. ಕ್ರಿ. ಶ. ೧೫೧೩ ರಲ್ಲಿ ಕಾಲವಾದವನಿಗೆ ೧೦೦ ವರ್ಷಗಳ ಆಯುಷ್ಯವನ್ನು ಹಾಕಿದರೂ ಅಲ್ಲಿಗೆ ಬರಲು ಸಾಧ್ಯವೇ ಇಲ್ಲ. ಇವನು ರೇವಣಾಚಾರ್ಯನ ಅವತಾರಕ್ಕೂ, ಸೋಮೇಶ್ವರನಿಗೂ ಸಂಬಂಧವುಳ್ಳವನಾಗಿರುವುದರಿಂದ ಉಜ್ಜಯಿನಿ ಪಟ್ಟಕ್ಕೆ ಬರುವುದು ಸಮಂಜಸವೇ ಆಗುವುದಿಲ್ಲ. ಶ್ರೀ ಶ್ರೀಗಳ ವರು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಲ್ಲಿ ನಂಬಿಕೆಯಿಟ್ಟುಕೊಂಡು ಈ ಶಾಸನದಲ್ಲಿರುವ ಕಾಲವನ್ನು ಶಾಸನ ರಚಿಸಿದ ಕಾಲವೆಂದು ಹೇಳುವ ಅವರ ಅಭಿಪ್ರಾಯವನ್ನು ತಾವೂ ಒಪ್ಪಿದ್ದಾರೆ. ಈ ಶಾಸನದ ಕೊನೆಯಲ್ಲಿ ಪ್ರತ್ಯೇಕ ಒಂದು ಕಂದ ಪದ್ಯವನ್ನು ಬರೆದು ಶಾಸನ ರಚನೆಯ ವಿಚಾರವನ್ನು ತಿಳಿಸ ಲಾಗಿದೆ. ಈ ಕಾಲವು ಶಾಸನ ರಚನೆಗೆ ಸಂಬಂಧಪಟ್ಟಿದಾಗಿದ್ದರೆ ಈ ಕಂದ ಪದ್ಯದಲ್ಲಿಯೇ ಇದನ್ನು ಸೇರಿಸುತ್ತಿದ್ದರು. ಆದರೆ ಈ ಕಾಲವು ಗದ್ಯ ಭಾಗ ದಲ್ಲಿದೆ. ಗದ್ಯ ಭಾಗದಲ್ಲಿರುವ ಕಾಲವನ್ನು ಪದ್ಯ ಭಾಗಕ್ಕೆ ಸಮನ್ವಯಿಸಿ ಅರ್ಥ ಮಾಡಲು ಆಸಕ್ತಿ ಇರುವುದಿಲ್ಲ. ಆಸಕ್ತಿ ಇಲ್ಲದೆ ಅರ್ಥ ಮಾಡಿದರೆ ಈ ದಿನ ಉಚ್ಚಾರ ಮಾಡಿದ ಕರ್ತೃಪದಕ್ಕೂ ಒಂದು ತಿಂಗಳ ನಂತರ ಉಚ್ಚಾರ ಮಾಡಿದ ಕ್ರಿಯಾಪದಕ್ಕೂ ಸಂಬಂಧ ಕಲ್ಪಿಸಬೇಕಾಗುತ್ತದೆ. ಮೊದಲು ಪದ್ಯಭಾಗದಲ್ಲಿ ಕಾಲವನ್ನು ಸೂಚಿಸುತ್ತಾ ಕಾಲವಾದನೆಂಬುದನ್ನೇ ಸ್ಪಷ್ಟಗೊಳಿಸಿದ್ದಾನೆ. ಆದ್ದರಿಂದ ಕ್ರಿ ಶ. ೧೫೧೩ ರಲ್ಲಿ ಕಾಲವಾದ ಹೂಲಿ ಮರುಳಸಿದ್ಧನು ಉಜ್ಜಯಿನಿ ಪಟ್ಟಕ್ಕೆ ಬಂದನೆಂದು ಕಲ್ಪಿಸಿರುವುದು ಐತಿ ಹಾಸಿಕ ಜ್ಞಾನಶೂನ್ಯತೆಯ ಪರಿಣಾಮವೆಂಬುದು ವಿಶದವಾಗುತ್ತದೆ.

ಹೂಲಿ ಮರುಳಸಿದ್ಧನು ಪಟ್ಟಕ್ಕೆ ಬಂದದ್ದೇ ಅಸತ್ಯವಾಗಿರುವಾಗ ಅವನ ನಂತರ ಬಂದ ಸಿದ್ಧಮಲ್ಲೇಶನ ಕಥೆಯೂ ಇಷ್ಟೇ ಅಸತ್ಯವಾದು ದೆಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ. ಇವರಿಬ್ಬರೂ ಇಲ್ಲದಿರುವಾಗ ಸಿಂದೋಗಿಯ ಮಾದಿಗ ಮರುಳಸಿದ್ಧನು ಎಲ್ಲಿಂದ ಬರುತ್ತಾನೆ? ವಾಚಕರೇ ತಿಳಿಯಬೇಕು. ಹೂಲಿ ಮರುಳಸಿದ್ಧನು ಎಷ್ಟು ವರ್ಷಗಳಿದ್ದನೆಂಬುದನ್ನು ಹೇಳಿಲ್ಲ. ಎಲ್ಲರ ಕಾಲವನ್ನೂ ಹೇಳಿ ಇವನೊಬ್ಬನ ಕಾಲವನ್ನು ಬಿಟ್ಟಿರು ವುದರಲ್ಲಿ ಏನಾದರೊಂದು ವಿಶಿಷ್ಟ ಉದ್ದೇಶವಿರಲೇಬೇಕು. ಕಾಲವನ್ನು ಹೇಳಿ ರುವುದರಲ್ಲಿಯೂ ಉದ್ದೇಶವಿಲ್ಲದೇ ಇಲ್ಲ. ಕ್ರಿ. ಶ. ೧೪೦೬ ರಲ್ಲಿದ್ದ ಪ್ರೌಢ ದೇವರಾಯನ ಕಾಲದಲ್ಲಿ ಸಿದ್ಧಮಲ್ಲೇಶನು ಹಂಪೆಗೆ ಬಂದನೆಂದು ಹೇಳಲಾ ಗಿದೆ. ಇವನಿಗೆ ಪಟ್ಟವಾಗುವ ಹೊತ್ತಿಗೆ ೨೦ ವರ್ಷಗಳು. ಹಂಪೆಗೆ ಬರುವ ಹೊತ್ತಿಗೆ ೨೦ ವರ್ಷಗಳು ಅಂದಾಜು ಮಾಡಿದರೆ ಇವನು ಕ್ರಿ ಶ. ೧೪೦೬ ರಲ್ಲಿ ಹಂಪೆಗೆ ಬಂದವನು ಕ್ರಿ. ಶ. ೧೪೪೬ ರಲ್ಲಿ ಕಾಲವಾದನೆಂದು ಹೇಳಬ ಹುದು. ಇವನ ಹಿಂದಿನ ಹೂಲಿ ಮರುಳಸಿದ್ಧನು ಕ್ರಿ. ಶ. ೧೦೮೧ ರಲ್ಲಿ ಪಟ್ಟಕ್ಕೆ ಬಂದಿದ್ದರೆ ೮೦ ವರ್ಷಗಳ ಅವನ ಆಳ್ವಿಕೆಯನ್ನು ಭಾವಿಸಿದರೆ ಕ್ರಿ.ಶ. ೧೧೬೧ ಕ್ಕೆ ಕಾಲವಾಗುತ್ತಾನೆ. ಕ್ರಿ. ಶ. ೧೧೬೧ ರಿಂದ ಕ್ರಿ. ಶ. ೧೩೮೬ ರ ವರೆಗೆ ಪೀಠವು ಖಾಲಿ ಬಿದ್ದಿದ್ದಿತೇ? ಎಂಬುದನ್ನು ಚರಿತೆಯಲ್ಲಿ ಹೇಳಿಲ್ಲ. ಕ್ರಿ. ಶ. ೧೩೯೭ ಕ್ಕೆ ಪಟ್ಟಕ್ಕೆ ಬಂದನೆಂದು ಹೇಳಲು ಸ್ವತಃ ಶ್ರೀಗಳೇ ಸ್ಪಷ್ಟ ವಾಗಿ ಕ್ರಿ. ಶ. ೧೦೮೧ ಎಂದು ಹೇಳಿಯೇ ಬಿಟ್ಟಿದ್ದಾರೆ. ಆದ್ದರಿಂದ ಇಲ್ಲದ ಮರುಳಸಿದ್ಧ (ಹೂಲಿ) ನಿಂದ ಸಿದ್ಧಮಲ್ಲನ ಪಟ್ಟವಾಯಿತೆಂದರೆ ಅವನೂ ಇಲ್ಲ ದವನೇ ಆಗಬೇಕಾಯಿತು. ಈ ಹಿಂದೆ ಈ ಸಿದ್ಧಮಲ್ಲೇಶನೂ, ಗುರುರಾಜ ಚಾರಿತ್ರದಲ್ಲಿಯ ವಿಶ್ವೇಶ್ವರಾಚಾರ್ಯನ ಶಿಷ್ಯಪರಂಪರೆಯ ಸಿದ್ಧಮಲ್ಲೇಶನೂ ಒಬ್ಬನೇ ಎಂಬುದನ್ನು ಸ್ಪಷ್ಟಪಡಿಸಿರುತ್ತೇನೆ. ವಿಜಯಚರಿತವು ಆ ಸಿದ್ಧ ಮಲ್ಲೇಶನನ್ನು ಇಲ್ಲಿ ಉಪಯೋಗಿಸಿಕೊಂಡು ಈ ಕಥೆಯನ್ನು ಕಟ್ಟಿದೆಯೆಂ ಬುದು ಸುಸ್ಪಷ್ಟ. ಆದ್ದರಿಂದ ಈ ಸಿದ್ಧಮಲ್ಲನ ಹೆಸರಿನಲ್ಲಿ ವರ್ಣಿಸಿರುವ ವಿಷ ಯಗಳೆಲ್ಲಾ ಕೃತ್ರಿಮವಾದವುಗಳೆಂಬುದು ವಿಶದವಾಗಿದೆ. ಪ್ರಯುಕ್ತ ಮಾ ದಿಗ ಮರುಳಸಿದ್ಧ, ಮಾದಿಗ ಹರಳ ಈ ಎರಡು ವ್ಯಕ್ತಿಗಳೂ ಕಾಲ್ಪನಿಕವಾದ ವುಗಳು. ಸಿಂದೋಗಿಯಲ್ಲಾಗಲಿ, ಉಜ್ಜಯಿನಿಯಲ್ಲಾಗಲಿ ಮಾದಿಗರ

ಕೇರಿಗಳಲ್ಲಿರುವವು. ವಿಜಯಚರಿತ ಮತ್ತು ಶ್ರೀಗಳೇ ಹೇಳಿರುವಂತೆ ಸಿದ್ಧ ಮಲ್ಲೇಶನು ಆ ಎರಡು ಜನ ಭಕ್ತರಿಗಾಗಿ ಕಟ್ಟಿಸಿಕೊಟ್ಟ ಮರುಳಸಿದ್ಧನ ಗುಡಿಗಳು. ಅಲ್ಲಿ ಗುಡಿಗಳೇ ವಿನಾ ಪ್ರತ್ಯೇಕ ಸಮಾಧಿಗಳಿಲ್ಲ. ಈ ಪುಸ್ತಕ ದಲ್ಲೂ ಸಹ ಆ ಎರಡು ಚಿತ್ರಗಳನ್ನು ಕೊಟ್ಟಿದ್ದಾರೆ. ಉಜ್ಜಯಿನಿಯಲ್ಲಿ ರುವದಕ್ಕೇನೋ ಹರಳಯ್ಯನ ಸಮಾಧಿ ಎಂದು ಬರೆಯದೆ ನಿಜವಾದ ವಿಷಯ ವನ್ನೇ ಅಂದರೆ ಮರುಳಸಿದ್ಧ ದೇವಾಲಯವೆಂದೇ ಬರೆದಿರುತ್ತಾರೆ. ಸಿಂದೋಗಿ ಯಲ್ಲಿರುವ ಮರುಳಸಿದ್ಧನ ಗುಡಿಗೆ ಮರುಳಪ್ಪನ ಗುಡಿ ಎಂದು ಚಿತ್ರದಲ್ಲಿ ಬರೆ ದಿರುತ್ತಾರೆ. ಆದರೆ ಶ್ರೀಗಳೇ ತಮ್ಮ ಲೇಖನದಲ್ಲೂ ಮರುಳಸಿದ್ಧನ ದೇವ ಸ್ಥಾನವೆಂದು ಒಪ್ಪಿರುತ್ತಾರೆ. ಆದ್ದರಿಂದ ಸಿಂದೋಗಿಯ ಮರುಳಸಿದ್ಧ ಮತ್ತು ಹರಳ ಈ ಎರಡು ವ್ಯಕ್ತಿಗಳೂ ಕಾಲ್ಪನಿಕವಾದವುಗಳೆಂಬುದನ್ನು ಮತ್ತೊಮ್ಮೆ ಹೇಳಬೇಕಾಗಿಲ್ಲ.

ಈ ರೀತಿ ಮರುಳಾರಾಧ್ಯನಾಗಲಿ, ಹೂಲಿ ಮರುಳಸಿದ್ಧನಾಗಲಿ, ಸಿದ್ಧ ಮಲ್ಲೇಶನ ವರಪ್ರಸಾದಲಬ್ಧ ಸಿಂದೋಗಿ ಮಾದಿಗ ಮರುಳಸಿದ್ಧನಾಗಲಿ ಈ ಎಲ್ಲರೂ ನಿಜವಲ್ಲವೆಂಬುದು ಸ್ಪಷ್ಟವಾಯಿತು. ಆದ್ದರಿಂದ ಮರುಳಸಿದ್ಧನು ಒಬ್ಬನೇ ಎಂಬುದು ನಿರ್ವಿವಾದವಾಯಿತು.

## ಮತ್ತೊಂದು ವಿಷಯ (ಪುಟ ೧೯೯ ರಲ್ಲಿ)

ಶ್ರೀಗಳವರು ವಿಜಯಚರಿತದ ಮಾದಿಗ ಮರುಳಸಿದ್ಧನು ಕ್ರಿ. ಶ.೧೫೦೯ ರಲ್ಲಿದ್ದನೆಂದು ಹೇಳುತ್ತಾರೆ. ಮತ್ತು ಅವರೇ ಕ್ರಿ. ಶ. ೧೪೦೬ ರಲ್ಲಿದ್ದ ಪ್ರೌಢದೇವರಾಯನಿಂದ ಸಿದ್ಧಮಲ್ಲೇಶನು ಆಶ್ರಮವನ್ನು ಕಟ್ಟಿಸಿಕೊಂಡ ನೆಂದು ಹೇಳಿದ್ದಾರೆ. ಅಂದರೆ ಕ್ರಿ. ಶ. ೧೪೦೬ ರಲ್ಲಿ ಸಿದ್ಧಮಲ್ಲೇಶನು ಹಂಪೆಗೆ ಬಂದನೆಂದಾಯಿತು. ಇದಕ್ಕಿಂತ ಮುಂಚೆ ೨೦ ವರ್ಷಗಳ ಕೆಳಗೆ ಪಟ್ಟವಾಗಿರಬೇಕು. ಪಟ್ಟವಾಗುವ ಅವನಿಗೆ ೨೦ ವರ್ಷಗಳಾದರೂ ಆಗಿರ ಬೇಕು. ಆತನ ಜೀವಿತ ಕಾಲ ೮೦ ವರ್ಷಗಳು. ೪೦ ವರ್ಷ ವಯಸ್ಸು ಹಂಪೆಗೆ ಬಂದಾಗ ಎಂಬುದು ಗಮನಾರ್ಹ. ಕ್ರಿ. ಶ. ೧೪೪೬ ಕ್ಕೆ ಕಾಲವಾ ದನೆಂದು ಅರ್ಥವಾಗುತ್ತದೆ. ಆದ್ದರಿಂದ ಕ್ರಿ. ಶ. ೧೪೪೬ ರಲ್ಲಿ ಕಾಲವಾದ

ಸಿದ್ಧಮಲ್ಲೇಶನು ಕ್ರಿ. ಶ ೧೫೫೯ ರಲ್ಲಿದ್ದ ಸಿಂದೋಗಿ ಮಾದಿಗ ಮರುಳಸಿದ್ಧನ ಜನ್ಮಕ್ಕೆ ಪರವಿತ್ತನೆಂಬುದು ಯುಕ್ತಿ ಯುಕ್ತವಲ್ಲ. ಇಂತಹ ಈ ಈರ್ವರಲ್ಲಿ ಗುರುಶಿಷ್ಯ ಸಂಬಂಧ ಕಲ್ಪಿಸುವುದಾಗಲಿ, ಅವರು ಏಕಕಾಲದಲ್ಲಿ ಮರಣ ಹೊಂದಿದರೆಂದು ಹೇಳಿರುವುದಾಗಲಿ, ಯಾವುದೂ ನಿಜವಲ್ಲ. ಆದ್ದರಿಂದ ಈ ಅನೇಕ ಮರುಳಸಿದ್ಧರ ವಾದವು ಕಾಲ್ಪನಿಕವಾದುದು.

ಈ ಅನೇಕ ಮರುಳಸಿದ್ಧರ ಕಲ್ಪನೆಯು ಹುಟ್ಟಿದ್ದು ಮರುಳಸಿದ್ಧನು ಮಾದಿಗನಲ್ಲವೆನಿಸಲು. ಇದಕ್ಕೆ ಪ್ರೇರಣೆ, ತಳಹದಿ ಹಾಕಿದವರು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು. (ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನ ಕೇಸರಿ, ಶರಣಸಾಹಿತ್ಯ, ಸ್ವತಂತ್ರ ಕರ್ನಾಟಕ ಪತ್ರಿಕೆಗಳ ಸಂಪಾದಕರು) ಶ್ರೀ ಅ. ನ. ಕೃ. ರವರ ದೇವ ಕವಿಯ ಕಾವ್ಯದ ಬಗ್ಗೆ ಬರೆದಿರುವ ತಮ್ಮ ವಿಮರ್ಶೆಯಲ್ಲಿ ದೇವನ ಮರುಳಸಿದ್ಧನು ಆಚಾರ್ಯ ಮರುಳಸಿದ್ಧನಲ್ಲವೆಂಬು ದನ್ನು ಸಾಧಿಸಲು ಹೂಲಿ ಮರುಳಸಿದ್ಧ, ಕುಪ್ಪೂರು ಮರುಳಸಿದ್ಧ ಈ ಮೊದ ಲಾದ ಅರ್ವಾಚೀನ ವ್ಯಕ್ತಿಗಳ ಕಾಲಕ್ಕೆ ಪ್ರಾಚೀನತೆಯನ್ನು ಕಲ್ಪಿಸಿ ಅನೇಕ ಮರುಳಸಿದ್ಧ ವಾದದ ಅಂಕುರಾರ್ಪಣ ಮಾಡಿದರು ಇದರಿಂದ ಪ್ರೇರಿತರಾಗಿ, ಇದನ್ನೇ ತಳಹದಿಯಾಗಿ ಇಟ್ಟುಕೊಂಡು ಈ ವಿಜಯಚರಿತದ ನಿರ್ಮಾಣವು ಆಯಿತೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ಚರಿತವು ೨೦ ನೆಯ ಶತಮಾನದ ವೀರಶೈವಜಗದ್ಗುರುಗಳ ಮನ್ನಣೆಯನ್ನು ಪಡೆದಿದೆ. ಜಗದ್ಗುರು ಗಳೆಂಬುವವರು ಇದರಿಂದ ತಮ್ಮ ಮಟ್ಟವನ್ನು ತಾವೇ ಜಗತ್ತಿಗೆ ಅಳೆದು ತೋರಿಸಿದ್ದಾರೆಂದು ಹೇಳಬಹುದು.

## ಪುಟ ೧೯೯ ರಲ್ಲಿ'

"ಶ್ರೀಯುತ ಪಂಡಿತ ಚೆನ್ನಬಸವ ಕವಿಗಳು ಕವಲಿ ಮತ್ತು ಶ್ರೀಮಾನ್ ಎಸ್. ಎಸ್. ಬಸವನಾಳರು ಎಂ. ಎ., ಧಾರವಾಡ ಮತ್ತು ಅವರ ಐತಿಹಾ ಸಿಕ ಮಿತ್ರಮಂಡಲಿಯವರು **ನಮಗೆ** (ಶ್ರೀ ವಾಗೀಶ ಪಂಡಿತಾರಾಧ್ಯಸ್ವಾಮಿ ಗಳೆಂದು ಅರ್ಥ) ದೊರೆತಿರುವ ಮರುಳಾರಾಧ್ಯ ವಿಜಯದ ಮೂಲಪ್ರತಿ ಯನ್ನು ತಮ್ಮ ಕಡೆಗೆ ತರಿಸಿಕೊಂಡು ನೋಡಿರುವರು". ಹೀಗೆಂದು ಶ್ರೀ ಗಳವರು ಹೇಳುತ್ತಾರೆ. ವಿಜಯಚರಿತವು ದೊರೆತಿರುವುದು ಸಂಪಾದಕ ಪಂಡಿತ ಕವಲಿ ಮತ್ತು ಎಂ. ವಿ. ಮಠರಿಗಲ್ಲ. ನಮಗೆ ಅಂದರೆ ಈ ಲೇಖ

ನವನ್ನು ಬರೆದಿರುವ ಶ್ರೀ ಶ್ರೀಗಳವರಿಗೆ. ಪಂಡಿತ ಕವಲಿಯವರು ತಾವು ನಿಜವಾದ ಸಂಪಾದಕರಾಗಿದ್ದರೆ ಅವರು ತರಿಸಿಕೊಂಡು ನೋಡುವ ಪ್ರಸಂಗ ವೆಲ್ಲಿಯದು? ತಾವೇ ಆ ಪುಸ್ತಕವನ್ನು ದೊರೆಕಿಸಿಡವರಾಗುತ್ತಿದ್ದರು. ಆದ್ದರಿಂದ ಈ ಅಂಕದ ನಿಜವಾದ ಸಂಪಾದಕರೂ ಸಹ ಶ್ರೀಗಳೇ ಎಂದು ಹೇಳಬಹುದು. ಶ್ರೀ ಎಸ್. ಎಸ್. ಬಸವನಾಳ ಮತ್ತು ಅವರ ಮಿತ್ರಮಂಡಲಿಯವರು ಈ ಚರಿತವನ್ನು ನೋಡಿ ಯಾವ ಅಭಿಪ್ರಾಯವನ್ನು ಕೊಟ್ಟರೆಂಬುದನ್ನು ಲೇಖಕರು ಉಲ್ಲೇಖಿಸಿಲ್ಲ. ಆದರೆ ಈ ಪುಸ್ತಕದಲ್ಲಿ ಮುನ್ನುಡಿಯನ್ನು ಅನುಗ್ರಹಿಸಿರುವವರು ಶ್ರೀ ಬಸವನಾಳರು. ಮುನ್ನುಡಿಯಲ್ಲಿರುವ ಇವರ ಅಭಿಪ್ರಾಯವನ್ನೇ ಅವರ ಮಿತ್ರ ಮಂಡಲಿಯವರು ಅನುಮೋದಿಸಿರುವರೆಂದು ತಿಳಿಯಬಹುದಾಗಿದೆ.

ಇನ್ನೊಂದು ವಿಷಯ, ಶ್ರೀ ಶ್ರೀಗಳು ತಮ್ಮ ಶಿಷ್ಯರನೇಕರಿಗೆ ಬರೆದಿರುವ ಪತ್ರಗಳಲ್ಲಿ ಶ್ರೀಮರುಳಸಿದ್ಧಾಂಕದ ಪ್ರಕಟಣೆಗೆ ಸಂಸ್ಥಾನಕ್ಕೆ ಬಹಳ ಹಣದ ಖರ್ಚು ಬಂದಿದೆ. ಆದ್ದರಿಂದ ಈ ಪುಸ್ತಕವನ್ನು ಜನರು ಹೆಚ್ಚಾಗಿ ಕೊಂಡುಕೊಳ್ಳುವಂತೆ ಪ್ರಚಾರ ಮಾಡಿರಿ. ನಿಮಗೆ ಕಳುಹಿಸಿರುವ ವಿ. ಪಿ. ೪–೧೦–೦ ನ್ನು ಕೊಟ್ಟು ಬಿಡಿಸಿಕೊಳ್ಳಿ–ಎಂದು ತಿಳಿಸಿರುತ್ತಾರಾಗಿ ಅವರ ಶಿಷ್ಯರನೇಕರು ನನಗೆ ತಿಳಿಸಿದರು. ಆದ್ದರಿಂದಲೂ ಮತ್ತು ವಿಜಯಚರಿತದಲ್ಲಿ ೩೨, ೩೩, ೩೪ ನೆಯ ಪದ್ಯಗಳಲ್ಲಿ ಕೊಟ್ಟಿರುವ ಪರಸ್ಪರ ವಿರೋಧಿ ಕಾಲಮಾನವನ್ನು ಶ್ರೀಗಳವರು ನಿಸ್ಸಂಶಯವಾಗಿ ಒಪ್ಪಿಕೊಂಡಿರುವುದರಿಂದಲೂ ಶ್ರೀ ಮರುಳಸಿದ್ಧಾಂಕವೆಂಬ ಈ ಕಪಟನಾಟಕಕ್ಕೆ ಇವರೇ ಸೂತ್ರಧಾರಿಗಳೆಂಬಲ್ಲಿ ಸಂಶಯವಿಲ್ಲ.

ನಂದೀಶ ಕವಿಯು ಹೂಲಿಯವನಲ್ಲ. ಎರಡು ಜನ ಸಿದ್ಧನಂಜೇಶರಲ್ಲಿ ಯಾರಿಗೂ ಶಿಷ್ಯನಲ್ಲ. ಪೂವಲ್ಲಿ ಪಂಚವಣ್ಣಿಗೆಯ ಸಿದ್ಧನಂಜೇಶನ ಸತಿ ಚೆನ್ನವೀರಾಂಬೆ. ಈಕೆಯನ್ನು ಈಕೆಯ ಪತಿಯ ಶಿಷ್ಯ ಗುರುರಾಜ ಚಾರಿತ್ರ ಕರ್ತ ಸಿದ್ಧನಂಜೇಶನಿಗೆ ಸತಿಯಾಗಿ ಮಾಡಿರುವುದು ಶ್ರೀಗಳವರ ಐತಿಹಾಸಿಕ ಪಾಂಡಿತ್ಯದ ಅತಿರೇಕ. ಆದ್ದರಿಂದ ನಂದೀಶ ಕವಿಯು ಯಾರ ಶಿಷ್ಯನೂ

ಅಲ್ಲ. ಹೂಲಿ ಪಂಚವಣ್ಣಿಗೆ ಎಂಬ ವಿಶೇಷಣವು ಇವನಿಗೆ ಸಲ್ಲತಕ್ಕದ್ದಲ್ಲ. ಕವಿ ಚರಿತೆಕಾರರು ಇವನ ಯಾವ ಗ್ರಂಥವೂ ಉಪಲಬ್ಧವಿಲ್ಲವೆಂದು ಹೇಳಿದ್ದಾರೆ. ವಿಜಯಚರಿತದ ಕವಿತಾ ಶೈಲಿ, ಪದ್ಯ ರಚನಾಕ್ರಮ ಇವುಗಳನ್ನು ಪರಿಶೀಲಿಸಿದರೆ ರಾಘವಾಂಕ ಕಾವ್ಯದ ಪ್ರಕಟಣೆಗೆ ಪ್ರಶಸ್ತವಿತ್ತ ನಂದೀಶನ ಕಾವ್ಯವಿದಲ್ಲವೆಂಬುದು ವಿದಿತವಾಗುತ್ತದೆ.

## ಪುಟ ೧೨೮ ರಲ್ಲಿ

ಆದಿ ಮರುಳಸಿದ್ಧನು ಕೂಡಲ ಸಲಗಮಕ್ಕೆ ಹೋಗಿ ಅಲ್ಲಿಯ ಹಿರಿಯ ಮಠಕ್ಕೆ ಪಟ್ಟಾಧಿಕಾರಿಯನ್ನು ನೇಮಿಸಿದಂತೆಯೂ, ಆತನಿಗೆ ಬಸವೇಶ್ವರನ ಜನ್ಮ ಭವಿಷ್ಯವನ್ನು ಹೇಳಿದಂತೆಯೂ ಚರಿತದಲ್ಲಿ ಹೇಳಿದೆ. ಶ್ರೀಗಳು ಈ ಆಧಾರದ ಮೇಲೆ ಆ ಪಟ್ಟಾಧಿಕಾರಿಯು ಬಸವೇಶ್ವರನ ಗುರುವಾದ ಜಾತವೇದಮುನಿ ಇರಬೇಕೆಂದು ತರ್ಕಿಸಿ ಅದಕ್ಕೆ ವಿಜಯ ಚರಿತದ ಉಜ್ಜಯಿನಿ ಗುರು ಪರಂಪರೆಯಲ್ಲಿರುವ ಮುನಿ ಶಬ್ದಗಳ ಸಾಮ್ಯವನ್ನು ಉಪಯೋಗಿಸಿಕೊಳ್ಳುತ್ತಾರೆ. ಈ ತರ್ಕದ ಉದ್ದೇಶ ಇಷ್ಟೇ. ಬಸವೇಶ್ವರನು ತಮ್ಮ ಶಿಷ್ಯನೆಂದು ಇಂದು ಜಗತ್ತಿನ ಮುಂದಿಡಲು ಶ್ರೀಗಳು ಹವಣಿಸಿದ್ದಾರೆ. ಇಂದು ಬಸವಾದಿ ಶರಣರ ಸಾಹಿತ್ಯದ ಗೌರವವು ವೀರಶೈವರಲ್ಲಿ ಹೆಚ್ಚಾಗಿ ಬೆಳೆಯುತ್ತಿರುವುದು. ಈವರೆಗೆ ವಿರೋಧಿಗಳಾಗಿದ್ದು ಜನತೆಯ ಮನ್ನಣೆಯನ್ನು ಕಳೆದುಕೊಂಡು ಪಶ್ಚಾತ್ತಾಪ ಹುಟ್ಟಿರುವಂತೆ ತೋರುತ್ತದೆ. ಈಗ ನೇರವಾಗಿ ಶರಣ ಸಾಹಿತ್ಯವನ್ನು ಗೌರವಿಸಲು ದುರಭಿಮಾನವು ಇವರನ್ನು ಪ್ರತಿಬಂಧಿಸುತ್ತಿದೆ ಆದ್ದರಿಂದ ಶರಣರನ್ನು ತಮ್ಮ ಶಿಷ್ಯ ಕೋಟಿಗೆ ಸೇರಿಸಿಕೊಂಡು ಆ ಮೂಲಕ ಅವರ ಸಾಹಿತ್ಯ ಕ್ಷೇತ್ರದಲ್ಲಿ ಪ್ರವೇಶಿಸಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳಬೇಕೆಂಬ ಲವಲವಿಕೆಯು ಶ್ರೀಗಳವರ ಈ ತರ್ಕಕ್ಕೆ ಜನ್ಮವಿತ್ತಿದೆ.

ಹರಪನಹಳ್ಳಿಯಲ್ಲಿ ಜೈನ ಚತುರ್ಥರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಅವರಿಗೆ ಸೋದರರೆಂದು ನಾಮಕರಣ ಮಾಡಿದಂತೆಯೂ, ಈ ಸೋದರರ ಶಬ್ದವು ತದ್ಭವದಿಂದ ಅಥವಾ ಶಬ್ದ ವತ್ಯಾಸದಿಂದ ಸಾದರ ಆಗಿ ಮುಂದೆ ಸಾದ ಎಂದು ಬಳಕೆಗೆ ಬಂದಿರಬಹುದೆಂದು ಶ್ರೀಗಳವರ ತರ್ಕ.

ತತ್ಸಮ, ತದ್ಭವ ಅಪಭ್ರಂಶಗಳಲ್ಲಿ ಶಬ್ದಗಳು ವ್ಯತ್ಯಾಸ ಹೊಂದಿ ಭಿನ್ನರೂಪವನ್ನು ತಾಳುತ್ತವೆ. ಆದರೆ ಅರ್ಥ ಮಾತ್ರ ಒಂದೇ ಆಗಿರುತ್ತದೆ. ಈಗ ಸಾದ ಎಂಬ ಶಬ್ದದಿಂದ ವೀರಶೈವರಲ್ಲಿಯ ಒಂದು ಪಂಗಡವನ್ನು ಸಂಬೋಧಿಸುತ್ತಿರುವುದು ಸರ್ವವಿದಿತ. ಇದು ಶುದ್ಧ ಕನ್ನಡ ಶಬ್ದ. ಇದಕ್ಕೆ ತತ್ಸಮ ತದ್ಭವ ಅಪಭ್ರಂಶಗಳಲ್ಲಿಯೂ ಇದೇ ರೂಪವೇ ಇರುತ್ತದೆ. ಸಾದ ಎಂಬ ಪದದ ಬದಲು ಯಾವ ಕಾಲದಲ್ಲೂ, ಯಾರೂ, ಎಲ್ಲಿಯೂ, ಸೋದರ, ಸಾದರ ಎಂದು ಪ್ರಯೋಗಿಸಿಲ್ಲ. ಈ ಮೂರು ಪದಗಳು ಭಿನ್ನ ಭಿನ್ನ ಅರ್ಥಗಳನ್ನು ಸೂಚಿಸುತ್ತಿದೆ. ಸೋದರ ಎಂದರೆ ಒಡಹುಟ್ಟಿದವನು. ಸಾದರ ಎಂದರೆ ಆದರವುಳ್ಳವನು. ಸಾದ ಎಂದರೆ ಸಭ್ಯ ಎಂದು ಅರ್ಥಗಳಾಗುತ್ತವೆ ಈ ಪದವನ್ನು ಶ್ರೀಗಳು ಯಾವ ಪಂಗಡದವರಿಗಾಗಿ ಪ್ರಯೋಗಿಸಿದ್ದಾರೋ ಆ ಪಂಗಡದವರಿಗೇ ಇದು ಎಂದೂ ಕೇಳದ, ಕಾಣದ ಹೊಸ ಪ್ರಯೋಗವಾಗಿದೆ.

ಗಜಪತಿ ಮಹೇಂದ್ರನು ಉಜ್ಜಯಿನಿ ಮರುಳಸಿದ್ಧೇಶ್ವರ ಮಂದಿರದ ಬಳಿಯಲ್ಲಿ ಆ ಮಂದಿರವನ್ನು ಕಟ್ಟಿಸಿದನೆಂದು ವಿಜಯಚರಿತದಲ್ಲಿ ಹೇಳಿರುವ ಕಲ್ಯಾಣ ಸೋಮೇಶ್ವರನ (ಭುವನೈಕಮಲ್ಲ) ಶಿಲಾ ವಿಗ್ರಹವನ್ನು ಸ್ಥಾಪಿಸಿದನೆಂದು ಚರಿತದಲ್ಲಿ ಹೇಳದೆ ಇರುವ ವಿಷಯವನ್ನು ಶ್ರೀಗಳವರು ಹೇಳಿದ್ದಾರೆ ಮತ್ತು ಆ ಶಿಲಾ ವಿಗ್ರಹವನ್ನು ಪುಟ ೧೨೪-೧೨೫ ರ ಮಧ್ಯದಲ್ಲಿ ಕೊಟ್ಟಿರುತ್ತಾರೆ. ಈ ವಿಗ್ರಹವು ಮಂದಿರದ ಪಶ್ಚಿಮ ದ್ವಾರದ ಎಡಗಡೆಯಲ್ಲಿದೆ. ಇದು ದೊರೆ ಸೋಮೇಶ್ವರನದಲ್ಲ. ಏಕೆಂದರೆ ಈ ವಿಗ್ರಹದಲ್ಲಿ ದೊರೆಗೆ ಉಚಿತವಾದ ವೇಷಭೂಷಣಗಳಾಗಲೀ, ಭಾವಭಂಗಿಗಳಾಗಲೀ ಇಲ್ಲ. ಇದನ್ನು ಆ ಊರಿನವರು ಮತ್ತು ಮರುಳಸಿದ್ಧನ ದೇಶಾದ್ಯಂತ್ಯದಲ್ಲಿರುವ ಭಕ್ತರೂ ಸಹ ಕಗ್ಗಲ್ಲ ಗೌಡನ ವಿಗ್ರಹವೆಂದು ಈಗಲೂ ಕರೆಯುತ್ತಾರೆ. ಈವರೆಗೆ ಅಲ್ಲಿರುವ ಮಠದವರು ಜನರ ಪ್ರತೀತಿಯಲ್ಲಿರುವ ಕಗ್ಗಲ್ಲು ಗೌಡನೆಂಬುದನ್ನು ತಪ್ಪಿಸಲು ಆ ವಿಗ್ರಹದ ತಲೆಯ ಮೇಲೆ ಒಂದು ಹಲಗೆಯನ್ನು ನೇತು ಹಾಕಿ ಆ ಹಲಗೆಯ ಮೇಲೆ ಕ್ಷೇತ್ರಪಾಲಕ ಎಂದು ಬರೆದಿರುತ್ತಾರೆ. ಇದನ್ನು ನಾನೂ ಮತ್ತು ನನ್ನಂತೆಯೇ ಸಾವಿರಾರು ಜನರು ನೋಡಿರುತ್ತಾರೆ. ಮತ್ತು

ಇದೇ ಶ್ರೀ ಮರುಳಸಿದ್ಧಾಂಕದ ಪುಟ ೨೨ ರಲ್ಲಿ, " ಕ್ಷೇತ್ರಪಾಲ ಭೈರವ " (ಕ್ಷೇತ್ರನಾಥನ ಅಂದರೆ ಮರುಳಸಿದ್ಧದೇವರ ಪಶ್ಚಿಮ ದ್ವಾರ ವೀದಿಯಲ್ಲಿ) ಎಂದು ಈ ವಿಗ್ರಹವನ್ನು ಸಂಬೋಧಿಸಿ ಉಲ್ಲೇಖಿಸಿರುವುದನ್ನು ಪರಿಶೀಲಿಸಬಹುದು. ಮರುಳಸಿದ್ಧನು ಬಾಲ್ಯದಲ್ಲಿ ಈ ಗೌಡನ ಮನೆಯಲ್ಲಿದ್ದಾಗ್ಯೆ ನಡೆಸುತ್ತಿದ್ದ ಲೀಲೆಗಳಿಂದುಂಟಾಗುತ್ತಿದ್ದ ಕಲಹಗಳನ್ನು ತಪ್ಪಿಸುವ ನಿಮಿತ್ತವಾಗಿ, ಅವನನ್ನು ಮನೆಯಿಂದ ಹೊರಗೆ ಬಿಡದಂತೆ ಖಡ್ಗಧಾರಿಯಾಗಿ ಬಾಗಿಲಲ್ಲಿ ಗೌಡನು ಕಾಯುತ್ತಾ ನಿಂತಿರುತ್ತಿದ್ದನೆಂದೂ ಆ ಸ್ಮಾರಕವಾಗಿಯೇ ಈ ವಿಗ್ರಹವು ಸ್ಥಾಪಿಸಲ್ಪಟ್ಟಿದೆಯೆಂದೂ ಜನರ ಅಭಿಪ್ರಾಯ. ಈ ವಿಗ್ರಹವು ನಿಂತಿರುವ ಭಾವಭಂಗಿಯೂ ಸಹ ಈ ಪ್ರತೀತಿಯನ್ನು ಪುಷ್ಟೀಕರಿಸುತ್ತದೆ. ಈಗಲೂ ಮರುಳಸಿದ್ಧನು ಈ ಪಶ್ಚಿಮ ಬಾಗಿಲಿನ ಮೂಲಕವಾಗಿ ಹೊರಗೆ ಬರುವುದಿಲ್ಲ. ಆದ್ದರಿಂದ ಈ ವಿಗ್ರಹವು ಸೋಮೇಶ್ವರನದೂ ಅಲ್ಲ. ಗಜಪತಿ ಮಹೇಂದ್ರನಿಂದ ಸ್ಥಾಪಿತವಾದುದೂ ಅಲ್ಲ. ಸೋಮೇಶ್ವರನು ಈ ದೇವಸ್ಥಾನವನ್ನು ಕಟ್ಟಿಸಿಯೂ ಇಲ್ಲ. ಈ ಬಗ್ಗೆ ಇದೇ ಪುಸ್ತಕದ ೧೪೭ನೇ ಪುಟದಲ್ಲಿ ಶ್ರೀ ಅಮರನಾಥಶಾಸ್ತ್ರಿಗಳು ತಮ್ಮ ಲೇಖನದಲ್ಲಿ "ಕ್ರಿಸ್ತಶಕದ ೩ ನೆಯ ಶತಮಾನದಲ್ಲಿದ್ದ ಶೈವಶಿಖಾಮಣಿಗಳಾದ ಪಾಂಡ್ಯರಾಜರು ಸದ್ಧರ್ಮಪೀಠವನ್ನು ಕಟ್ಟಿಸಿ, ಒಂದು ಶಿಲಾಶಾಸನವನ್ನು ಬರೆಯಕೊಟ್ಟಿದ್ದಾರೆ " ಹೀಗೆಂದು ಉಲ್ಲೇಖಿಸಿರುತ್ತಾರೆ ಹಾಗೂ ಒಂದು ವೇಳೆ ಸೋಮೇಶ್ವರನು ಕಟ್ಟಿಸಿದ್ದೇ ಆದರೂ, ಆ ಕಾಲ ಕ್ರಿ. ಶ. ೧೧೪೦. ಈ ಗಜಪತಿ ಮಹೇಂದ್ರನು ಸಿದ್ಧಮಲ್ಲನ ಕಾಲದವನು. ಈ ಸಿದ್ಧಮಲ್ಲನು ಆದಿಮರುಳಸಿದ್ಧನಿಗೆ ೬ ನೆಯವನು. ಈ ೬ ಜನರಲ್ಲಿ ೪ ಜನರಆಳ್ವಿಕೆಯ ಕಾಲ ೨೪೫ ವರ್ಷಗಳು. ೫ ನೆಯ ಹೂಲಿ ಮರುಳಸಿದ್ಧನ ಕಾಲವನ್ನು ಹೇಳಿಲ್ಲ. ಇವನಿಗೆ ೪೦ ವರ್ಷಗಳೆಂದು ನಿಶ್ಚಯಿಸಿದರೆ ಅಲ್ಲಿಗೆ ೩೨೫ ವರ್ಷಗಳಾಗುತ್ತವೆ. ಗಜಪತಿ ಮಹೇಂದ್ರನು ತನಗೆ ಯಾವ ಕಾರಣದಿಂದಲೂ ಸಂಬಂಧವಿಲ್ಲದ ೩೨೫ ವರ್ಷಗಳ ಹಿಂದೆ ಇದ್ದ ಸೋಮೇಶ್ವರನ ವಿಗ್ರಹವನ್ನು ಸ್ಥಾಪಿಸಿದನೆಂದು ಹೇಳುವುದು ಸಯುಕ್ತಿಕವಲ್ಲ.

ಸಿದ್ಧಮಲ್ಲ ಯೋಗಿಯು ಹಂಪೆಯಲ್ಲಿದ್ದಾಗ ಅನೇಕ ವಿದ್ವಾಂಸರನ್ನು ಕೂಡಿಸಿ, ಅವರಿಂದ ಬಸವೇಶ್ವರ, ಅಲ್ಲಮಪ್ರಭು ಮುಂತಾದ ಶಿವಶರಣರ ವಚನಗಳನ್ನು ಬರೆಸಿರುವನೆಂದು ಹೇಳಿರುವುದು ಧಾರ್ಷ್ಟ್ಯವೇ ಸರಿ. ಬಸ

ವೇಶ್ವರಾದಿ ಶಿವಶರಣರು ವಚನಗಳನ್ನು ಸ್ವತಃ ರಚಿಸಲಿಲ್ಲವೆಂದು ಶ್ರೀಗಳ ಅಭಿಪ್ರಾಯವಾಗಿದೆ.

ಹರಳಯ್ಯನ ಸಮಾಧಿಯು ಉಜ್ಜಯಿನಿಯ ಮಾದಿಗರ ಕೇರಿಯಲ್ಲಿ ಮಾದಿಗ ಮರುಳಸಿದ್ಧನ ಸಮಾಧಿಯು ಸಿಂದೋಗಿಯಲ್ಲಿಯೂ ಈಗಲೂ ಇರು ವುವು. ಮತ್ತು ಆ ಜನರಿಂದ ಪೂಜಿಸಲ್ಪಡುವುವು ಎಂದು ಶ್ರೀಗಳು ಪುಟ ೧೩೮ ರಲ್ಲಿ ಹೇಳಿದ್ದಾರೆ. ಶ್ರೀಗಳೇ "ಸಿಂದೋಗಿಯಲ್ಲಿ ಮಾದಿಗರ ಕೇರಿ ಯಲ್ಲಿ ಮರುಳ ಸಿದ್ಧೇಶ್ವರ ದೇವಾಲಯವನ್ನು ಕಟ್ಟಿಸಿ, ಅಲ್ಲಿ ಒಂದು ಶಿವಲಿಂಗ ವನ್ನು ಸ್ಥಾಪಿಸಿ ಅದನ್ನು ಪೂಜಿಸುತ್ತಾ ಹೋಗೆಂದು ಅಪ್ಪಣೆ ಮಾಡಿದನು. ಆ ಮಾದಿಗ ಮರುಳಸಿದ್ಧನು ಆಚರಿಸುತ್ತಾ ಬಂದನು. (ಸಿಂದೋಗಿಯಲ್ಲಿ ಈಗಲೂ ದೇವಸ್ಥಾನವು ಮಾದಿಗರ ವಶದಲ್ಲಿದೆ.)

"ಹೀಗೆಯೇ ಇನ್ನೊಬ್ಬ ಮಾದಿಗರ ಹರಳನೆಂಬುವನು ಸಿದ್ಧಮಲ್ಲ ಯೋಗಿಗಳ ಅಪ್ಪಣೆ ಪಡೆದು, ಉಜ್ಜಯಿನಿಯ ಮಾದಿಗರ ಕೇರಿಯಲ್ಲಿ ಮರುಳ ಸಿದ್ಧನ ಹೆಸರಿನಲ್ಲಿ ಒಂದು ಗುಡಿಯನ್ನು ಕಟ್ಟಿಸಿ, ಅಲ್ಲಿ ತಾನು ಪೂಜಾಸಕ್ತ ನಾಗಿದ್ದನು, ಎಂದು ಹೇಳಿರುತ್ತಾರೆ.

ಶ್ರೀಗಳವರು ತಮ್ಮ ಲೇಖನದಲ್ಲಿ, ಸಿಂದೋಗಿಯಲ್ಲಿ ಒಂದು ದೇವಸ್ಥಾನ ಮತ್ತು ಒಂದು ಸಮಾಧಿಯೂ, ಉಜ್ಜಯಿನಿಯಲ್ಲಿ ಒಂದು ದೇವಸ್ಥಾನ ಒಂದು ಸಮಾಧಿಯೂ ಇವೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಅಲ್ಲಿ ಸಮಾಧಿ ದೇವಸ್ಥಾನವೆಂದು ಎರಡು ಇಲ್ಲ. ಉಜ್ಜಯಿನಿಯಲ್ಲಿ ಒಂದು ಇದೆ. ಸಿಂದೋಗಿಯಲ್ಲಿ ಒಂದು ಇದೆ. ಅವುಗಳ ಚಿತ್ರಗಳನ್ನು ಇದೇ ಪುಸ್ತಕದಲ್ಲಿ ಕೊಟ್ಟಿರುತ್ತಾರೆ. ಚಿತ್ರಗಳು ಎರಡು ಇವೆ. ನಾಲ್ಕು ಇಲ್ಲ. ಆ ಎರಡಕ್ಕೂ ದೇವಾಲಯ ಗುಡಿಗಳೆಂದೇ ಕರೆದಿರುತ್ತಾರೆ. ಆದರೆ ಸಿಂದೋಗಿ ಚಿತ್ರದ ಕೆಳಗೆ ಮಾದಿಗ ಮರುಳಪ್ಪನ ಗುಡಿಯೆಂದು ಬರೆದಿರುವುದು ಆಶ್ಚರ್ಯ. ಏಕೆಂದರೆ, ಶ್ರೀಗಳವರೇ ಸಿದ್ಧಮಲ್ಲರು ಮಾದಿಗ ಮರುಳಸಿದ್ಧನಿಗಾಗಿ ಮರುಳ ಸಿದ್ಧೇಶ್ವರ ದೇವಾಲಯವನ್ನು ಕಟ್ಟಿಸಿದರೆಂದು ಹೇಳಿರುವ ತಮ್ಮ ಮಾತಿಗೆ ವಿರೋಧವಾಗುತ್ತದೆ. ಒಂದು ವೇಳೆ ಇದು ಶ್ರೀಗಳವರು ಹೇಳುವಂತೆ

ಮಾದಿಗ ಮರುಳಪ್ಪನ ಗುಡಿಯೇ ಆದಲ್ಲಿ, ಶ್ರೀಗಳವರು ಹೇಳುತ್ತಿರುವಂತೆ ಮರುಳಸಿದ್ಧನ ಗುಡಿಯೂ ಸಹ ಸಿಂದೋಗಿಯಲ್ಲಿರಬೇಕಲ್ಲವೇ ? ಆದರೆ ಇರುವುದೊಂದೇ ಗುಡಿ, ಆದ್ದರಿಂದ ಇದು ಮರುಳಸಿದ್ಧೇಶ್ವರನದೇ ವಿನಾ ಮಾದಿಗ ಮರುಳಪ್ಪನದಲ್ಲ.

ಇದೇ ಪುಸ್ತಕದಲ್ಲಿ ಉಜ್ಜಯಿನೀ ಕ್ಷೇತ್ರದ ಸಂಕ್ಷೇಪ ಪರಿಚಯವೆಂಬ ಶ್ರೀ ಎಂ. ವಿ. ಮಠರ ಲೇಖನದ ಬಗ್ಗೆ ಒಂದೆರಡು ಮಾತುಗಳನ್ನು ಹೇಳ ಬೇಕಾಗಿದೆ. ಇಲ್ಲಿ ಕೊಟ್ಟಿರುವ ಕ್ಷೇತ್ರವು ಸೋಮೇಶ್ವರನ ಸಹಾಯದಿಂದ ಆದಿ ಮರುಳಸಿದ್ಧನಿಂದ ನಿರ್ಮಿಸಲ್ಪಟ್ಟಿದು. ಇಲ್ಲಿಯೇ ಆದಿ ಮರುಳಸಿದ್ಧನು ಮೂಲ ಮರುಳಾರಾಧ್ಯ ಲಿಂಗವನ್ನೂ, ಮತ್ತು ಹದಿನಾಲ್ಕು ಜನ ಗುರುಗಳ ವಿಗ್ರಹಗಳನ್ನೂ ಸ್ಥಾಪಿಸಿದನು. ಆದರೆ ಈ ಪರಿಚಯ ಪ್ರಕರಣದಲ್ಲಿ, ಆ ಮರುಳಾರಾಧ್ಯಲಿಂಗದ ಮತ್ತು ಆ ೧೪ ಜನ ಗುರುಗಳ ಪರಿಚಯವನ್ನು ಕೊಟ್ಟೇ ಇಲ್ಲ. ಮರುಳಾರಾಧ್ಯ ಲಿಂಗದ ಸ್ಥಾನದಲ್ಲಿ, ಮರುಳ ಸಿದ್ಧೇಶ್ವರ ಲಿಂಗದ ಪರಿಚಯ ಕೊಟ್ಟಿದ್ದಾರೆ. ಈ ಪರಿಚಯ ಪ್ರಕರಣದಲ್ಲಿ ಗಿಡ, ಮರ, ಕೆರೆ, ಕುಂಟೆ, ಕಟ್ಟೆ, ಭಾವಿ (ತೀರ್ಥ) ದೇವರ ಮಜ್ಜನ ಗುಂಡಿಗಳು, ಊರಲ್ಲಿ ರುವ ಚೌಡಿ ಚಾಮುಂಡಿಗಳು ಎಲ್ಲಾ ಸೇರಿವೆ. ಇವುಗಳಲ್ಲಿ ಮರುಳಸಿದ್ಧನ ಇತಿಹಾಸಕ್ಕೆ ಸಂಬಂಧವಿಲ್ಲದವೂ ಇರುತ್ತವೆ. ಮುಖ್ಯವಾಗಿ ಇರಬೇಕಾದ ೧೪ ಜನ ಗುರುಗಳ ವಿಗ್ರಹಗಳೇ ಇಲ್ಲ. ಪುಟ ೨೪–೨೫ರ ಮಧ್ಯದಲ್ಲಿ ಕೊಟ್ಟಿರುವ ಚಿತ್ರವು ತಲೆಬೋಳು ಸಿದ್ಧೇಶ್ವರ ದೇವಾಲಯವೆಂದು ಹೇಳಿರು ತ್ತಾರೆ. ಪರಿಚಯದಲ್ಲಿ ಈ ತಲೆಬೋಳು ಸಿದ್ಧೇಶ್ವರನಿಗೆ 'ಮುಂಡಿಯೋಗಿ ಸಿದ್ಧೇಶ' ಎಂದು ಹೇಳಿರುತ್ತಾರೆ. ಇವೆರಡು ಪದಗಳು ಬೇರೆ ಬೇರೆ ಅರ್ಥ ಗಳನ್ನು ಸೂಚಿಸುತ್ತವೆ. ಈ ಬದಲಾವಣೆ ಏಕೋ? ನಿಜವಾಗಿ ಇದು ತಲೆಬೋಳು ಸಿದ್ಧೇಶ್ವರನದೂ ಅಲ್ಲ. ಮುಂಡಿಯೋಗಿ ಸಿದ್ಧೇಶ್ವರನದೂ ಅಲ್ಲ. 'ತರಳಬಾಳು' ಸಿದ್ಧೇಶ್ವರನ ದೇವಾಲಯ. ಈ ಬಗ್ಗೆ ಸರ್ಕಾರಿ ಕಾಗದ ಪತ್ರಗಳಲ್ಲಿ ದಾಖಲೆಗಳಿವೆ. ಇದನ್ನು ಮರೆಮಾಚುವುದಕ್ಕಾಗಿಯೇ ಮೇಲೆ ಹೇಳಿರುವ ಹೆಸರುಗಳನ್ನು ಕಲ್ಪಿಸಿದ್ದಾರೆ. ಈ ಗುಡಿಯ ಬಾಗಿಲಿಗೆ ಒಂದು ಹಲಗೆಯನ್ನು ನೇತುಹಾಕಿ, ತಲೆಬೋಳು ಸಿದ್ಧೇಶ್ವರ ಎಂದು ಅದರಲ್ಲಿ ಬರೆದು

ತರಳಬಾಳು ಸಿದ್ಧೇಶ್ವರ ಎಂಬುದನ್ನು ಮರೆಮಾಜಲು ಯತ್ನಿಸುತ್ತಿದ್ದಾರೆ. ಆದರೆ ದೇಶಾದ್ಯಂತದಲ್ಲಿರುವ ಸಾವಿರಾರು ತರಳಬಾಳು ವಂಶದ ಮನೆತನ ಗಳನ್ನು ಯಾವ ಯತ್ನದಿಂದಲೂ ಇವರು ನಾಶ ಮಾಡಲಾರರು.

ಗಜಪತಿ ಮಹೇಂದ್ರನಿಂದ ಸ್ಥಾಪಿಸಲ್ಪಟ್ಟದ್ದೆಂದು ಹೇಳಲಾಗಿರುವ ಸೋಮೇಶ್ವರ ವಿಗ್ರಹವೆಂದು ಯಾವ ಚಿತ್ರವನ್ನು ೧೨೪–೧೨೫ ನೇ ಪುಟಗಳ ಮಧ್ಯದಲ್ಲಿ ಕೊಟ್ಟಿರುತ್ತಾರೋ ಆ ಚಿತ್ರದಲ್ಲಿರುವ ವಿಗ್ರಹವು ಈ ಪರಿಚಯ ಪ್ರಕರಣದಲ್ಲಿ ಕ್ಷೇತ್ರಪಾಲ ಭೈರವ ಎಂದು ಉಲ್ಲೇಖಿಸಲ್ಪಟ್ಟಿದೆ. ಇದು ಕ್ಷೇತ್ರನಾಥನ (ಮರುಳಸಿದ್ಧನ) ಪಶ್ಚಿಮ ದ್ವಾರವೀಥಿಯಲ್ಲಿದೆಯೆಂದು ಇಲ್ಲಿ ಹೇಳಲಾಗಿದೆ. ಇದೇ ಕಗ್ಗಲ್ಲು ಗೌಡನ ವಿಗ್ರಹವೆಂದೂ, ದೇವಸ್ಥಾನದ ಪಶ್ಚಿಮದ ಭಾಗದ ಎಡಗಡೆ ಇದೆಯೆಂದೂ ಹಿಂದೆ ವಿವರಿಸಲಾಗಿದೆ. ಇಲ್ಲಿ ಕನ್ನಡದಲ್ಲಿ ಬಳಿಕೆಯಲ್ಲಿರುವ ಹೆಸರುಗಳನ್ನೆಲ್ಲಾ ತಪ್ಪಿಸಿ ಪ್ರತಿಯೊಂದಕ್ಕೂ ಸಂಸ್ಕೃತ ಹೆಸರುಗಳನ್ನು ಕಲ್ಪಿಸಲಾಗಿದೆ. ಈ ಊರಿನಲ್ಲಿ ಮತ್ತು ದೇವ ಸ್ಥಾನದ ಆವರಣದಲ್ಲಿ ಇರುವ ಬಾವಿಗಳೂ, ದೇವರ ಮಜ್ಜನ ಗುಂಡಿಗಳೂ, ಇವೆಲ್ಲಾ ತೀರ್ಥಗಳೆಂದು ಕರೆಯಲ್ಪಟ್ಟಿವೆ. ಕರುವಿನ ಗುಡ್ಡವು ಗೋಗಿರಿ ಯಾಗಿದೆ.

ಈ ದೇವಸ್ಥಾನವು ಸರ್ಕಾರದ ಎಂಡೋಮೆಂಟ್ ಬೋರ್ಡಿನ ಅಧಿ ಕಾರಕ್ಕೆ ಸೇರಿದೆ. ಮಠದವರು ಅದರ ಧರ್ಮದರ್ಶಿಗಳು ಮಾತ್ರ. ಇದಾದರೂ ಪಂಚಾಚಾರ್ಯ ಪಕ್ಷದ ಚಳವಳಿಯು ಹುಟ್ಟಿದ ಮೇಲೆ ಕೈ॥ ಶ್ರೀ ಸಿದ್ಧಲಿಂಗ ಸ್ವಾಮಿಗಳಿಂದ ಗಳಿಸಲ್ಪಟ್ಟಿತು. ಮುಂಚೆ ಪೂಜಾರಿ ವಶ ದಲ್ಲಿದ್ದು ಅವರಿಗೂ, ಮಠದವರಿಗೂ ಕಟ್ಟಳೆಗಳು ನಡೆದು ಎಂಡೋಮೆಂಟ್ ಬೋರ್ಡಿನ ವಶದಲ್ಲಿತ್ತು. ಮಠದವರು ಈ ದೇವಸ್ಥಾನವು ತಮ್ಮದೆಂದು ಸಾಧಿಸಲು ಇಲ್ಲಿ ಅನೇಕ ಮಾರ್ಪಾಡುಗಳನ್ನು ಆಗಾಗ್ಗೆ ಮಾಡುತ್ತಲೇ ಯಿರುತ್ತಾರೆ. ಈ ಉದ್ದೇಶದಿಂದಲೇ ಕೈ॥ ಶ್ರೀ ಸಿದ್ಧಲಿಂಗ ಸ್ವಾಮಿಗಳ ಸಮಾಧಿಯನ್ನು ದೇವಸ್ಥಾನದ ಆವರಣದಲ್ಲಿ ಮಾಡಿದ್ದಾರೆ. ಅನೇಕ ಸಂದರ್ಭಗಳಲ್ಲಿ ದೇವಸ್ಥಾನದ ಗೋಪುರವನ್ನು ಮಹಾ ಸಂಸ್ಥಾನದ ಮಹಾ ದ್ವಾರವೆಂದು ಸಾಧಿಸಲು ಚಿತ್ರಗಳ ಮೂಲಕ ಪ್ರಚಾರ ಮಾಡಿಕೊಳ್ಳುತ್ತಿ

ಪ್ಪಾರೆ. ಸಿಂಹಾಸನ, ಮಠ, ದೇವಸ್ಥಾನ ಈ ಎಲ್ಲಾ ಶಬ್ದಗಳನ್ನೂ ದೇವ ಸ್ಥಾನಕ್ಕಾಗಿ ಉಪಯೋಗಿಸುತ್ತಿದ್ದಾರೆ. ಈ ಊರಲ್ಲಿ ೪ ಮಠಗಳಿದ್ದಂತೆ ಸರ್ಕಾರಿ ದಾಖಲೆಯಲ್ಲಿದೆ. ೧) ತರಳಬಾಳು ಮಠ. ೨) ಹಿರೇಮಠ. ೩) ಹೆಂಚಿನ ಮಠ. ೪) ಚೌಕೀಮಠವೆಂದು ಅವುಗಳ ಹೆಸರು ಈಗ ಸದ್ಧರ್ಮ ಸಿಂಹಾಸನ ಮಠವೆಂದು ವ್ಯವಹರಿಸಲ್ಪಡುತ್ತಿರುವುದು ಹಿರೇ ಮಠಕ್ಕೆ. ಕೈ| ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಕಾಲದಲ್ಲಿ ಹಿರೇಮಠ ಎಂದು ಇದ್ದ ಜಮಿನು ಪಟ್ಟಿಗಳು. ಸದ್ಧರ್ಮ ಸಿಂಹಾಸನ ಮಠವೆಂದು ಬದ ಲಾವಣೆ ಹೊಂದಿವೆ. ಹಿರೇಮಠದ ಇನಾಮತಿಗೆ ಸೇರಿದ ಕೆಲವು ಜಮೀನು, ಹೆಂಚಿನ ಮಠಕ್ಕೆ ಸೇರಿದ್ದಾಗಿ, ಆ ನಿಮಿತ್ತವಾಗಿ ಈಗಿನ ಸದ್ಧರ್ಮ ಸಿಂಹಾ ಸನ ಮಠದವರು (ಹಿರೇಮಠದವರು) ತಮ್ಮದೆಂದು ಕೋರ್ಟಿನಲ್ಲಿ ಈಗ ಎರಡು ಮೂರು ವರ್ಷಗಳ ಕೆಳಗೆ ವ್ಯವಹಾರ ನಡೆಸಿದರು. ತರಳಬಾಳು ಮಠದವರು ಈಗ ಅಲ್ಲಿಲ್ಲ. ಈ ಬಗ್ಗೆ ಹೆಚ್ಚಿನ ವಿವರ ಅಪ್ರಕೃತ. ಇದು ಉಜ್ಜಯಿನೀ ಕ್ಷೇತ್ರದ ನಿಜ ಪರಿಚಯ.

ಈಗ ಶ್ರೀ ಬಸವನಾಳರವರ ಮುನ್ನುಡಿಯ ಬಗ್ಗೆ ಒಂದೆರಡು ಮಾತು ಗಳನ್ನು ಹೇಳಬೇಕಾಗಿದೆ. ಈ ವಿಜಯ ಕಾವ್ಯವನ್ನು ಓದಿದ ವಾಚಕರು ಈ ಮುನ್ನುಡಿಯನ್ನು ನೋಡಿ ಆಶ್ಚರ್ಯಚಕಿತರಾಗದಿರರು. ಏಕೆಂದರೆ ಈ ಕಾವ್ಯವು ಅನೇಕ ದೃಷ್ಟಿಯಿಂದ ಅಸಂಬದ್ಧ ಕಂತೆಯಾಗಿದೆ. ಮೊದಲನೆಯದಾಗಿ ಈ ಕಾವ್ಯವನ್ನು ನಂದೀಶ ಕವಿಯು ರಚಿಸಿರುವ ಬಗ್ಗೆ ಪೂರ್ಣ ಸಂಶಯವಿದೆ. ಹನ್ನೊಂದನೆಯ ಶತಮಾನದಲ್ಲಿದ್ದ ಸಿದ್ಧ ನಂಜೇಶನ ಶಿಷ್ಯನಾದ ಈ ಕವಿಯು ೧೮ ನೇ ಶತಮಾನದವರೆಗೆ ನಡೆದ ಚರಿತ್ರೆಯನ್ನು ಹೇಗೆ ಬರೆದನೆಂಬುದು; ಚನ್ನವೀರಾಂಬೆಯ ಪತಿಯಾದ ಈ ಸಿದ್ಧ ನಂಜೇಶನು ಗುರುರಾಜ ಚಾರಿತ್ರ ವನ್ನು ಬರೆದವನಲ್ಲವೆಂಬುದು; ಎರಡನೆಯದಾಗಿ ಈ ಪೀಠದವರು ಬಸವಾದಿ ಶಿವಶರಣರ ವಚನಗಳನ್ನು ರಚಿಸಿದರೆಂಬುದು, ಈ ಮುಂತಾದ ನೂರಾರು ಅಸಂಬದ್ಧ ವಿಷಯಗಳನ್ನು ಗಮನಿಸಿಯೂ, ಇದಕ್ಕೆ ಮುನ್ನುಡಿಯನ್ನು ಬರೆ ಯುವ ನೆಪದಲ್ಲಿ ತಮ್ಮ ಪ್ರಶಸ್ತಿಯನ್ನು ಕೊಟ್ಟಿರುತ್ತಾರೆ. ಶ್ರೀ ಶೈಲದ ಶ್ರೀ ಶ್ರೀಗಳವರ ಮತ್ತು ಶ್ರೀಯುತರ ಈ ಸಮಾಗಮದಿಂದ ವೀರಶೈವ

ಸಮಾಜದಲ್ಲಿ ಹೊಸ ಯುಗವು ಆರಂಭವಾದರೆ ಯಾರೂ ಆಶ್ಚರ್ಯಪಡ ಬೇಕಾಗಿಲ್ಲ.

ಶ್ರೀಯುತರು ಹೇಳಿರುವಂತೆ ದೇವಕವಿಗಿಂತ ಮುಂಚೆ ಮರುಳಸಿದ್ಧ ನನ್ನು ಅನೇಕ ಕವಿಗಳು ತಮ್ಮ ಗ್ರಂಥಗಳಲ್ಲಿ ಸ್ಮರಿಸಿರುತ್ತಾರೆಯೇ ವಿನಾ ಯಾರೂ ಅವನ ಚರಿತ್ರೆಯನ್ನು ಬರೆದಿಲ್ಲ. ಒಂದು ವೇಳೆ ಬರೆದಿದ್ದರೂ ಆ ಗ್ರಂಥಗಳು ಉಪಲಬ್ಧವಿಲ್ಲ. ಶ್ರೀಯುತರು ಅಂತಹ ಗ್ರಂಥಗಳು ತಮ್ಮ ಗಮನ ದಲ್ಲಿದ್ದಲ್ಲಿ ಅವುಗಳ ಹೆಸರುಗಳನ್ನಾದರೂ ಈಗಲಾದರೂ ನಿರ್ದೇಶಿಸುವುದು ಉಚಿತವಾಗಿದೆ. ಶ್ರೀಶ್ರೀಗಳವರು ತಮ್ಮ ಲೇಖನದಲ್ಲಿ ಉಲ್ಲೇಖಿಸಿರುವ ನಾಗ ಭೂಷಣನ ಸಾಂಗತ್ಯದ ಸಾರಾಂಶವನ್ನು ಶ್ರೀಯುತರು ಗಮನಿಸಿದ್ದರೆ ದೇವಕವಿ ಒಬ್ಬನೇ ಮರುಳಸಿದ್ಧನು ಮಾದಿಗ ಜಾತಿಯಲ್ಲಿ ಹುಟ್ಟಿದವನೆಂದು ಹೇಳಿದ್ದಾ ನೆನ್ನುವ ಸಾಹಸವನ್ನು ಮಾಡುತ್ತಿರಲಿಲ್ಲ. ಅಲ್ಲಿ ಮಾರ, ಸೊನ್ನಲೆಯರು ಕೆರ ಹೊಲೆಯುವ ಕಾಯಕದವರಿದ್ದು ತಾವೇ ಸ್ವತಃ ಕೆರಗಳನ್ನು ತಯಾರಿಸಿ ಕೊಟ್ಟರೆಂದು ಹೇಳಲಾಗಿದೆ. ಇವರ ಉದರದಲ್ಲಿ ಜನಿಸಿಲ್ಲವಾದರೂ ಇವರ ಮಧ್ಯದಲ್ಲಿ ಜನಿಸಿದ ಮರುಳಸಿದ್ಧನು ಇವರ ಪೋಷಣೆಯಲ್ಲಿ ಮೂರು ದಿನಗಳ ವರೆಗಾದರೂ ಇದ್ದು ಮಾದಿಗತನವನ್ನು ಅಂಗೀಕರಿಸಿಯೇ ಇದ್ದಾನೆ. ಮಧ್ಯ ದಲ್ಲಿ ಜನಿಸಿದ ಕಲ್ಪನೆಯಾದರೂ ಮಾದಿಗತನವನ್ನು ನಿವಾರಿಸಲಿಕ್ಕಾಗಿಯೇ. ಹೀಗಿದ್ದೂ ಇದು ಶ್ರೀಯುತರ ಗಮನಕ್ಕೆ ಬಾರದಿರುವುದು ಆಶ್ಚರ್ಯಕರ ವಾಗಿದೆ.

ಮಹಾತ್ಮರ ಹೆಸರುಗಳನ್ನು ಬೇರೆ ಬೇರೆ ಕುಲದವರು ಇಡುವುದು ರೂಢಿಯಲ್ಲಿದೆಯಾದರೂ ಮರುಳಸಿದ್ಧನ ಹೆಸರನ್ನು ಆ ರೀತಿ ಬೇರೆ ಕುಲ ದವರು ಇಟ್ಟುಕೊಂಡಿದ್ದಾರೆಂಬ ಬಗ್ಗೆ ಯಾವ ಆಧಾರವೂ ಇಲ್ಲ. ಶ್ರೀಯು ತರು ಹೇಳುತ್ತಿರುವಂತೆ ಈಗಲೂ ಉಜ್ಜಯಿನಿಯಲ್ಲಿರುವ ಗುಡಿಯು ಮರುಳ ಸಿದ್ಧನೆಂಬ ವ್ಯಕ್ತಿಯದಾಗಿರದೆ, ಸಿದ್ಧ ಮಲ್ಲೇಶನಾದ ಭಕ್ತ ಹರಳಯ್ಯನಿಗಾಗಿ ಕಟ್ಟಿಸಿದ ಮರುಳಸಿದ್ಧೇಶ್ವರ ಲಿಂಗದ್ದಾಗಿದೆಯೆಂಬುದನ್ನು ವಿಜಯ ಕಾವ್ಯವು ಮತ್ತು ಶ್ರೀ ಶ್ರೀಗಳವರು ಸ್ಪಷ್ಟವಾಗಿ ಹೇಳಿದ್ದರೂ ಸಹ ಅದು ಶ್ರೀಯುತರ ಗಮನಕ್ಕೆ ಬಾರದಿರುವುದು ವಿಸ್ಮಯವನ್ನುಂಟು ಮಾಡುತ್ತದೆ. ಮತ್ತು ಈ

ಪುಸ್ತಕದಲ್ಲಿ ಉಪಲ್ಲಯಿಸಿ ಮಾದರಗೇರಿಯ ಮರುಳಸಿದ್ಧ ದೇವಾಲಯವೆಂಬ ಚಿತ್ರವನ್ನೂ ಸಹ ಕೊಡಲಾಗಿದೆ.

ಈ ಪುಸ್ತಕದಲ್ಲಿರುವ ಶ್ರೀ ಶ್ರೀಗಳವರ ಲೇಖನಗಳಲ್ಲಿರುವ ಮರುಳಸಿದ್ಧನ ಜೀವನ ಚರಿತ್ರೆಯನ್ನು ವರ್ಣಿಸುವ ಕಾವ್ಯವೆಂದರೆ ವಿಜಯ ಕಾವ್ಯವೊಂದೇ. ಅದಾದರೂ ಗದ್ಯರೂಪದಲ್ಲಿದೆ. ಮತ್ತಾವ ಪುರಾಣಗಳೂ ಉಲ್ಲೇಖಿಸಲ್ಪಟ್ಟಿಲ್ಲ. ಹೀಗಿದ್ದೂ ಸಹ ಬೇರೆ ಬೇರೆ ಅನೇಕ ಪುರಾಣಗಳು ದೊರೆತಿವೆಯೆಂದು ಶ್ರೀಯುತರು ಹೇಳಿರುವುದು ಅನುಚಿತವಾಗಿದೆ. ಹೀಗಿರುವಾಗ ಇವರು ಈ ಒಂದೇ ಒಂದಾದ ವಿಜಯ ಕಾವ್ಯದ ಆಧಾರದ ಮೇಲೆ ಈ ಪೀಠದಲ್ಲಿ ಅನೇಕ ಮರುಳಸಿದ್ಧರಿದ್ದರೆಂಬುದನ್ನು ಸ್ಪಷ್ಟವಾಗಿ ಒಪ್ಪಿದ್ದರೂ, ದೇವಕವಿಯ ಕಾವ್ಯ, ನಾಗಭೂಷಣನ ಸಾಂಗತ್ಯ ಇವೆರಡೂ ಮರುಳಸಿದ್ಧನು ಮಾದಿಗರವನೆಂದು ಹೇಳಿದ್ದರೂ ಒಪ್ಪದೆ ಇವನ್ನು ಅಪವಾದ ಗ್ರಂಥಗಳೆಂದೂ ಹೇಳುವ ಸಾಹಸವನ್ನು ಮಾಡಿದ್ದಾರೆ. ಇದರಿಂದ ಶ್ರೀಯುತರೇ ವಿಜಯ ಕಾವ್ಯವೊಂದನ್ನೇ ನಂಬಿ ಬಹು ಸಂಖ್ಯಾತ ಗ್ರಂಥಗಳನ್ನು ಕಡೆಗಾಣಿಸಿದಾರೆಂಬುದು ಸುಸ್ಪಷ್ಟವಾಗಿದೆ. ನಾನು ಇದನ್ನು ಬರೆಯುವುದಕ್ಕಿಂತ ಮುಂಚೆ ತಾವು ನೋಡಿರುವ ಅನೇಕ ಗ್ರಂಥಗಳ ಹೆಸರುಗಳನ್ನು ತಿಳಿಸಿರೆಂದು ಕೋರಿ ಬರೆದ ಪತ್ರಕ್ಕೆ ಶ್ರೀಯುತರು ಪ್ರತ್ಯುತ್ತರವನ್ನು ಕೊಡಲಿಲ್ಲ. ನನ್ನ ಆ ಪತ್ರವನ್ನು ಇಲ್ಲಿಯೇ ಬೇರೆ ಕಡೆ ಪ್ರಕಟಿಸಿರುತ್ತೇನೆ.

ಶ್ರೀಯುತರು ಶರಣ ಸಾಹಿತ್ಯ ಪ್ರೇಮಿಗಳಾಗಿ ಈವರೆಗೆ ನಮ್ಮ ಸಾಹಿತ್ಯಕ್ಕೆ ವಿಫಲವಾದ ಸೇವೆಯನ್ನು ಸಲ್ಲಿಸಿರುತ್ತಾರೆ. ವೀರಶೈವ ಸಾಹಿತ್ಯ ಪ್ರಪಂಚದಲ್ಲಿ ಇವರಿಗೆ ಆದರಣೀಯವಾದ ಸ್ಥಾನವಿದೆ. ಇವರು ಬಸವೇಶ್ವರಾದಿ ಶಿವಶರಣರು ಸ್ವತಃ ವಚನಗಳನ್ನು ರಚಿಸಲಿಲ್ಲವೆಂದು ಅಸಂಬದ್ಧ ಪ್ರಸಂಗವನ್ನು ಹೇಳಿರುವ ಈ ಕಾವ್ಯಕ್ಕೆ ಮನ್ನಣೆಯನ್ನು ಕೊಟ್ಟಿರುತ್ತಾರೆಂದರೆ ನಾಚಿಕೆಯಿಂದ ಶರಣ ಸಾಹಿತ್ಯ ಪ್ರೇಮಿಗಳು ತಲೆಬಾಗಿಸಬೇಕಾಗಿದೆ. ಇಂದು ವೀರಶೈವರ ಗೌರವವು ಕನ್ನಡ ನಾಡಿನಲ್ಲಿದೆಯೆಂದರೆ ಅದಕ್ಕೆ ಶರಣ ಸಾಹಿತ್ಯವೇ ಕಾರಣವೆಂಬಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಹೀಗಿದ್ದೂ ಈ ಪವಿತ್ರ ಸಾಹಿತ್ಯದ ಬಗ್ಗೆ ವೀರಶೈವ ಸಾಹಿತಿಗಳೇ ಈ ರೀತಿ ಜನತೆಯಲ್ಲಿ ವಿಪರ್ಯಾಸ

ಭಾವನೆಯು ಬೆಳೆಯಲು ಕಾರಣರಾಗುತ್ತಿರುವುದು ವೀರಶೈವರ ದುರ್ದೈವ. ನಮ್ಮಲ್ಲಿ ಬೆಳೆದು ಬಂದಿರುವ ಗುರು-ವಿರಕ್ತರವಾದಕ್ಕಿಂತ ಮುಂಚೆ ನಮ್ಮ ಸಾಹಿತ್ಯದಲ್ಲಿ ಅನೇಕ ವಿಪರ್ಯಸ್ತ ಪರಿವರ್ತನೆಗಳು ನಡೆದಿವೆಯಾದರೂ ಈ ವಾದವು ಹುಟ್ಟಿದಮೇಲೆ ವಿರಕ್ತ ಪಕ್ಷದವರು ಅಂತಹ ಕುಕಲ್ಪನೆಗಳಿಗೆ ಪ್ರಾಶಸ್ತ್ಯವನ್ನು ಕೊಡದೆ ಶರಣರ ನಿಜಸಾಹಿತ್ಯವನ್ನು ಪ್ರಚಾರಮಾಡುತ್ತಾ ಬಂದರು. ಆದರೆ ಈಚೀಚಿಗೆ ಶರಣ ಸಾಹಿತ್ಯದ ವಿರೋಧಿಗಳಾದ ಆಚಾರ್ಯ ಪಕ್ಷದವರನ್ನು ತಮ್ಮೊಳಗೆ ಕೂಡಿಸಿಕೊಳ್ಳಲು ಹುಟ್ಟಿದ ಮನೋಭಾವನೆಯು ಈ ರೀತಿಯ ಪರಿವರ್ತನೆಗೆ ಕಾರಣವಾಗಿದೆಯೆಂದು ಹೇಳಿದರೆ ತಪ್ಪಾಗಲಾರದು. ವೀರಶೈವ ಸಾಹಿತ್ಯವು ವಿಶ್ವಸಾಹಿತ್ಯವೆಂದು ಪರಮತೀಯರಿಂದಲೂ ಪ್ರಸಂಶಿಸಲ್ಪಟ್ಟಿರುವಾಗ ಇಲ್ಲಿ ವೀರಶೈವರಷ್ಟೇ ವೀರಶೈವೇತರರಿಗೂ ಅವಕಾಶವಿದ್ದೂ ಸಹ ನಮ್ಮವರೇ ಆದ ಆಚಾರ್ಯ ವರ್ಗದ ಅನುಯಾಯಿಗಳನ್ನು ಸಂತೃಪ್ತಿಪಡಿಸಲು ಈ ಯತ್ನ ಅನಾವಶ್ಯಕವಾಗಿತ್ತಷ್ಟೇ ಅಲ್ಲದೆ ಅಸಹ್ಯವೂ ಅವಮಾನಕರವೂ ಆಗಿದೆಯೆಂದು ಹೇಳಿದರೆ ಅನುಚಿತವಾಗಲಾರದು. ಶ್ರೀಯುತರ ಈ ಒಡಂಬಡಿಕೆಯಿಂದ ಉದಯಿಸುವ ನವಯುಗವನ್ನು ಸ್ವಾಗತಿಸಲು ವೀರಶೈವ ಪ್ರಪಂಚವು ಎಷ್ಟರಮಟ್ಟಿನ ಆಸಕ್ತಿಯುಳ್ಳದ್ದಾಗಿದೆಯೆಂಬುದನ್ನು ಕಾದು ನೋಡಬೇಕಾಗಿದೆಯೆಂದು ಹೇಳಿ ವಿರಮಿಸುತ್ತೇನೆ.

## ಪ್ರಶ್ನೆಗಳು.

೧. ಗದ್ದುಗೆಯೆಂದರೆ ಸಮಾಧಿಯೇ?

೨. ಸಮಾಧಿಯಾದಲ್ಲಿ ಅದು ಸಿಂದೋಗಿ ಮರುಳಪ್ಪನದೇ?

೩. ಸಿಂ। ಮರುಳಪ್ಪನದಾದರೆ ಆ ಗದ್ದುಗೆ ಸಿಂದೋಗಿಯಲ್ಲಿರದೆ ಉಜ್ಜಯನಿಯಲ್ಲಿರಲು ಕಾರಣವೇನು.

೪. ಸಿಂ। ಮರುಳಪ್ಪನ ಸಮಾಧಿಯು ಸಿಂದೋಗಿಯಲ್ಲಿದೆಯೆಂದು ಶ್ರೀ ಶಿವರೂ, ಅವನು ಸಿಂದೋಗಿಯಲ್ಲಿ ಕಾಲವಾದನೆಂದು ವಿಜಯ ಕಾವ್ಯವೂ ಹೇಳುತ್ತಿರುವುದಕ್ಕೆ ವಿರೋಧವಾಗುವುದಿಲ್ಲವೇ?

೫. ಸಿಂಧುಯಲ್ಲಿ ಮರುಳಪ್ಪನ ದೇವಸ್ಥಾನವನ್ನು ಸಂಸ್ಥೆಯವರು ಕಂಡುಕೊಂಡರೆಂದರೆ ಅಲ್ಲಿ ಅದನ್ನು ಕಟ್ಟಿಸಿದವರಾರು?

೬. ಯಾರೇ ಕಟ್ಟಿಸಿರಲಿ, ಅದು ಸಿಂದೋಗಿ ಮರುಳಪ್ಪನದೇ ಸರಿ ಎಂದರೆ ಸಿದ್ಧಮಲ್ಲೇಶನು ಅಲ್ಲಿ ಮರುಳಪ್ಪನಿಗಾಗಿ ಕಟ್ಟಿಸಿದ ನೆಂದು ವಿಜಯ ಕಾವ್ಯ ಹೇಳುತ್ತಿರುವ ಮರುಳಸಿದ್ಧೇಶ್ವರ ದೇವಾಲಯವೆಲ್ಲಿದೆ?

೭. ಸಮಾಧಿ ಅಥವಾ ದೇವಾಲಯವೆಂಬಲ್ಲಿ ಸಮಾಧಿ ಮತ್ತು ದೇವಾಲಯ ಎರಡು ಪದಾರ್ಥಗಳೇ? ಅಥವಾ ಒಂದೆಯೋ?

೮. ಎರಡಾದಲ್ಲಿ ಅಥವಾ ಪದವು ಎರಡರ ಅಭಿನ್ನತೆಯನ್ನು ಸೂಚಿ ಸುವುದಿಲ್ಲವೇ?

೯. ಇದರಿಂದ ಸಮಾಧಿ ದೇವಾಲಯುಗಳೆಂದು ಎರಡಿಲ್ಲ ಒಂದೇ ಎಂದು ಅರ್ಥವಾಗುವುದಿಲ್ಲವೆ?

೧೦. ಉಜ್ಜನಿಯಲ್ಲಿರುವುದು ಸಿಂದೋಗಿ ಮರುಳಪ್ಪನ ಗದ್ದುಗೆ ಯಾದರೆ ಉಜ್ಜಯಿನಿಯಲ್ಲಿ ಹರಳಯ್ಯನ ಸಮಾಧಿ ಇದೆ ಎಂದು ಹೇಳುವ ಶ್ರೀಶಿವರ ವಾಕ್ಯವು ಸುಳ್ಳಾಗುವುದಿಲ್ಲವೆ?

೧೧. ಉಜ್ಜಯಿನಿಯಲ್ಲಿರುವುದು ಹರಳಯ್ಯನ ಅಥವಾ ಸಿಂ| ಮರು ಳಪ್ಪನ ಸಮಾಧಿಯಾದರೆ ಅಲ್ಲಿ ಹರಳಯ್ಯನಿಗಾಗಿ ಸಿದ್ಧಮಲ್ಲೇ ಶನು ಕಟ್ಟಿಸಿದ ಮರುಳಸಿದ್ಧೇಶ್ವರ ದೇವಸ್ಥಾನವೆಲ್ಲಿದೆ?

೧೨. ಈ ಅಂಕದಲ್ಲಿ ಕೊಟ್ಟಿರುವ ಚಿತ್ರಕ್ಕೆ ಉಜ್ಜಯಿನಿಯ ಮಾದಿ ಗರ ಕೇರಿಯ ಮರುಳಸಿದ್ಧೇಶ್ವರ ದೇವಸ್ಥಾನವೆಂದು ಹೇಳಲಾ ಗಿದೆ. ಈ ದೇವಾಲಯದಲ್ಲಿ ಗದ್ದುಗೆಯುದೆಯೋ? ಶಿವಲಿಂಗ ವಿದೆಯೋ?

೧೩. ಗದ್ದುಗೆ ಇರುವುದಾದರೆ ಅಲ್ಲಿ ಸಿದ್ಧಮಲ್ಲೇಶನು ಸ್ಥಾಪಿಸಿದ ಶಿವಲಿಂಗವೇನಾಯಿತು?

೧೪. ಸಿಂದೋಗಿಯಲ್ಲಾಗಲಿ, ಉಜ್ಜಯಿನಿಯಲ್ಲಾಗಲಿ ವಿಜಯ ಕಾವ್ಯ ಹೇಳುವಂತೆ ಒಂದೊಂದು ಸಮಾಧಿ. ಒಂದೊಂದು ದೇವಸ್ಥಾನ ಈ ರೀತಿ ಎರಡೆರಡು ಇರಬೇಕಲ್ಲವೇ? ಇವೆಯೇ?

೧೫. ಇದ್ದರೆ ಎರಡೆರಡರ ಚಿತ್ರಗಳನ್ನೇಕೆ ಕೊಟ್ಟಿಲ್ಲ?

೧೬. ಸಿಂ| ಮರುಳಪ್ಪನಾಗಲಿ, ಹರಳಯ್ಯನಾಗಲಿ ಸಿದ್ಧಮಲ್ಲೇಶನ ಶಿಷ್ಯರೇ ವಿನಾ ಮರುಳಸಿದ್ಧನ ಶಿಷ್ಯರಲ್ಲ. ಅವರು ಬಯಸಿದ್ದು ಸಿದ್ಧಮಲ್ಲನ ಪಾದ ಪೂಜೆಯನ್ನೆ ವಿನಾ ಮರುಳಸಿದ್ಧನ ಲಿಂಗ ಪೂಜೆಯನ್ನಲ್ಲ. ಹೀಗಿರುವಾಗ ತಮಗೆ ಗುರುವಲ್ಲದ ಮರುಳಸಿದ್ಧನ ಲಿಂಗವನ್ನು ಪೂಜಿಸಲು ಗುಡಿಗಳನ್ನು ಕಟ್ಟಿಸಿದ್ದು ಸಮಂಜಸವೇ?

೧೭. ಇಲ್ಲಿ ಮರುಳಸಿದ್ಧನೆಂದರೆ ಆದಿ ಮರುಳಸಿದ್ಧನೇ? ಹೂಲಿ ಮರುಳಸಿದ್ಧನೇ? ಇದನ್ನು ನಿರ್ಧರಿಸಲು ಆಧಾರವೇನಾದರೂ ಇದೆಯೇ?

೧೮. ಉಜ್ಜಯಿನಿಯಲ್ಲಿರುವುದು ಹರಳಯ್ಯನ ಸಮಾಧಿಯೇ? ಅಥವಾ ಅವನಿಗಾಗಿ ಸ್ಥಾಪಿಸಿದ ಮರುಳಸಿದ್ಧೇಶ್ವರ ಲಿಂಗದ ಗುಡಿಯೇ?

೧೯. ಸಮಾಧಿಯಾದರೆ ಮರುಳಸಿದ್ಧೇಶ್ವರನ ಗುಡಿಯಿಲ್ಲವೇ?

೨೦. ಗುಡಿಯಿಲ್ಲವಾದರೆ ಚಿತ್ರದಲ್ಲಿ ಮರುಳಸಿದ್ಧೇಶ್ವರ ದೇವಾಲಯವೆಂದು ಬರೆದಿರುವುದು ಯುಕ್ತವೇ?

೨೧. ಮುಟ್ಟಿಸಿಕೊಳ್ಳಲು ಹಿಂಜರಿದ ಸಿದ್ಧಮಲ್ಲೇಶನು ಶಿವಲಿಂಗವನ್ನು ಮಾದಿಗರ ಕೇರಿಯಲ್ಲಿ ಸ್ಥಾಪಿಸಿದ್ದು ಉಚಿತವೇ?

೨೨. ಚಿತ್ರದಲ್ಲಿ ತೋರಿಸಿರುವ ಸಿ| ಮರುಳಪ್ಪನ ಗುಡಿಯಲ್ಲಿ ಲಿಂಗವಿದೆಯೇ? ಗದ್ದುಗೆ ಇದೆಯೇ?

೨೩. ಲಿಂಗವಾದರೆ ಆತನ ಸಮಾಧಿ ಎಲ್ಲಿದೆ?

೨೪. ಉಜ್ಜಯಿನಿಯಲ್ಲಿ ಲಿಂಗದ ಬದಲು ಗದ್ದುಗೆ ಏಕೆ ಆಯಿತು?

೨೫. ಸಂಪಾದಕರು ಸಿಂದೋಗಿಯಲ್ಲಿ ಶೋಧಿಸಿದ್ದು ಮಾದಿಗ ಮರುಳಪ್ಪನ ಗುಡಿಯೆಂದು ಪುಟ ೧೪ ರಲ್ಲಿ ಹೇಳಿದ್ದಾರೆ. ಅವರೇ ಪುಟ ೧೮ರಲ್ಲಿ ಸಿದ್ಧಮಲ್ಲೇಶನು ಸಿಂದೋಗಿ ಮಾದಿಗ ಮರುಳಪ್ಪನಿಗಾಗಿ ಕಟ್ಟಿಸಿದ ಮರುಳಸಿದ್ಧೇಶ್ವರ ದೇವಾಲಯವೆನ್ನುತ್ತಾರೆ. ಇದರಲ್ಲಿ ನಿಜ ಯಾವುದು?

೨೬. ಮರುಳಸಿದ್ಧೇಶ್ವರ ಗುಡಿಯೆನ್ನುವುದು ಅವರ ಸ್ವಂತ ಮಾತಾಗದೆ ಕಾವ್ಯದ ಅಭಿಪ್ರಾಯವಾದರೂ ಅವರ ಅಭಿಪ್ರಾಯದಲ್ಲಿ ಗುಡಿಯು ದೆಯೇ ? ಇಲ್ಲವೇ ?

೨೭. ಸಂಪಾದಕೀಯದಲ್ಲಿ ವಿಜಯಕಾವ್ಯದ ಎಲ್ಲಾ ವಿಷಯಗಳನ್ನೂ ಬರೆದು ಹರಳಯ್ಯನ ವಿಚಾರದಲ್ಲಿ ಏನೂ ಬರೆಯದಿರುವುದಕ್ಕೆ ಕಾರಣವೇನು ?

೨೮. ಉಜ್ಜಯಿನಿಯಲ್ಲಿರುವುದು ಸಿಂ| ಮರುಳಪ್ಪನಸಮಾಧಿಯಾದರೆ ಸಂಪಾದಕರು ಅದನ್ನು ಚಿತ್ರದಲ್ಲಿ ಮರುಳ ಸಿದ್ಧೇಶ್ವರ ದೇವಾಲಯವೆಂದೇಕೆ ಕರೆದರು.

೨೯. ಉಜ್ಜಯಿನಿಯಲ್ಲಿರುವುದು ಸಿಂ| ಮರುಳಪ್ಪನ ಸಮಾಧಿಯಾದರೆ ಹರಳಯ್ಯನ ಸಮಾಧಿಯೆಲ್ಲಿದೆ ?

೩೦. ಉಜ್ಜಯಿನಿಯಲ್ಲಿರುವುದು ಮರುಳಪ್ಪನ ಸಮಾಧಿಯಾದರೆ ಹರಳಯ್ಯನ ಸಮಾಧಿ ಇದೆ ಎಂದು ಹೇಳುವ ಶ್ರೀ ಶಿವರ ವಾಕ್ಯಕ್ಕೆ ವಿರೋಧವಾಗುವುದಿಲ್ಲವೇ ?

೩೧. ಕಾಶಿಯ ಶ್ರೀ ವೀರಭದ್ರ ಸ್ವಾಮಿಗಳು ೧೮-೩-೪೭ ರಲ್ಲಿ ಬರೆದಿರುವ ತಮ್ಮ ೩೩೧ ನೇ ಪತ್ರದಲ್ಲಿ ಶ್ರೀದಾರುಕ ಮರುಳಸಿದ್ಧ ಎಂದು ಉಲ್ಲೇಖಿಸಿದ್ದಾರೆ. ವಿಜಯಕಾವ್ಯ ಹೇಳುವಂತೆ ದಾರುಕನ ಅವತಾರ ಮರುಳಾರಾಧ್ಯನೇ ವಿನಾ ೧೬ ನೆಯ ಮರುಳಸಿದ್ಧನಲ್ಲ. ಅವರು ಆ ರೀತಿ ಬರೆಯುವಾಗ ಅವರ ಕೈಯಲ್ಲಿ ವಿಜಯಕಾವ್ಯವೂ, ಮರುಳಸಿದ್ಧಾಂಕದ ಲೇಖಗಳೂ, ಇದ್ದವೆಂದು ಪತ್ರದಲ್ಲಿ ನಮೂದಿಸಿದೆ. ಹೀಗಿದ್ದು ದಾರುಕನೊಡನೆ ಮರುಳಸಿದ್ಧನನ್ನು ಅಭಿನ್ನನಾಗಿ ಹೇಳಿರುವುದರಿಂದ ಆ ಶ್ರೀಗಳವರು ಕಾವ್ಯ ಮತ್ತು ಲೇಖಗಳನ್ನು ಓದಿದ ಮೇಲೂ ಮರುಳಸಿದ್ಧ ಮರುಳಾರಾಧ್ಯ ಈ ಪದಗಳು ಒಂದೇ ವ್ಯಕ್ತಿಯ ಬೋಧಕಗಳೆಂದು ಭಾವಿಸಿದ್ದರೆಂದು ಭಾಸವಾಗುವುದಿಲ್ಲವೇ ?

೩೨. ಚಿತ್ರಸೂಚಿಯಲ್ಲಿ ಉಜ್ಜಯಿನಿಯಲ್ಲಿ ಮಾದಿಗ ಮರುಳಪ್ಪನ ಸಮಾಧಿ ೧೩೭ ನೆಯ ಪುಟದಲ್ಲಿದೆಯೆಂದು ಹೇಳಲಾಗಿದೆ. ಆದರೆ ಈ ಪುಸ್ತಕದ ಯಾವ ಪುಟದಲ್ಲೂ ಆ ಚಿತ್ರವಿಲ್ಲ. ಈ ಪುಸ್ತಕದ ಕೊನೆಯಲ್ಲಿ ಉಜ್ಜ

ಯಿನಿ ಮಾದರಗೇರಿಯಲ್ಲಿ ಮರುಳಸಿದ್ಧ ದೇವಾಲಯವೆಂಬ ಚಿತ್ರವಿದೆ. ದೇವಾಲಯವೂ, ಸಮಾಧಿಯೂ ಭಿನ್ನ ಭಿನ್ನವಲ್ಲವೇ ? ಮರುಳಪ್ಪನ ಸಮಾಧಿಯ ಚಿತ್ರವನ್ನು ಏಕೆ ಕೊಟ್ಟಿಲ್ಲ ? ಕೊಡದೆ ಚಿತ್ರಸೂಚಿಯಲ್ಲಿ ಸೂಚಿಸಿರುವ ಉದ್ದೇಶವೇನು ? ದೇವಾಲಯವೇ ಸಮಾಧಿ ಎಂದರೆ ಅಲ್ಲಿ ಮರುಳಪ್ಪನ ಸಮಾಧಿ ಇರಲು ಕಾರಣವೇನು ? ಶ್ರೀ ಶಿವರು ಹೇಳಿರುವಂತೆ ಅಲ್ಲಿರಬೇಕಾದುದು ಹರಳಯ್ಯನ ಸಮಾಧಿಯಲ್ಲವೇ?

೩೩. ಇದೇ ಚಿತ್ರ ಸೂಚಿಯಲ್ಲಿ ಸಿಂದೋಗಿ ಮಾದಿಗ ಮರುಳಪ್ಪನ ಗುಡಿ ಯೆಂದು ೧೪೦ ನೇ ಪುಟದಲ್ಲಿ ಒಂದು ಚಿತ್ರವನ್ನು ಕೊಟ್ಟಿದೆ. ಇದು ಮರುಳಪ್ಪನ ಗುಡಿಯಾದರೆ ಮರುಳಪ್ಪನ ಸಮಾಧಿ ಮತ್ತು ಅಲ್ಲಿ ಸ್ಥಾಪಿಸಿದ ಮರುಳ ಸಿದ್ಧೇಶ್ವರ ಲಿಂಗದ ಗುಡಿ ಎಲ್ಲಿವೆ ?

೩೪. ಪುಟ ೪ ರಲ್ಲಿ ರೇಣುಕಾಚಾರ್ಯ, ರೇವಣಸಿದ್ಧ, ರೇವಣಾರಾಧ್ಯ ಇವರು ಬೇರೆ ಬೇರೆ ವ್ಯಕ್ತಿಗಳೆಂದು ಹೇಳಲಾಗಿದೆ. ಇದಕ್ಕೆ ಆಧಾರ ವೇನು ? ಈ ಮೂವರೂ ಕಲಿಯುಗದವರೆ ? ಈ ಮೂವರನ್ನು ಒಟ್ಟಿನಲ್ಲಿ ಅಥವಾ ಬೇರೆ ಬೇರೆಯಾಗಿ ವರ್ಣಿಸಿರುವ ಗ್ರಂಥಗಳ ಆಧಾರವೇನಾದರೂ ಇದೆಯೇ ?

೩೫. ಪುಟ ೧೧ ರಲ್ಲಿ ಶ್ರೀಶಿವರು ಮೂಲ ಮರುಳಸಿದ್ಧರ ಬಗೆಗೆ ದೇವ ಕವಿಯ ಮತ್ತು ಇತರರ ತಪ್ಪು ಕಲ್ಪನೆಗಳು ಎಂಬ ಲೇಖನವನ್ನು ವೀರಶೈವ ಧರ್ಮಾಲಯ ಸಂಸ್ಥೆಯು ಸ್ಥಾಪಿತವಾಗುವುದಕ್ಕಿಂತ ಮುಂಚೆಯೇ ಬರೆಯಲ್ಪಟ್ಟಿತೆಂದು ಹೇಳಲಾಗಿದೆ. ಈ ಸಂಸ್ಥೆಯು ಹುಟ್ಟಿದ ಮೇಲೆಯೇ ಸಂಶೋಧನೆಗಳು ನಡೆದವೆಂದೂ ಆ ಸಂದರ್ಭದಲ್ಲಿ ವಿಜಯಕಾವ್ಯ ದೊರೆಯಿತೆಂದೂ ಸಂಪಾದಕರ ಅಭಿಪ್ರಾಯ. ಆದರೆ ಶ್ರೀ ಶ್ರೀಗಳವರು ಮುಂಚಿತವಾಗಿ ಬರೆದ ತಮ್ಮ ಈ ಲೇಖನದಲ್ಲಿ ವಿಜಯಕಾವ್ಯದ ಪ್ರಮಾಣಗಳನ್ನು ಕೊಡಲು ಅವಕಾಶ ಹೇಗೆ ಒದಗಿತು ! ಆ ಲೇಖನವನ್ನು ಕಾವ್ಯ ದೊರೆತ ಮೇಲೆ ತಿದ್ದಿದೆಯೆಂದು ಹೇಳುವುದಾದರೆ ಈ ಎಲ್ಲಾ ಲೇಖನಗಳ ತಿದ್ದುಪಡೆ, ಸಂಶೋಧನಗ ಇವೆಲ್ಲಾ ಪೂರ್ಣವಾದ ಮೇಲೆಯೇ ಬರೆಯಲ್ಪಡುವ ಸಂಪಾದಕೀಯದ ವಾಕ್ಯಗಳನ್ನು ಅಸತ್ಯವೆಂದು ಹೇಳಲು ಅವಕಾಶ ಉಂಟೇ?

ಶ್ರೀ ಶಿವರ ಲೇಖನವು ೨೦—೨—೪೬ ಕ್ಕಿಂತ ಮುಂಚೆಯೇ ಬರೆಯಲ್ಪಟ್ಟಿದೆ. ವಿಜಯ ಕಾವ್ಯವು ೧೮—೮—೪೬ ರ ಸುಮಾರಿನಲ್ಲಿ ದೊರೆತಿದೆ. ಆರು ತಿಂಗಳ ಮುಂಚಿನ ಲೇಖನದಲ್ಲಿ ವಿಜಯಕಾವ್ಯದ ವಿಷಯಗಳು ಬರಲು ಕಾರಣವೇನು?

೩೬. ಪುಟ ೧೨ ರಲ್ಲಿ ಉಜ್ಜಯಿನಿ ಮೂಲ ಮಠಾಚಾರ್ಯ ಮರುಳಾರಾಧ್ಯನೇ? ೧೬ ನೆಯ ಮರುಳಸಿದ್ಧನೇ? ಮರುಳಾರಾಧ್ಯನಾಗಿದ್ದಲ್ಲಿ ಇಲ್ಲಿ ಮರುಳಸಿದ್ಧನೆಂದು ಉಲ್ಲೇಖಿಸಿರುವುದು ಸಮಂಜಸವೇ?

೩೭. ಪುಟ ೧೩—೧೪ ರಲ್ಲಿ ಕೊಪ್ಪಳದ ಗವೀಮಠದ ಶ್ರೀಗಳಿಂದ ಸಂಗ್ರಹಿಸಿದ ಐತಿಹಾಸಿಕ ವಿಷಯಗಳೇನು? ಉಜ್ಜಯಿನಿಯಲ್ಲಾಗಲಿ ಸಿಂದೋಗಿಯಲ್ಲಾಗಲಿ, ಮಾದಿಗ ಮರುಳಪ್ಪನ ಬಗ್ಗೆ ಲಿಪಿ ಸಾಹಿತ್ಯ ದೊರೆಯಲಿಲ್ಲವಾದರೆ ಗವೀಮಠದವರಿಂದ ದೊರೆತ ಐತಿಹಾಸಿಕ ವಿಷಯದ ಸ್ವರೂಪವೇನು? ಲಿಪಿ ಸಾಹಿತ್ಯವೆಂದರೆ ತಾಮ್ರ ಲಿಪಿ ಶಿಲಾ ಲಿಪಿ, ಪತ್ರಲಿಪಿ ಮೂರು ಅಲ್ಲವೇ?

೩೮. ಶ್ರೀ ಅ. ನ. ಕೃ. ರವರು ಮಾದಿಗನೆಂದು ಹೇಳಿರುವುದು ಮರುಳಸಿದ್ಧನನ್ನು, ಮರುಳಾರಾಧ್ಯನನ್ನಲ್ಲ. ಅವರಿಂದ ಕಲಂಕ ಬಂದದ್ದು ಮರುಳಸಿದ್ಧನಿಗೆ. ಹೂಲಿ ನೀಲಕಂಠಶಿವಾಚಾರ್ಯರು ಕಲಂಕದಿಂದ ಅಪ್ರಸನ್ನನಾದ ಮರುಳಸಿದ್ಧನ ಪ್ರೀತ್ಯರ್ಥ ಏಕಭೋಜನ ವ್ರತವನ್ನು ಮಾಡುವುದು ಉಚಿತವಾಗಿರಲಿಲ್ಲವೆ? ಇದನ್ನು ಬಿಟ್ಟು ಮರುಳಾರಾಧ್ಯರ ಪ್ರೀತ್ಯರ್ಥ ವ್ರತವನ್ನು ಕೈಕೊಂಡಿದ್ದಕ್ಕೆ ಕಾರಣವೇನು?

೩೯ ಪುಟ ೧೫ ರಲ್ಲಿ ಕಲಿಯುಗದ ಆದಿಯಿಂದ ೨೫ ನೆಯ ಶತಮಾನದ ವರೆಗೆ ೨೫ ಜನ ಗುರುಗಳ ಪಟ್ಟಾವಲಿಯು ದೊರೆತಿದೆಯೆಂದು ಹೇಳಿದೆ. ಹೂಲಿಯ ಮರುಳಸಿದ್ಧನು ಕ್ರಿ. ಶ. ೧೪೦೬ ರಲ್ಲಿ ಪ್ರೌಢ ದೇವರಾಯನಲ್ಲಿದ್ದನು. ಅಲ್ಲಿಗೆ ಆಗ ಅವನಿಗೆ ೪೦ ವರುಷಗಳಾಗಿರಬೇಕು. ನಂತರ ೪೦ ವರುಷಗಳು ಕಳೆದ ಮೇಲೆ ಅವರು ಕಾಲವಾಗಿರಬೇಕು. ಅಂದರೆ ಕ್ರಿ. ಶ. ೧೪೪೬ ರಲ್ಲಿ ಅವನ ಐಕ್ಯ. ಅನಂತರ ಸಿದ್ಧನಾಥ, ಸಿದ್ಧೇಶ್ವರ ಇವರು ೧೬೦ ವರ್ಷ ಆಳುತ್ತಾರೆ. ಈ ೧೬೦ ವರ್ಷಗಳು ಸೇರಿದರೆ ಕ್ರಿ. ಶ. ೧೬೦೬ ಆಗುತ್ತದೆ. ಅಂದರೆ ೧೭ ನೇ

ಶತಮಾನದ ಆದಿಭಾಗ ಬರುತ್ತದೆ. ಹೀಗಿರುವಾಗ ಇಲ್ಲಿ ೧೫ ನೆಯ ಶತಮಾನದ ವರೆಗೆ ಎಂದು ಹೇಳಿರುವುದು ಸಮಂಜಸವೋ?

೪೦. ವಿಜಯಕಾವ್ಯವನ್ನು ಪ್ರಕಟಿಸಿದ ನಂತರವೇ ಪಂಡಿತರಿಂದ ಲೇಖನಗಳು ಬರೆಸಲ್ಪಡುವುದುತ್ತಮವೆಂದು ಹೂಲಿ ನೀಲಕಂಠ ಶಿವಾಚಾರ್ಯರು ಹೇಳಿದ್ದಾರೆ. ಇಲ್ಲದಿದ್ದರೆ ಲೇಖಗಳು ಒಂದಕ್ಕೊಂದು ವಿರೋಧವಾಗುತ್ತವೆಂದು ಅವರ ಅಭಿಪ್ರಾಯ. ಈ ಕಾರಣದಿಂದಲೇ ಅವರು ಲೇಖನವನ್ನು ಬರೆಯುವುದನ್ನು ಬಿಟ್ಟಿದ್ದಾಗಿ ಹೇಳಿದ್ದಾರೆ. ಈ ಪ್ರಸಂಗ ಇತರೆಯವರಿಗೂ ಆಗಬಾರದೆಂದು ಅವರ ಆಶಯ. ಹೀಗಿರುವಾಗ ಈ ಅಂಕದಲ್ಲಿ ವಿಜಯಕಾವ್ಯಕ್ಕೆ ವಿರುದ್ಧವಾದ ಲೇಖಗಳೇ ಹೆಚ್ಚಾಗಿರುವುದರಿಂದ ಅಸಮಂಜಸವಾಗಿ ತೋರುತ್ತಿಲ್ಲವೇ? ಅವರ ಈ ಸಲಹೆಯನ್ನು ಏಕೆ ಅಂಗೀಕರಿಸಲಿಲ್ಲ? ಲೇಖಕರಾದರೂ ಹೆಚ್ಚಾಗಿ ಇಲ್ಲ. ಇರುವ ನಾಲ್ಕಾರು ಜನಕ್ಕಾದರೂ ಮೂಲಪ್ರತಿಯನ್ನೇ ತೋರಿಸಬಹುದಾಗಿತ್ತು. ಇದರಿಂದಲೇ ಲೇಖಕರ ಅಭಿಪ್ರಾಯಕ್ಕೆ ಈ ಅಂಕದಲ್ಲಿ ಮನ್ನಣೆ ಸಿಗದಂತಾಗಲಿಲ್ಲವೇ!

೪೧. ಪುಟ ೧೬ ರಲ್ಲಿ ಮರುಳಾರಾಧ್ಯರು ದ್ವಾಪರಯುಗದವರೇ? ಕಲಿಯುಗದವರೇ? ದ್ವಾಪರಯುಗದವರಾದರೆ ಕಲಿಯುಗದಲ್ಲವತರಿಸಿದರೆಂದು ವಿಜಯಕಾವ್ಯ ಹೇಳುವುದು ಯುಕ್ತವೇ? ಕಲಿಯುಗದವರಾದರೆ ದ್ವಾಪರಯುಗದಲ್ಲಿ ಪ್ರಕಟವಾದರೆಂದು ಈ ಪುಟದಲ್ಲಿ ಹೇಳುವುದು ಯುಕ್ತವೇ?

೪೨. ರಾಷ್ಟ್ರಕೂಟರ ಕಾಲವಾವುದು? ನೀಲಕಂಠ ಶಿವಾಚಾರ್ಯರು ಈ ಪೀಠದ ೫ ನೆಯ ಶಾಂತಮುನಿಗಳ ಕಾಲದಲ್ಲಿದ್ದರು. ಶಾಂತಮುನಿಗಳ ಕಾಲವು ಮರುಳಾರಾಧ್ಯರ ಯೋಗಸಿದ್ಧಿ, ಅಂದಾಜು ಜೀವಿತ ಕಾಲ, ಅಲ್ಲಿಂದ ಮುಂದೆ ಮೂವರ ಜೀವಿತ ಕಾಲ, ೬೦೬+೬೦೦+೬೨೦=೧೮೨೬ ವರ್ಷಗಳು ಆಗುತ್ತವೆ. ಅಂದರೆ ಕಲಿಯುಗದ ಪ್ರಮಾಣ ೧೮೨೬ ರಲ್ಲಿ (ಕ್ರಿ. ಪೂ. ೧೨೭೫ ರಲ್ಲಿ) ಶಾಂತಮುನಿ ಇದ್ದಂತಾಯಿತು. ಇವರಿಗೂ ಶ್ರೀ ಶಿವರು ಹೇಳಿರುವಂತೆ ಕ್ರಿ. ಪೂ. ೪೦೦ರಲ್ಲಿದ್ದ ಆದಿ ಶಂಕರಾಚಾರ್ಯರಿಗೂ ಸಮಕಾಲೀನತ್ವ ಉಂಟೇ? ಅಥವಾ

ಮರುಳಾರಾಧ್ಯರಿಗೆ ೧೨೦೬ ಕ್ಕಿಂತಲೂ ಹೆಚ್ಚಿಗೆಜೀವಿತ ಕಾಲವನ್ನು ಕಟ್ಟಲು ವಿಜಯ ಕಾವ್ಯದಲ್ಲಿ ಆಧಾರವಿದೆಯೇ ?

೪೩. ಗೋವಿಂದ ಪಾದರಿಗೆ ನೀಲಕಂಠರು ಬೋಧಿಸಿದ್ದು ಅದ್ವೈತವನ್ನೇ ? ಅಥವಾ ಶಕ್ತಿ ವಿಶಿಷ್ಟಾದ್ವೈತವನ್ನೇ ?

೪೪. ಭವಭೂತಿಯು ಭೋಜರಾಜನ ಆಸ್ಥಾನ ಪಂಡಿತನಾಗಿದ್ದುದು ನಿರ್ವಿವಾದ ವಿಷಯ. ಆದರೆ ಅವನು ಉಜ್ಜಯಿನೀ ಪೀಠದ ಜಗದ್ಗುರುವಾಗಿದ್ದನೆಂಬುದು ಅಶ್ರುತಪೂರ್ವ. ಅದಕ್ಕೆ ವಿಜಯ ಕಾವ್ಯವಲ್ಲದೆ ಬೇರೆ ಗ್ರಂಥಗಳ ಅಥವಾ ಮತ್ತಾವುದೇ ವಿಧವಾದ ಆಧಾರ ವಿದೆಯೇ? ಅವನು ಆಸ್ಥಾನ ಪಂಡಿತನಾಗಿದ್ದನೆಂಬುದೇ ಜಗದ್ಗುರುವಲ್ಲವೆಂಬುದನ್ನು ಪುಷ್ಟೀಕರಿಸುತ್ತಿಲ್ಲವೇ ? ಈವರೆಗೂ ಜಗದ್ಗುರುಗಳಾದವರು ಆಸ್ಥಾನ ಪಂಡಿತರಾಗಿದ್ದುದು ಅಶ್ರುತಪೂರ್ವ, ಅದೃಷ್ಟಪೂರ್ವ.

೪೫. ಪಂಚ ಪೀಠಗಳ ಯಾವ ಪರಂಪರೆಯಲ್ಲೂ ಇಲ್ಲದ ಮುನಿಪದವು ೧೬ ನೆಯ ಮರುಳಸಿದ್ಧನವರಿಗೆ ಮಾತ್ರ ಬರಲು ಕಾರಣವೇನು ? ಮುಂದಿನವರಿಗೇಕೆ ಇಲ್ಲ.

೪೬. ಹೂಲಿಯಲ್ಲಿ ಗುರುಕುಲವಿದ್ದುದ್ದಕ್ಕೆ ಆಧಾರವೇನು ? ಗುರುಕುಲ ಸಂಭವ ಯೆಂದರೆ ಅರ್ಥವೇನು ?

೪೭. ಪುಟ ೨೦, ಇಲ್ಲಿ ಕೊಟ್ಟಿರುವ ಉಜ್ಜಯಿನೀ ಕ್ಷೇತ್ರದ ವಿಷಯವು ಕೊಟ್ಟೂರು ಉಜ್ಜಯಿನಿಗೆ ಸೇರಿದ್ದೇ ? ಮಾಳವ ಉಜ್ಜಯಿನಿಗೆ ಸೇರಿದ್ದೇ ? ಕೊಟ್ಟೂರು ಉಜ್ಜಯಿನಿಗೆ ಸೇರಿದ್ದಾದರೆ ಅಲ್ಲಿ ವಿಜಯ ಕಾವ್ಯ ಹೇಳಿರುವಂತೆ ಮೂಲಕರ್ತ ಮರುಳಾರಾಧ್ಯ ಲಿಂಗವಿರಬೇಕಲ್ಲವೇ ? ಮರುಳಸಿದ್ಧ ಲಿಂಗವೇಕೆ ಬಂದಿತು ?

೪೮. ಈ ಪಾದಗಳ ಬಗ್ಗೆ ಐತಿಹ್ಯವೇನಾದರೂ ಇದೆಯೇ ? ಇದ್ದಲ್ಲಿ ವಿಜಯಕಾವ್ಯವು ಈಬಗ್ಗೆ ಮೌನವನ್ನೇಕೆ ಧರಿಸಿದೆ? ಇಲ್ಲದಿದ್ದಲ್ಲಿ ಈಗಲೂ ಉಜ್ಜಯಿನಿಯಲ್ಲಿ ನಡೆಯುತ್ತಿರುವ ಮಾಘ ಶುದ್ಧ ಹುಣ್ಣಿಮೆ ದಿನದ ಪಾದಗಟ್ಟೆಗಳ ಯಾತ್ರೆಯ ಉದ್ದೇಶವೇನು ? ಈ ಕ್ಷೇತ್ರಕ್ಕೆ ಸ್ಮಶಾನ ಮತ್ತು ಊಷರಗಳಿಂದ ಉಂಟಾಗಿರುವ ಶೋಭೆಯ ಸ್ವರೂಪ ಎಂತಹದು ? ಇಲ್ಲಿ ವನವಾವುದಿದೆ. ಕ್ಷೇತ್ರವೆಂದರೆ ೧೬ ಮೈಲಿ ವಿಸ್ತಾರ

ವುಳ್ಳ ಭೂಭಾಗವಲ್ಲವೇ? ಪೀಠವೆಂದರೆ ಮಠವಲ್ಲವೇ? ಇಲ್ಲಿ ದೇವಸ್ಥಾನದ ವಿಷಯವನ್ನೇಕೆ ಹೇಳಲಿಲ್ಲ?

೪೯. ಪುಟ ೨೧-೨೨ ರಲ್ಲಿ, ಮೂಲ ಪುರುಷನು ಗೋತ್ರನಾಥನಾಗುತ್ತಾನೆಯೇ? ೧೬ನೇ ಪುರುಷನು ಗೋತ್ರನಾಥನಾಗುತ್ತಾನೆಯೇ? ಮೂಲ ಪುರುಷನಾಗುವುದಾದಲ್ಲಿ ೧೬ ನೇ ಮರುಳಸಿದ್ಧನು ಹೇಗೆ ಗೋತ್ರ ನಾಥನಾದನು. ಅವನು ಗೋತ್ರನಾಥನಾಗುವುದಾದರೆ ಮೂಲ ಮರುಳಾರಾಧ್ಯರೇನಾಗಬೇಕು?

೫೦. ಕ್ಷೇತ್ರದಲ್ಲಿರುವ ಬಸವಗಳಿಗೆಲ್ಲಾ ಸಂಸ್ಕೃತ ಹೆಸರುಗಳನ್ನಿಡಲಾಗಿದೆ. ಕೋರು ಬಸವ ಎಂಬುದಕ್ಕೆ ಉನ್ನತ ಸದ್ಧರ್ಮ ನಂದಿ. ಇದು ಸರಿಯಾದ ಅನುವಾದವೇ? ಮುಗ್ಧ ನಂದಿಗೆ ಕನ್ನಡದ ಹೆಸರೇಕೆ ಇಲ್ಲ? ಕಾಶೀ ಬಸವಗೆ ಉತ್ತರನಂದಿ ಎಂಬುದು ಸರಿಯಾದ ಅನುವಾದವೆ? ಮಾಶಿಲ ವಂಟಿ ಬಸವ ಎಂಬುದು ಅಲ್ಲಿದೆಯೇ? ಇದ್ದಲ್ಲಿ ಮಾಶಿಲಾ ಎಂದರೇನು? ಮಾಶಿಲಾ ಎಂಬ ಸಂಸ್ಕೃತದ ಅನುವಾದದ ಅರ್ಥವೇನು? ಸ್ಥಳದಲ್ಲಿ ಅದನ್ನು ಮುಸಲವಂಟಿ ಬಸವನೆಂದು ಕರೆಯುವುದಿಲ್ಲವೇ? ಸುಧಾಕರ ನಂದಿಗೆ ಕನ್ನಡದ ಹೆಸರೇನು? ಉಣ್ಣೆಯ ಬಸವಗೆ ಊರಣ ಬಸವನೆಂಬ ಅನುವಾದವು ಸಂಸ್ಕೃತ ಭಾಷೆಯದೇ? ಆದರೆ ಊರಣ ಶಬ್ದದ ಅರ್ಥವೇನು? ಕನ್ನಡವಾದರೆ ಅದಕ್ಕೇಕೆ ಸಂಸ್ಕೃತವನ್ನು ಮಾಡಲಿಲ್ಲ.

೫೧. ಮುಂಡಿಯೋಗಿ ಸಿದ್ಧೇಶ ಎಂಬಲ್ಲಿ ಮುಂಡಿ ಪದವು ಸಂಸ್ಕೃತವೇ? ಕನ್ನಡವೇ? ಅರ್ಥವೇನು?

೫೨. ಕ್ಷೇತ್ರಪಾಲ ಭೈರವನ ವಿಗ್ರಹವು ದೇವಸ್ಥಾನದ ಪಶ್ಚಿಮ ಬಾಗಿಲಲ್ಲಿ ಇದೆ ಎಂದು ಇಲ್ಲಿ ಹೇಳಲಾಗಿದೆ. ಈ ವಿಗ್ರಹವೇ ಪುಟ ೧೨೪ ರಲ್ಲಿರುವ ಚಿತ್ರದಲ್ಲಿ ತ್ರಿಭುವನ ಮಲ್ಲನೆಂದು ಹೇಳಲ್ಪಟ್ಟಿಲ್ಲವೇ? ಇಲ್ಲವಾದರೆ ಪಶ್ಚಿಮ ದ್ವಾರದಲ್ಲಿ ಕ್ಷೇತ್ರಪಾಲ ಭೈರವ, ತ್ರಿಭುವನಮಲ್ಲ – ಎರಡು ವಿಗ್ರಹಗಳಿವೆಯೇ?

೫೩. ಬೇವಿನ ಮರದ ದುರ್ಗಿ ಎಂಬುದಕ್ಕೆ ನಿಂಬಾವೀಥಿ ದುರ್ಗಾದೇವಿ ಎಂಬುದು ಸರಿಯಾದ ಅನುವಾದವೇ?

೫೪. ಪುಟ ೨೩ ರಲ್ಲಿ ಗುರುಕೂಪ ಮಹಾತೀರ್ಥವೆಂದರೆ ಮಠದ ಬಾವಿಯು ಲ್ಲವೇ ? ಸಿದ್ಧೇಶ್ವರ ಮಜ್ಜನ ಕುಂಡ ತೀರ್ಥ, ಗೌರಿಮಜ್ಜನ ಕುಂಡ ತೀರ್ಥಗಳೆಂದರೆ ಸಿದ್ಧೇಶ್ವರ ಲಿಂಗ ಮತ್ತು ಪಾರ್ವತಿಯ ವಿಗ್ರಹದ ಅಭಿಷೇಕ ಮಾಡಿದ ನೀರುನಿಲ್ಲುವ ಗುಂಡಿಗಳಲ್ಲವೇ? ಗೋಪ್ಯ ನಂದೀ ಭಾನು ಕೂಪ ತೀರ್ಥ ವೆಂದರೆ ಅದೂ ಒಂದು ಭಾವಿಯಲ್ಲವೇ ? ಹೀಗೆಯೇ ಇತರ ತೀರ್ಥಗಳ ಬಗ್ಗೆಯೂ ಅಲ್ಲವೇ ?

೫೫. ಕರಿಕಾಲ – ಕಲಿಕಾಲ ಗೋಗಿರಿ ಎಂದರೆ ಕರುವಿನ ಗುಡ್ಡವಲ್ಲವೇ ? ಇದಕ್ಕೆ ಇಲ್ಲಿ ಕಲಿಕಾಲ-ಕರಿಕಾಲ ಎಂದು ಕರೆಯಲು ಕಾರಣವೇನು ? ವಾನರಪುರ ತಟಾಕ ಇದು ಕನ್ನೀರಾಂಬಾ ಯತ್ರೆಯ ಸಂಸ್ಕೃತ ಅನು ವಾದವೇ ? ಅಯ್ಯನ ಕಟ್ಟೆ ಯೆಂಬಲ್ಲಿ ಕಟ್ಟೆಗೆ ಸಾಗರ ಪದ ಪ್ರಯೋ ಗವು ಹೇಗೆ ಉಚಿತವು ?

೫೬. ಪುಟ ೪೨ ರಲ್ಲಿ, ಉಜ್ಜಯಿನೀ ದೇವಸ್ಥಾನದ ರಚನೆಯು ವಿಜಯ ಕಾ ವ್ಯವು ಹೇಳುವಂತೆ ಕ್ರಿ. ಶ. ೧೦೪೦ ರಲ್ಲಿ ಅಂದರೆ ಇಲ್ಲಿಗೆ ೯೦೯ ವರ್ಷ ಗಳ ಕೆಳಗೆ ಆಗಿದೆಯೆಂದು ಅರ್ಥವಾಗುತ್ತದೆ. ಇಲ್ಲಿ ೧೦೪೪ ವರ್ಷ ಗಳಷ್ಟು ಪೂರ್ವದ್ದೆಂದು ಹೇಳಿರುವುದು ಹೇಗೆ ಸಮಂಜಸವಾಗುತ್ತದೆ.

೫೭. ಲಕ್ಷ್ಮೇಶ್ವರದ ದೇವಾಲಯದಲ್ಲಿರುವ ಶಿಲಾಲೇಖವು ಕ್ರಿ. ಶ. ೧೫೦೩ ರಲ್ಲಿ ಹೂಲಿ ಮರುಳಸಿದ್ಧನು ಕಾಲವಾದುದನ್ನು ಸೂಚಿಸುತ್ತದೆಯೇ ಇಲ್ಲವೇ ? ಇಲ್ಲವಾದರೆ ಆ ಕಾಲವು ಶಾಸನದ ರಚನೆಗೆ ಸಂಬಂಧಪ ಟ್ಟಿದ್ದೇ ? ಸಂಬಂಧ ಪಟ್ಟಿದ್ದಾದಲ್ಲಿ ರಚನೆಯ ವಿಷಯವನ್ನು ಹೇಳು ತ್ತಿರುವ ಕಂದ ಪದ್ಯದಲ್ಲಿ ಆ ಕಾಲವನ್ನು ಹೇಳದೆ ಮೇಲಿನ ಗದ್ಯಭಾಗ ದಲ್ಲಿ ಹೇಳಲು ಕಾರಣವೇನು ? ಗದ್ಯಭಾಗದ ಪದ ಸಮೂಹಗಳಿಗೂ ಪದ್ಯಭಾಗದ ಪದಸಮೂಹಗಳಿಗೂ ಆಸತ್ತಿಯನ್ನು ಕಲ್ಪಿಸಿ ವಾಕ್ಯಾ ರ್ಥವನ್ನು ಪಡೆಯುವುದು ಉಚಿತವೇ ? ಉಚಿತವಾದಲ್ಲಿ ಒಂದು ಪುಸ್ತ ಕದ ಕೆಲವು ಪದಗಳಿಗೆ, ಮತ್ತೊಂದು ಪುಸ್ತಕದ ಕೆಲವು ಪದಗ ಳೊಂದಿಗೆ ಆಸತ್ತಿಯನ್ನು ಕಲ್ಪಿಸುವ ಪ್ರಸಂಗ ಬರುವುದಿಲ್ಲವೇ ? ಮೊದಲೇ ಹೇಳಿರುವ ವೃತ್ತಪದ್ಯದಲ್ಲಿ ಈ ಕಾಲದಲ್ಲಿ ಐಕ್ಯನಾದನೆಂದು ಸ್ಪಷ್ಟವಾಗಿ ಹೇಳಿಲ್ಲವೇ ?

೫೭. ಪುಟ ೪೩ ರಲ್ಲಿ, ಆದಿ ಶಂಕರಾಚಾರ್ಯರ ಕಾಲದಲ್ಲಿ ಆದಿಮುರುಳಸಿದ್ಧನು ಇದ್ದನೆಂಬುದು ನಿಜವೇ ? ನಿಜವಾದಲ್ಲಿ ಆದಿ ಶಂಕರಾಚಾರ್ಯರು ಮತ್ತು ಪೀಠದ ೫ ನೇ ಶಾಂತ ಮುನಿಗಳು ಒಟ್ಟಿಗೆ ಶೈವ ಮತವನ್ನು ಪ್ರಚಾರಗೊಳಿಸಿದರೆಂದು ಹೇಳುವ ವಿಜಯ ಕಾವ್ಯಕ್ಕೆ ವಿರೋಧವಾಗುವುದಿಲ್ಲವೇ ?

೫೮. ಆದಿ ಮುರುಳಸಿದ್ಧನು ಲಿಂಗದಿಂದ ಹುಟ್ಟಿದನೇ ? ಹುಟ್ಟಿದನಾದರೆ ವಿಜಯಕಾವ್ಯದಲ್ಲಿ ಏಕೆ ಹೇಳಿಲ್ಲ. ಮತ್ತು ಇವನ ಹಿಂದಿನ ೧೪ ಜನರು ಲಿಂಗದಲ್ಲಿ ಹುಟ್ಟಿದರೇ ? ಮತ್ತು ಅದನ್ನು ಏಕೆ ಹೇಳಿಲ್ಲ ? ಅಥವಾ ಈ ಪರಂಪರೆಯವರೆಲ್ಲಾ ಲಿಂಗೋದ್ಭವರೇ ? ಆಗಿದ್ದಲ್ಲಿ ಈಗ ಪೀಠಾಧಿಪತಿಗಳಾಗಿರುವವರು ಯೋನಿಜರಲ್ಲವೇ ? ಹಿಂದಿನವರು ಎಲ್ಲರೂ ಲಿಂಗೋದ್ಭವರಾಗದೆ ಕೆಲಕೆಲವರಾಗಿದ್ದಲ್ಲಿ ಕಾರಣವೇನು ?

೬೦. ಪುಟ ೫೩ ರಲ್ಲಿ ಜೈನ ಚತುರ್ಥರಿಗೆ ಸೋದರರು ಎಂದು ಮುರುಳಸಿದ್ಧನು ಹೆಸರಿಟ್ಟನೆಂದು ಎಲ್ಲಿ ಹೇಳಿದೆ ? ಇಟ್ಟದ್ದು ನಿಜವಾದರೆ ಈಗ ಎಲ್ಲಿಯೂ ಸೋದರ ಶಬ್ದದ ಪ್ರಯೋಗವು ದೊರೆಯದಿರುವುದರ ಕಾರಣವೇನು ? ಈಗ ಸಾದರ ಎಂಬ ಪ್ರಯೋಗವು ಇರುವುದಕ್ಕೆ ನಿದರ್ಶನವೇನು ?

೬೧. ನೀಲಕಂಠರಿಂದ ದೀಕ್ಷೆ ಪಡೆದ ಜೈನ ಪಂಚಮರು ಮೂಲ ಪಂಚಮರಲ್ಲಿ ಸೇರಿಕೊಂಡದ್ದು ನಿಜವಾದಲ್ಲಿ ಅದೇ ಜೈನ ಚತುರ್ಥರು ಅವರೊಳಗೆ ಸೇರಲಿಲ್ಲವೇ ? ಜೈನ ಪಂಚಮರಿಗಿಂತ ಮುಂಚೆ ಮೂಲ ಪಂಚಮರೆಂಬುವರು ಇದ್ದುದಕ್ಕೆ ಐತಿಹಾಸಿಕ ಆಧಾರವೇನು ? ಈಗ ಈ ಎರಡು ಪಂಚಮ ಪಂಗಡಗಳು ಅಸ್ತಿತ್ವದಲ್ಲಿವೆಯೇ ?

೬೨. ಪಂಚಮ ಸಾಲೆಯವರೊಡನೆ ಸೋದರರು ಸೋದರ ಭಾವನೆಯಿಂದ ನಡೆಯಲು ಹೇಳಿದ್ದಕ್ಕೆ ಆಧಾರವೇನು ?

೬೩. ಸೋದರ, ಸಾದರ, ಸಾದ ಇವು ಭಿನ್ನಾರ್ಥ ವಾಚಕಗಳಲ್ಲವೇ ? ಇವೆಲ್ಲವೂ ಒಂದೇ ಅರ್ಥವನ್ನು ಸೂಚಿಸದಿರುವಾಗ ಇವು ಸೋದರ ಶಬ್ದದ ಅಪಭ್ರಂಶವೆಂದು ಹೇಳುವುದು ಉಚಿತವೇ ?

೬೪. ನಾಗಭೂಷಣ ಕವಿಯು ಮಾರ, ಸೊನ್ನಲೆಯರು ಕುಚಗಳಿಂದ ಸ್ವತಃ

ಕೆರೆಗಳನ್ನು ಮಾಡಿಕೊಟ್ಟರೆಂದು ಹೇಳಿರುವುದರಿಂದ ಅವರು ಕೆರೆ ಹೊಲೆಯುವ ಕಾಯಕದವರೆಂದು ಅರ್ಥವಾಗುವುದಿಲ್ಲವೇ ? ಅವರ ಮಧ್ಯದಲ್ಲಿ ಜನಿಸಿದ ಮರುಳಸಿದ್ಧನು ಅವರ ಮನೆಯಲ್ಲಿ ಮೂರು ದಿವಸ ಪೋಷಣೆ ಪಡೆದಿರುವುದರಿಂದ ಅವನಿಗೆ ಮಾದಿಗತನವು ಸಂಭ ಸುವುದಿಲ್ಲವೇ ?

೬೫. ಮರುಳಸಿದ್ಧನ ತರುವಾಯ ಮುಕ್ತಿಮುನಿ ಬಂದಿರುತ್ತಾನೆ. ಮಲ್ಲಿ ಕಾರ್ಜುನನು ಬಂದನೆಂದು ಹೇಳುವ ಶ್ರೀ ಕಾಶೀನಾಥ ಶಾಸ್ತ್ರಿಗಳ ವಾಕ್ಯಕ್ಕೆ ಇದು ವಿರೋಧವಾಗುವುದಿಲ್ಲವೇ ?

೬೬. ಗುರುರಾಜ ಚಾರಿತ್ರಕರ್ತ ಸಿದ್ಧನಂಜೇಶನಿಗೆ ನವನಂದಿ ಸಿಂಹಾಸನ ದವನೆಂದು ಗುರುರಾಜ ಚಾರಿತ್ರದಲ್ಲಿ ಹೇಳಿಲ್ಲವೇ ? ಹೇಳಿರುವುದಾ ದರೆ ಈ ಹೂಲಿ ಸಿದ್ಧನಂಜೇಶನು ಅವನಿಗಿಂತ ಭಿನ್ನನೇ ? ಭಿನ್ನನಾಗಿ ದ್ದಲ್ಲಿ ಅವನು ಗುರುರಾಜ ಚಾರಿತ್ರ ಕರ್ತನೆಂಬುದು ಅಸತ್ಯವಲ್ಲವೇ ? ಈ ಹೂಲಿ ಸಿದ್ಧನಂಜೇಶನು ಗುರುರಾಜ ಚಾರಿತ್ರಕರ್ತ ಸಿದ್ಧನಂಜೇ ಶನ ಗುರುವೆಂದು ಅದರಲ್ಲಿ ಹೇಳಿಲ್ಲವೇ ?

೬೭. ಇದರಿಂದ ಸಿದ್ಧನಂಜೇಶರು ೨ ಜನರೆಂದು ವ್ಯಕ್ತವಾಗುವುದಿಲ್ಲವೇ ? ಇವರಲ್ಲಿ ನಂದೀಶ ಕವಿಯು ಯಾರಿಗೆ ಶಿಷ್ಯನು ? ಗುರುರಾಜ ಚಾರಿ ತ್ರಕರ್ತ ಸಿದ್ಧನಂಜೇಶನಿಗೆ ಶಿಷ್ಯನಾಗಿದ್ದಲ್ಲಿ ಈ ಸಿದ್ಧನಂಜೇಶನು ತನ್ನ ರಾಘವಾಂಕ ಕಾವ್ಯವನ್ನು ಈ ನಂದೀಶನ ಕೃಪೆಯಿಂದ ಪ್ರಕಟಮಾಡ್ಡಿ ದೆನೆಂದು ಹೇಳಿಕೊಂಡಿರುವುದು ಅನುಚಿತವಾಗುವುದಿಲ್ಲವೇ ?

೬೮. ಹೂಲೀ ಸಿದ್ಧನಂಜೇಶನಿಗೆ ಇವನು ಶಿಷ್ಯನಾಗಿದ್ದಲ್ಲಿ ಅವನ ಶಿಷ್ಯ ಪರಂಪರೆಯಲ್ಲಿ ಇವನ ಹೆಸರು ಏಕೆ ಇಲ್ಲ ?

೬೯. ಅಥವಾ ಗುರುರಾಜ ಚಾರಿತ್ರಕರ್ತ ಹೂಲಿ ಸಿದ್ಧನಂಜೇಶನು ಈ ಎರಡು ಜನ ಸಿದ್ಧನಂಜೇಶರಿಗಿಂತ ಭಿನ್ನನೇ ?

೭೦. ಭಿನ್ನನಾಗಿದ್ದಲ್ಲಿ ನವನಂದಿ ಸಿಂಹಾಸನದ ಸಿದ್ಧನಂಜೇಶನ ಗುರುರಾಜ ಚಾರಿತ್ರವಲ್ಲದೆ ಇನ್ನೊಂದು ಗುರುರಾಜ ಚಾರಿತ್ರವಿದೆಯೇ ?

೭೧. ಇರುವುದಾದರೆ ಅದರಲ್ಲಿ ಮರುಳಸಿದ್ಧನ ಚರಿತ್ರೆಯು ಹೇಳಲ್ಪಟ್ಟಿ ದೆಯೇ ?

೭೨. ಚನ್ನವೀರಾಂಬೆಯು ಗುರುರಾಜ ಚಾರಿತ್ರ ಕರ್ತ ಸಿದ್ಧನಂಜೇಶನ ಹೆಂಡತಿಯೇ? ಹೂಲಿ ಸಿದ್ಧನಂಜೇಶನ ಹೆಂಡತಿಯೇ? ಅಥವಾ ಗುರುರಾಜ ಚಾರಿತ್ರ ಕರ್ತ ಹೂಲೀ ಸಿದ್ಧನಂಜೇಶನ ಹೆಂಡತಿಯೇ?

೭೩. ಹೂಲೀ ಸಿದ್ಧನಂಜೇಶನ ಹೆಂಡತಿಯಾದರೆ ಅವನ ಶಿಷ್ಯ ಗುರುರಾಜ ಚಾರಿತ್ರ ಕರ್ತ ಸಿದ್ಧನಂಜೇಶನಿಗೆ ಹೆಂಡತಿಯೆಂದು ಹೇಳಿರುವುದು ಅನುಚಿತವಲ್ಲವೇ?

೭೪. ಗುರುರಾಜ ಚಾರಿತ್ರದ ಮರುಳಸಿದ್ಧನು ಕಗ್ಗಲ್ಲಗೌಡನ ಮಗನಾಗಿ ಮಾಯೆಯನ್ನು ಸೋಲಿಸಿ ಉಜ್ಜಯಿನಿಯಲ್ಲಿ ಬಯಲಾಗುತ್ತಾನಲ್ಲವೆ? ನಂದೀಶ ಕವಿಯ ಆದಿ ಮರುಳಸಿದ್ಧನು ಮಾಯೆಯನ್ನು ಸೋಲಿಸಿ ಉಜ್ಜಯಿನಿಯಲ್ಲಿ ಬಯಲಾಗುತ್ತಾನೆ. ಕಗ್ಗಲ್ಲ ಗೌಡನಿಗೆ ಮಗನಾಗುವುದಿಲ್ಲ. ಆದ್ದರಿಂದ ಸಿದ್ಧನಂಜೇಶ ಮತ್ತು ನಂದೀಶರ ಮರುಳಸಿದ್ಧರು ಬೇರೆ ಬೇರೆಯವರಲ್ಲವೇ?

೭೫. ಆದಿ ಮರುಳಸಿದ್ಧನು ಕ್ರಿ. ಶ. ೯೦೨ ರಲ್ಲಿ ಧರೆಗೆ ಬಂದು ಕ್ರಿ. ಶ. ೧೦೫೨ ರಲ್ಲಿ ಕಾಲವಾಗುತ್ತಾನೆ. ಹೂಲೀ ಮರುಳಸಿದ್ಧನು ಕ್ರಿ. ಶ. ೧೦೮೧ ರಲ್ಲಿ ಅಂದರೆ ೨೯ ವರ್ಷಗಳ ನಂತರ ಪಟ್ಟಕ್ಕೆ ಬರುತ್ತಾನೆ. ಹಾಗಾದರೆ ಇವರಿಬ್ಬರ ಮಧ್ಯದಲ್ಲಿ ೨೪೫ ವರ್ಷಗಳು ಆಳಿದ ನಾಲ್ಕು ಜನ ಗುರುಗಳ ಗತಿಯೇನು? ಇದರಿಂದ ಈ ನಂದೀಶ ಕವಿಯ ಮತ್ತು ಈ ಕಾವ್ಯದ ಪ್ರಾಮಾಣ್ಯವು ಉಳಿಯುತ್ತದೆಯೇ?

೭೬. ಹೂಲೀ ಮರುಳಸಿದ್ಧನಿಗೆ ಮಾತ್ರ ಆಳ್ವಿಕೆಯ ವರ್ಷಗಳೆಷ್ಟೆಂಬುದನ್ನು ಹೇಳಿಲ್ಲ. ಕಾರಣವೇನು? ಹಾಗಾದರೆ ಕ್ರಿ. ಶ. ೧೦೮೧ ರಿಂದ ಪ್ರೌಢದೇವರಾಯನ ಕ್ರಿ. ಶ. ೧೪೮೬ ರ ವರೆಗೆ ಆಳಿದನೇ?

೭೭. ಲಕ್ಷ್ಮೇಶ್ವರದ ಶಾಸನದಲ್ಲಿರುವ ಕ್ರಿ ಶ. ೧೫೩೩ ರ ವರೆಗೆ ಇದ್ದನೆಂದು ಶ್ರೀ ಶಿವರ ಅಭಿಪ್ರಾಯ. ಹಾಗಾದರೆ ಅವನು ೪೫೨ ವರ್ಷಗಳ ವರೆಗೆ ಇದ್ದನೇ?

೭೮. ಇದ್ದನಾದರೆ, ಸಿದ್ಧಮಲ್ಲಾರ್ಯನಿಗೆ ಪಟ್ಟಕಟ್ಟಲು ಹೇಳಿದ ಸಿದ್ಧನಂಜೇಶನು ಈವರೆಗೆ ಇದ್ದನೇ?

೬೯. ಇದ್ದನಾದರೆ ಸಿದ್ಧಮಲ್ಲನು ಪಟ್ಟಕ್ಕೆ ಬಂದದ್ದು ಕ್ರಿ. ಶ. ೧೫೮೩ ರ ನಂತರವಾಗುವುದಿಲ್ಲವೇ ?

೭೦. ಹೀಗಾದಲ್ಲಿ ಕ್ರಿ. ಶ. ೧೪೦೬ ರಲ್ಲಿ ಪ್ರೌಢದೇವರಾಯನ ಕಾಲದಲ್ಲಿ ಸಿದ್ಧಮಲ್ಲನು ಇದ್ದದ್ದು, ವಚನಗಳನ್ನು ರಚಿಸಿದ್ದು, ಸಿಂಧೋಗಿ ಮಾದಿಗ ಮರುಳಸಿದ್ಧನ ಜನ್ಮಕ್ಕೆ ವರವಿತ್ತದ್ದು ಇವೆಲ್ಲಾ ಅಸಂಬದ್ಧವಾಗುವುದಿಲ್ಲವೇ ?

೭೧. ಕ್ರಿ. ಶ. ೧೫೮೩ ರ ನಂತರ ಸಿದ್ಧಮಲ್ಲನು ಬಂದನಾದರೆ ೫೫ ನೆಯ ಗುರುಗಳ ಕಾಲವು ಕ್ರಿ. ಶ. ೧೭೫೩ ಆಗುವುದಿಲ್ಲವೇ ?

೭೨. ಹಾಗಾದರೆ ೧೫ ನೇ ಶತಮಾನದ ವರೆಗೆ ೫೫ ಜನ ಗುರುಗಳಿದ್ದರೆಂಬುದು ಅಸಂಬದ್ಧವಾಗುವುದಿಲ್ಲವೆ ?

೭೩. ಮತ್ತು ಹೂಲಿ ಮರುಳಸಿದ್ಧನ ಕಾಲ ಕ್ರಿ. ಶ. ೧೦೮೧ ಅಂದರೆ ೧೧ ನೆಯ ಶತಮಾನ. ಈ ಕಾಲದಲ್ಲಿದ್ದ ಸಿದ್ಧನಂಜೇಶನು ತನ್ನ ಹೆಂಡತಿಗೆ ೧೮ ನೇ ಶತಮಾನದ ವರೆಗೆ ಇನ್ನೂ ನಡೆಯದಿರುವ ಮುಂದಿನ ಕಥೆಯನ್ನು ಬೋಧಿಸಿದನೆಂದರೆ ಪ್ರಾಮಾಣ್ಯಕ್ಕೆ ಭಂಗ ಬರುವುದಿಲ್ಲವೇ ?

೭೪. ಸಿದ್ಧನಂಜೇಶನ ಶಿಷ್ಯ ನಂದೀಶ ಕವಿಯು ತಾನು ೧೧ ನೆಯ ಶತಕದವನಾಗಿ ೧೮ ನೆಯ ಶತಕದ ವರೆಗೆ ನಡೆದಿರುವುದನ್ನು ಬರೆದನೆಂದು ನಂಬುವುದು ಸಾಧ್ಯವೇ ?

೭೫. ನಂದೀಶನು ಗುರುರಾಜ ಚಾರಿತ್ರ ಕರ್ತ ಸಿದ್ಧನಂಜೇಶನ ಮಿತ್ರ. ಚನ್ನವೀರಾಂಬೆಯ ಪತಿ ಸಿದ್ಧನಂಜೇಶನ ಶಿಷ್ಯಪರಂಪರೆಯಲ್ಲಿಲ್ಲ. ಹೀಗಿರುವಾಗ ಇವನಿಗೆ ಹೂಲೀ ಪಂಚವಣ್ಣಿಗೆ' ವಿಶೇಷಣವು ಹೇಗೆ ಬಂದಿತು.

೭೬. "ಸುಶಾಂತ ಬಂಧುರ ಸಂಸ್ಕೃತ ಪ್ರಾಕೃತೋಭಯ ಕವಿತ್ವಾವಿಲರ ಶಿರೋಮಣಿ ಯೆನಿಪ ನಂದೀಶ ಕವಿಯ ಕೃಪೆಯಿಂ ಪ್ರಕಟಮಂ ಮಾಡಿದೆಂ" ಎಂದು ರಾಘವಾಂಕ ಕಾವ್ಯದಲ್ಲಿ ಸಿದ್ಧನಂಜೇಶನು ಹೇಳಿದ್ದಾನೆ. ಇದರಿಂದ ಇವನು ಈ ಸಿದ್ಧನಂಜೇಶನ ಸಮಕಾಲೀನ ಮಿತ್ರನೆಂದು ಅರ್ಥವಾಗುವುದಿಲ್ಲವೇ? ಇಲ್ಲಿ ಹೂಲೀ ಪಂಚವಣ್ಣಿಗೆ ಎಂಬುದು ಏಕೆ ಇಲ್ಲ ?

೮೭. ಸಂ| ಕವಲಿ ಚನ್ನಬಸವ ಕವಿಗಳು ತಾವೇ ಸ್ವತಃ ಸಂಪಾದಕರಾಗಿ ರುವಾಗ ತಾವೇ ಪುಸ್ತಕವನ್ನು ದೊರಕಿಸಿಕೊಂಡು ಇತರ ಲೇಖಕರಿಗೆ ತೋರಿಸಬೇಕಲ್ಲವೇ ? ಆದರೆ ಇಲ್ಲಿ ಅವರು "ನಮಗೆ" ಅಂದರೆ ಶ್ರೀ ಶಿವರಿಗೆ ದೊರೆತದ್ದನ್ನು ತರಿಸಿ ನೋಡಿದರೆಂದು ಹೇಳಲಾಗಿದೆ. ಆದ್ದರಿಂದ ಅವರು ಇದರ ಸಂಪಾದಕರೆಂಬ ಬಗ್ಗೆ ಸಂಶಯ ಬರುವುದಿ ಲ್ಲವೆ ?

೮೮. ನಮಗೆ ಪದದಿಂದ ಸೂಚಿಸಲ್ಪಡುವ ಶ್ರೀ ಶಿವರೇ ಇದರ ಸಂಪಾದಕ ರಿರಬೇಕೆಂದು ಇದರಿಂದ ಭಾಸವಾಗುವುದಿಲ್ಲವೇ ?

೮೯. ಆಗುವುದಾದರೆ ಈ ರೀತಿ ಕವಲಿಯವರ ಹೆಸರನ್ನು ಸಂಪಾದಕ ಶ್ರೇಣಿ ಯಲ್ಲಿ ಸೇರಿಸಲು ಕಾರಣವೇನು ?

೯೦. ಶ್ರೀ ಶಿ. ತಿ. ಬಸವನಾಳರು ಮತ್ತು ಅವರ ಐತಿಹಾಸಿಕ ಮಿತ್ರ ಮಂಡ ಲಿಯವರು ತರಿಸಿ ನೋಡಿದರೆಂದ ಮೇಲೆ ಇದರಬಗ್ಗೆ ಅವರು ಕೊಟ್ಟ ಅಭಿಪ್ರಾಯ ವನ್ನೇಕೆ ಉಲ್ಲೇಖಿಸಿಲ್ಲ.

೯೧. ಶ್ರೀ ಬಸವನಾಳರು ಬರೆದಿರುವ ಮುನ್ನುಡಿಯೇ ಆ ಮಂಡಲಿಯ ಅಭಿ ಪ್ರಾಯವೇ ?

೯೨. ಸಂಪಾದಕೀಯದಲ್ಲಿ ಈ ಪುಸ್ತಕವು ಶ್ರೀ ನೀಲಕಂಠ ಶಿವಾಚಾರ್ಯರಿಂದ ತಮ್ಮಗೆ ದೊರಕಿತೆಂದು ಸಂಪಾದಕದ್ವಯರು ಹೇಳಿಲ್ಲವೇ ?

೯೩. ಹೀಗಿರುವಾಗ ಇಲ್ಲಿ ಹೇಳಿರುವಂತೆ ಶ್ರೀ ಶಿವರಿಗೆ ದೊರೆಯಿತೇ ? ಅಲ್ಲಿ ಹೇಳಿರುವಂತೆ ಸಂಪಾದಕ ದ್ವಯರಿಗೆ ದೊರೆಯಿತೇ ?

೯೪. ನಂದೀಶ ಕವಿಯು ಗುರುರಾಜ ಚಾರಿತ್ರಕರ್ತ ಸಿದ್ಧ ನಂಜೇಶನ ಶಿಷ್ಯ ನಾದರೆ ಅವನಿಗೆ ಚನ್ನವೀರಾಂಬೆ ಎಂಬ ಸತಿ ಇದ್ದಳೆಂದು ಎಲ್ಲಿ ಹೇಳಿದೆ ?

೯೫. ಚನ್ನವೀರಾಂಬೆಯು ಹೂಲೀ ಸಿದ್ಧನಂಜೇಶನ ಹೆಂಡತಿಯಲ್ಲವೇ ?

೯೬. ಹೂಲೀ ಸಿದ್ದನಂಜೇಶನು ತನ್ನ ಗುರುವೆಂದು ಈ ಸಿದ್ಧನಂಜೇಶನು ತನ್ನ ಗುರುರಾಜ ಚಾರಿತ್ರದಲ್ಲಿ ಹೇಳಿಲ್ಲವೇ ?

೯೭. ಆದ್ದರಿಂದ ಗುರುವಿನ ಹೆಂಡತಿಯನ್ನು ಶಿಷ್ಯನು ಪರಿಗ್ರಹಿಸಿದಂತಾಗು ದಿಲ್ಲವೇ ?

೯೮. ಕಥಾ ನಾಯಕರ ಕಾಲವನ್ನು ಈ ಕಾವ್ಯದಲ್ಲಿ ಈ ಕವಿಯು ಹೇಳಿರುವುದನ್ನು ಬಿಟ್ಟರೆ ಮತ್ತಾವ ಕವಿಯಾದರೂ ಕಥಾ ನಾಯಕರ ಕಾಲವನ್ನು ಹೇಳಿರುವ ಉದಾಹರಣೆಯುಂಟೇ ?

೯೯. ಈ ರೀತಿ ರೂಢಿಗೆ ವಿರುದ್ಧವಾಗಿ ನಾಯಕರ ಕಾಲವನ್ನು ಹೇಳಿರುವುದು ಒಂದು ವಿಶೇಷೋದ್ದೇಶವನ್ನು ಸೂಚಿಸುವುದಿಲ್ಲವೇ ?

೧೦೦. ಈ ಕಾವ್ಯದ ಕವಿತಾ ಶೈಲಿ, ಪದ್ಯಬಂಧ, ಇವುಗಳು ೧೧ ನೆಯ ಶತಮಾನದ ಅಥವಾ ಕವಿಚರಿತೆ ಕಾರರ ನಿರ್ಣಯದಂತೆ ೧೭ ನೆಯ ಶತಮಾನದ ಮತ್ತು ರಾಘವಾಂಕ ಕಾವ್ಯದ ಪ್ರಕಟಣೆಗೆ ಸಹಾಯಮಾಡಿದ ಸಂದೀಶನ ಮಟ್ಟಕ್ಕೆ ಸಮವಾಗಿವೆಯೇ ?

೧೦೧. ಶ್ರೌತಪಾಲನು ಜೈನನೆಂದು ಕಾವ್ಯದಲ್ಲಿ ಹೇಳಿದೆಯೇ ?

೧೦೨ ಹೇಳಿಲ್ಲವಾದರೆ ಶ್ರೀ ಶಿವರು ಅವನನ್ನು ಜೈನನೆಂದು ಯಾವ ಆಧಾರದಮೇಲೆ ನಿರ್ಣಯಿಸಿದರು ?

೧೦೩. ಈ ಅರಸನು ಜೈನನಾದ ಮೇಲೆ ಬುದ್ಧ ಸಂಪ್ರದಾಯದವನು ಹೇಗೆ ಆಗಲು ಸಾಧ್ಯ ?

೧೦೪. ಜೈನ ಮತ್ತು ಬೌದ್ಧ ಇವು ಭಿನ್ನ ಭಿನ್ನ ಸಂಪ್ರದಾಯಗಳಲ್ಲವೇ ?

೧೦೫. ವಿಶ್ವವನ್ನು ಜಯಿಸಿದ್ದರಿಂದ ಜಯಿನಃ ಎಂಬ ಪ್ರಶಸ್ತಿ ಬಂದು ಅದು ಅಪಭ್ರಂಶವಾಗಿ ಜೈನವಾದರೆ ಈ ಅರಸು ಪ್ರಶಸ್ತಿ ಕಾರಣದಿಂದ ಜೈನನೇ ? ಜಾತಿಯಿಂದ ಜೈನನಲ್ಲವೇ ?

೧೦೬. ಜಿನನು ಜಾತಿ ಧರ್ಮಗಳ ಕಾರಣದಿಂದ ಜೈನರಾದವರಿಗೆ ದೇವರಾಗುತ್ತಾನೆಯೆ? ಪ್ರಶಸ್ತಿಕಾರಣದಿಂದ ಜೈನರಾದವರಿಗೆ ದೇವರಾಗುವನೇ ?

೧೦೭. ಅವಂತಿಗೆ ಉಜ್ಜಯಿನಿ ಮತ್ತು ಉಜ್ಜೈರ್ಙ ಎಂಬ ಹೆಸರು ರಾಜನು ಜೈನನಾಗಿದ್ದುದರಿಂದ ಬಂದಿದೇ ?

೧೦೮. ಉಜ್ಜಯಿನಿ ಶಬ್ದವು ಸಂಸ್ಕೃತವಲ್ಲವೇ? ಉತ್ಕೃಷ್ಟಃ ಜಯಃ, ಯಸ್ಯಾಂ ಸಾ ಉಜ್ಜಯಿನೀ ಎಂದಾಗುವುದಿಲ್ಲವೇ ?

೧೦೯. ಉಜ್ಜೈರ್ಙ ಎಂಬುದು ಉಜ್ಜಯಿನೀ ಪದದ ಪರದೇಶೀಯರ ಉಚ್ಚಾರವ್ಯತ್ಯಾಸದಿಂದ ಆದದ್ದಲ್ಲವೇ ?

೧೧೦. ಶ್ರೌತಪಾಲನು ಶೈವ ಸಾಮ್ರಾಜ್ಯದ ಸಾಮ್ರಾಟನೆಂದೂ, ಬ್ರಾಹ್ಮಣ

ಭಕ್ತಿ, ಯಜ್ಞಶ್ರದ್ಧೆ ಮತ್ತು ಸ್ವರ್ಗ ಶಾಬರ ಭಾಷ್ಯಗಳಲ್ಲಿ ವಿಶ್ವಾಸವು ಳ್ಳವನೆಂದೂ ಕಾವ್ಯದಲ್ಲಿ ಹೇಳಿಲ್ಲವೇ ?

೧೧೧. ಜೈನಮತವು ಅವೈದಿಕವಲ್ಲವೇ ?

೧೧೨. ಇವನು ಅವೈದಿಕನಾಗಿದ್ದರೆ ಸಿದ್ಧೇಶ್ವರ ಲಿಂಗದ ಪೂಜೆಯನ್ನು ಮಾಡಲು ಹೇಗೆ ಹೋಗುತ್ತಿದ್ದನು ?

೧೧೩. ೨೪ ನೇ ಪುಟದಲ್ಲಿ ಕೊಟ್ಟಿರುವ ತ್ರಿಭುವನ ಮಲ್ಲನ ಚಿತ್ರದಲ್ಲಿ ರಾಜ ನಿಗೆ ಯೋಗ್ಯವಾದ ವೇಷಭೂಷಣಗಳೂ, ಭಾವಭಂಗಿಗಳೂ ಇವೆಯೇ ?

೧೧೪. ಇಲ್ಲದಿರುವಾಗ ಇದು ರಾಜನ ವಿಗ್ರಹವೆಂದು ಹೇಗೆ ಹೇಳುವುದು ?

೧೧೫. ಈ ವಿಗ್ರಹವನ್ನೇ ಕ್ಷೇತ್ರ ಪರಿಚಯದಲ್ಲಿ ಕ್ಷೇತ್ರಪಾಲ ಭೈರವನೆಂದು ಕರೆದಿಲ್ಲವೇ ?

೧೧೬. ನೂತನ ಉಜ್ಜಯಿನಿಯಲ್ಲಿ ರೇವಣ ಸಿದ್ಧನು ಸಿದ್ಧೇಶ್ವರ ಲಿಂಗವನ್ನು ಸ್ಥಾಪಿಸಿದನಾದರೆ ಮೂಲ ಮರುಳಾರಾಧ್ಯ ಲಿಂಗವನ್ನು ಅಲ್ಲಿ ಸ್ಥಾಪಿ ಸಿದನೆಂದು ಹೇಳುವ ಕಾವ್ಯಕ್ಕೆ ವಿರೋಧವಾಗುವುದಿಲ್ಲವೇ ?

೧೧೭. ಕೂಡಲ ಸಂಗಮದ ಮಠಾಧಿಕಾರಿಯು ಜಾತವೇದ ಮುನಿಯಾಗಿ ದ್ದಲ್ಲಿ ಅವನ ಶಿಷ್ಯ ಬಸವೇಶ್ವರನು ತನ್ನ ಗುರುವಿನ ಗುರುವನ್ನು ಎಲ್ಲಿಯೂ ಏಕೆ ಸ್ಮರಿಸಿಲ್ಲ ?

೧೧೮. ಹರಪನಹಳ್ಳಿ ಚಂದ್ರಕಾಂತನಿಗೆ ಚಂದ್ರಶೇಖರನೆಂದು ನಾಮಕರಣ ಮಾಡಿದ್ದನ್ನು ಗದ್ಯಕಾವ್ಯದಲ್ಲಿ ಏಕೆ ಹೇಳಿಲ್ಲ ?

೧೧೯. ಕಲಿಯುಗಾದಿಯ ಶ್ರೌತಪಾಲನು ಐತಿಹಾಸಿಕನೇ !

೧೨೦. ಕಲಿಯುಗಾದಿಯಲ್ಲಿ ಜೈನಮತವಿದ್ದುದಕ್ಕೆ ಆಧಾರವೇನು ?

೧೨೧. ಸಿದ್ಧಮುನಿಯ ಕಾಲದಲ್ಲಿ ಜೈನ ಮತ ಉದಿಸಿತೆಂದು ಈ ಕಾವ್ಯದಲ್ಲಿ ಹೇಳಿಲ್ಲವೇ ?

೧೨೨. ಕರ್ಣಾಟಕ ಉಜ್ಜಯಿನಿಯಲ್ಲಿರುವುದು ಮರುಳಾರಾಧ್ಯ ಲಿಂಗವಾಗಿ ರುವಾಗ ಹರಪನಹಳ್ಳಿಗೆ ಮರುಳಸಿದ್ಧೇಶ್ವರ ಸ್ವಾಮಿ ಹೇಗೆ ಬರಲು ಸಾಧ್ಯ.

೧೨೩. ಚತುರ್ಥರು ವೀರಶೈವರಾದ ಮೇಲೆ ತಮ್ಮ ಮುಂದಿನ ನಡವಳಿಕೆ

ಬಗ್ಗೆ ಕೇಳಿಕೊಂಡರೆಂಬುದಕ್ಕೆ ಕಾವ್ಯದಲ್ಲಿ ಆಧಾರವಿದೆಯೇ ?

೨೪. ಸೋದರ ಶಬ್ದವು ಸಾದರ, ಸಾದ ಆಗಿದ್ದರೆ ಆ ಸೋದರ, ಸಾದರ ಪದಗಳು ಎಲ್ಲಿಯಾದರೂ, ಯಾವಾಗಲಾದರೂ ಬಳಕೆಯಲ್ಲಿದ್ದವೆಂಬುದಕ್ಕೆ ಉದಾಹರಣೆ ದೊರೆಯುತ್ತದೆಯೇ ? ಕೊಡಿ.

೨೫. ನಿಮಗೆ ಸೋದರರೆಂಬ ಹೆಸರು ಶಾಶ್ವತವಾಗಲೀ, ಎಂದು ಮರುಳಸಿದ್ಧನು ಹೇಳಿದ್ದಕ್ಕೆ ಕಾವ್ಯದಲ್ಲಿ ಆಧಾರವನ್ನು ತೋರಿಸಿ? ಸೋದರರಂತೆ ನಡೆದುಕೊಳ್ಳಿರೆಂದ ಮಾತ್ರಕ್ಕೆ ಆ ಹೆಸರು ಬಂದಿತೆಂಬುವುದು ಯುಕ್ತಿಬದ್ಧವಾಗಿದೆಯೇ ?

೨೬. ಈ ಸಾದರಿಗೆ ಧರ್ಮ ಕಾರ್ಯಗಳ ಆಚರಣೆ ಪ್ರತ್ಯೇಕವಾಗಿ ಮಠ ಮಾಡಿದನೆಂದು ಗದ್ಯಕಾವ್ಯದಲ್ಲಿದೆಯೇ ?

೨೭. ಇಲ್ಲದ ಮೇಲೆ ಯಾವ ಆಧಾರದ ಮೇಲೆ ಇದನ್ನು ಕಲ್ಪಿಸಲಾಯಿತು?

೨೮. ಇವರಿಗೆ ಪ್ರತ್ಯೇಕ ಮಠವನ್ನು ಮಾಡಿದ್ದರಿಂದ ಒಗ್ಗಟ್ಟಿನಿಂದ ಇರಬೇಕೆಂದು ಹೇಳಿದ ಮರುಳಸಿದ್ಧನೇ ಪಂಚಮ ಮತ್ತು ಸಾದರಲ್ಲಿ ಭೇದ ಬೀಜವನ್ನು ಬಿತ್ತಿದಂತಾಗಲಿಲ್ಲವೇ ?

೨೯. ರೇವಣಸಿದ್ಧನು ಕ್ರಿ. ಪೂ. ೩೫೦ ರಲ್ಲಿ ಅವತರಿಸಿದನೆಂದರೆ ಯುಗಾದಿ ಅವತಾರ ಸುಳ್ಳೇ ?

೩೦. ಶಿವನು ಎಲ್ಲರಿಗೂ ಏಕಕಾಲದಲ್ಲಿ ಅವತರಿಸಲು ಹೇಳಿದಾಗ ಮರುಳಾರಾಧ್ಯನಂತೆ ಇವನೇಕೆ ಯುಗಾದಿಯಲ್ಲಿ ಅವತರಿಸಲಿಲ್ಲ ?

೩೧. ಯುಗಾದಿಯಲ್ಲಿಯೇ ಅವತರಿಸಿದನೆಂದು ಹೇಳುವ ಕಾವ್ಯಕ್ಕೆ ವಿರೋಧವಾಗುವುದಿಲ್ಲವೇ ?

೩೨. ಹೂಲಿ ಮರುಳಸಿದ್ಧನು ಸಿದ್ಧನಂಜೇಶನ ವಂಶದವನೆಂದು ಕಾವ್ಯ ಹೇಳಿದೆ. ಇಲ್ಲಿ ಗುರುಕುಲದವನೆಂದರೆ ಕಾವ್ಯಕ್ಕೆ ವಿರೋಧವಾಗುವುದಿಲ್ಲವೇ ?

೩೩. ಕವಿಚರಿತೆಕಾರರ ಅಭಿಪ್ರಾಯದಂತೆ ಕ್ರಿ. ಶ. ೧೬೫೦ ರಲ್ಲಿದ್ದ ಸಿದ್ಧನಂಜೇಶನು ಕ್ರಿ. ಶ. ೧೧೮೧ ರ ಮರುಳಸಿದ್ಧನಿಗೆ ಪಟ್ಟಗಟ್ಟಲು ಸಹಾಯ ಕೊಡುವುದು ಹೇಗೆ ಸಮಂಜಸ.

೧೩೪. ಲಕ್ಷ್ಮೇಶ್ವರದ ಶಾಸನದಲ್ಲಿ ಹೇಳಿರುವಂತೆ, ಹೂಲಿ ಮರುಳಸಿದ್ಧನು ರೇಣುಕನ ಅವತಾರವಾಗಿರುವಾಗ ಉಜ್ಜಯಿನೀ ಪೀಠಕ್ಕೆ ಬಂದ ನೆಂಬುದು ಹೇಗೆ ಸಂಗತವಾಗುತ್ತದೆ? ಒಂದು ವೇಳೆ ಬಂದಿದ್ದರೆ ಆ ಶಾಸನದಲ್ಲಿ ಅದನ್ನು ಹೇಳಿಯೇ ಹೇಳುತ್ತಿದ್ದರಲ್ಲವೇ?

೧೩೫. ಮಕ್ಕಳ ಫಲವನ್ನು ಬೇಡುವುದು ಬಂಜೆತನ ನೀಗಲು ಮತ್ತು ವಂಶ ವನ್ನುದ್ಧರಿಸಲೆಂಬುದು ಸುವಿದಿತವಲ್ಲವೇ?

೧೩೬. ಕೆಲವು ದಿನಗಳ ತನಕ ಮಗನಾದಂತೆ ಲೀಲೆ ತೋರಿಸಿದ ಮಾತ್ರಕ್ಕೆ ಬಂಜೆತನ ನೀಗಿತೇ? ವಂಶೋದ್ಧಾರವಾಯಿತೇ?

೧೩೭. ಮೂಡೂರೇ ಕಗ್ಗಲ್ಲು ಪುರವಾದಲ್ಲಿ ಆ ಗೌಡನು ಕಟ್ಟಿಸಿದ ಗುಡಿ ಅಥವಾ ಅದರ ಅವಶೇಷಗಳೇನಾದರೂ ಈಗಲೂ ಇವೆಯೇ?

೧೩೮. ಆ ಗುಡಿಯಲ್ಲಿ ಸ್ಥಾಪಿಸಿದ ಶಿವಲಿಂಗವೇನಾದರೂ ಈಗ ಇದೆಯೇ?

೧೩೯. ಸೋಮೇಶ್ವರನ ವಿಗ್ರಹವನ್ನು ಗಜಪತಿ ಮಹೇಂದ್ರನು ಸ್ಥಾಪಿಸಿದ ನೆಂದು ಎಲ್ಲಿ ಹೇಳಿದೆ?

೧೪೦. ಸಿದ್ಧಮಲ್ಲೇಶನ ಕಾಲದ ಗಜಪತಿಯು ತನಗೆ ಸಂಬಂಧವಿಲ್ಲದ, ನೋಡದ, ಆದಿಮರುಳಸಿದ್ಧನ ಕಾಲದ ಸೋಮೇಶ್ವರನ ವಿಗ್ರಹವನ್ನು ಸ್ಥಾಪಿಸಿದನೆಂದರೆ ಅದು ಸಮಂಜಸವೇ?

೧೪೧. ಕಾಲಕಾಲದಲ್ಲಿ ಹುಟ್ಟಿದ ಸ್ಫೂರ್ತಿಯಿಂದ ಹೊರಹೊಮ್ಮಿದ ಶರಣರ ಅನುಭವ ವಾಣಿಗಳೇ ವಚನಗಳಲ್ಲವೇ?

೧೪೨. ಚನ್ನ ವೀರಾಂಬೆಯು ಹೂಲೀ ಸಿದ್ಧನಂಜೇಶನ ಹೆಂಡತಿಯೇ? ಗುರು ರಾಜ ಚಾರಿತ್ರಕರ್ತ ಸಿದ್ಧನಂಜೇಶನ ಹೆಂಡತಿಯೇ?

೧೪೩. ಗುರುರಾಜ ಚಾರಿತ್ರದಲ್ಲಿ ಸಿದ್ಧನಂಜೇಶನು ತನ್ನ ಗುರು ಸಿದ್ಧನಂಜೇ. ಶನು ತನ್ನ ಸತಿಗೆ ಹೇಳಿದಂತೆ ತಾನು ಬರೆಯುವುದಾಗಿ ಹೇಳಿಲ್ಲವೇ?

೧೪೪. ಹೀಗಿರುವಾಗ ಆ ಸಿದ್ಧನಂಜೇಶನು ಹೇಳಿರುವುದಕ್ಕೂ, ಈ ನಂಜೇಶನು ಹೇಳಿರುವುದಕ್ಕೂ ಇಷ್ಟು ವ್ಯತ್ಯಾಸವಾಗಲು ಕಾರಣವೇನು?

೧೪೫. ಪಾಶುಪತ ತಂತ್ರದಲ್ಲಿ, ಸುಪ್ರಭೇದಾಗಮದಲ್ಲಿ ಮರುಳಾರಾಧ್ಯ ಚರಿ ತ್ರೆಯನ್ನು ನಂದೀಶ ಕವಿ ಹೇಳಿದಂತೆ ಹೇಳಿದೆಯೇ?

೧೪೬. ಹೇಳಿಲ್ಲವಾದರೆ ಈ ವಿಜಯ ಕಾವ್ಯಕ್ಕೆ ಆಧಾರಗ್ರಂಥವಾವುದು?

೧೪೭. ಹೇಳಿರುವುದಾದರೆ ಈ ವರೆಗೂ ಅದು ಗುಪ್ತವಾಗಿ ಏಕೆ ಇತ್ತು ?

೧೪೮. ಈ ಕಾವ್ಯದಲ್ಲಿ ಮುಖ್ಯವಾಗಿ ಹೇಳಬೇಕಾಗಿರುವುದು ಮರುಳಸಿದ್ಧರ ಚರಿತ್ರೆಯಾದಲ್ಲಿ ಇದಕ್ಕೆ ಅಮುಖ್ಯರಾದ ಮರುಳಾರಾಧ್ಯರ ಹೆಸರನ್ನೇಕೆ ಇಡಲಾಗಿದೆ.

೧೪೯. ವಿಷ್ಣುವಿನ ಅವತಾರಿಯಾದ ಬುದ್ಧನು ಬೌದ್ಧಮತವನ್ನು ಬೆಳೆಸಿದನೆ? ವೈಷ್ಣವ ಮತವನ್ನು ಬೆಳೆಸಿದನೇ ?

೧೫೦. ಬೌದ್ಧಮತವನ್ನು ಬೆಳೆಸಿದನಾದರೆ ವೈಷ್ಣವ ಮತವನ್ನು ಬೆಳೆಸಲು ಹೇಳದ ಶಿವನಾಜ್ಞೆಗೆ ವಿರೋಧ ಮಾಡಿದಂತಾಗಲಿಲ್ಲವೇ ?

೧೫೧. ಬುದ್ಧನಿಗೂ ವೈಷ್ಣವ ಮತಕ್ಕೂ ಯಾವ ಸಂಬಂಧವೂ ಬೇಕಾಗಿಲ್ಲವಷ್ಟೆ. ಹೀಗಿರುವಾಗ ಶಿವನು ಅವನಿಗೆ ವೈಷ್ಣವ ಮತವನ್ನು ಬೆಳೆಸಲು ಹೇಳಿದ್ದರಲ್ಲಿ ಔಚಿತ್ಯವಿದೆಯೇ ?

೧೫೨. ಶಿವಗಣರನ್ನು ಬುದ್ಧಾವತಾರದಲ್ಲಿ ವಿಷ್ಣುವಿನ ಸಹಾಯಕರಾಗಿ ಶಿವನು ಕಳುಹಿಸಿದ್ದು ಉಚಿತವೇ ?

೧೫೩. ಬೌದ್ಧಮತವು ಅವೈದಿಕವಲ್ಲವೇ ?

೧೫೪. ಶೈವಧರ್ಮವು ವೈದಿಕವಲ್ಲವೇ ?

೧೫೫. ಶಿವನು ಅವೈದಿಕ, ವೈದಿಕ ಎರಡು ಮತಗಳನ್ನೂ ಬೆಳೆಸಲು ವ್ಯವಸ್ಥೆ ಮಾಡಿದನೆಂದರೆ ಅಸಂಬದ್ಧವಾಗುವುದಿಲ್ಲವೇ ?

೧೫೬. ಅವೈದಿಕ ಮತಕ್ಕೂ, ಶಿವಗಣರಿಗೂ ಹೇಗೆ ಸಂಬಂಧವಾಗುತ್ತೆ ?

೧೫೭. ಉಜ್ಜಯಿನಿಯ ಮಹಾಕಾಳೇಶ್ವರ ಲಿಂಗದಿಂದ ಇಷ್ಟಾರ್ಥ ಸಿದ್ಧಿಯಾದಂತೆ ಇತರ ಲಿಂಗಗಳಿಂದ ಇಷ್ಟಾರ್ಥ ಸಿದ್ಧಿಯಾಗುವುದಿಲ್ಲವೇ ?

೧೫೮. ಆಗುವುದಾದರೆ ಈ ಕಾರಣದಿಂದ ಬಂದ ಸಿದ್ಧೇಶ್ವರ ಎಂಬ ಹೆಸರು ಎಲ್ಲಾ ಲಿಂಗಗಳಿಗೂ ಬರಬೇಕಲ್ಲವೇ ?

೧೫೯. ಈ ಹೆಸರು ಈ ಕಾರಣದಿಂದ ಈ ಲಿಂಗಕ್ಕೆ ಬಂದಿತೆಂಬುದು ಸಮಂಜಸವೇ ?

೧೬೦. ಮಹಾಕಾಲ ಲಿಂಗಕ್ಕೆ ಸಿದ್ಧೇಶ್ವರ ಎಂಬ ಹೆಸರಿದ್ದಿತಾದರೆ ಯಾವುದಾದರೂ ಗ್ರಂಥದಲ್ಲಿ ಇದರ ಉಲ್ಲೇಖನವಿದೆಯೇ ? ಇದ್ದರೆ ತೋರಿಸಿ.

೧೬೧. ವ್ಯಾಸನು ಮರುಳಾರಾಧ್ಯರ ಸ್ತೋತ್ರ ಮಾಡಿದ ಬಗ್ಗೆ ಮತ್ತಾವುದಾದರೂ ಆಧಾರವಿದೆಯೇ?

೧೬೨. ವ್ಯಾಸನ ಸೂತ್ರಗಳಿಗೆ ಮರುಳಾರಾಧ್ಯರಿಂದ ಭಾಷ್ಯ ಬರೆಯಲು ಸಾಧ್ಯವಾಗದಿದ್ದಲ್ಲಿ ವ್ಯಾಸನಿಗಿಂತ ಅವರು ಕಡಿಮೆ ಪಾಂಡಿತ್ಯವುಳ್ಳವರಾಗುವುದಿಲ್ಲವೇ?

೧೬೩. ಶಿವನು ನೀಲಕಂಠನಾಗಿ ಬಂದು ಭಾಷ್ಯವನ್ನು ಬರೆಯುವ ತನಕ ಶಕ್ಯವಿದ್ದ ಮಟ್ಟಿಗೆ ಬೋಧಿಸೆಂದು ಹೇಳಿದನಾದರೆ ವ್ಯಾಸನು ತನಗೇ ತಿಳಿಯದ ಸೂತ್ರಗಳನ್ನು ತಾನು ಹೇಗೆ ರಚಿಸಿದನು?

೧೬೪. ವ್ಯಾಸನು ಪುರಾಣಗಳನ್ನು ರಚಿಸಿದ್ದು ವ್ಯಾಸಕಾಶಿಯಲ್ಲೋ? ಬದರಿಕಾಶ್ರಮದಲ್ಲೋ?

೧೬೫. ಬದರಿಕಾಶ್ರಮದಲ್ಲಿ ಎಂಬುದಕ್ಕೆ ಆಧಾರವೇನು?

೧೬೬. ಕಲಿಯುಗಾದಿಯಲ್ಲಿ ಮಹಿಷಮಂಡಲ (ಮೈಸೂರು) ವಿದ್ದುದಕ್ಕೂ ಅಲ್ಲಿ ರಾಜವಂಶವಿದ್ದುದಕ್ಕೂ ಆಧಾರವೇನು?

೧೬೭. ಶಿಲೆಯೋಳ್ ಸೃಷ್ಟಿಸಿದ ಶಿವಸೂತ್ರಕ್ಕೆ ಭಾಷ್ಯವನ್ನು ಬರೆದ ಮರುಳಾರಾಧ್ಯನು ವ್ಯಾಸಸೂತ್ರಗಳಿಗೆ ಭಾಷ್ಯ ಬರೆಯಲು ಏಕೆ ಅಸಮರ್ಥನಾದನು? ಆ ಶಿವಸೂತ್ರ ಈಗ ಇದೆಯೇ? ಅದನ್ನು ಶಿಲೆಯಲ್ಲಿ ಸೃಷ್ಟಿಸಿದವರಾರು?

೧೬೮. ಹುತ್ತದಲ್ಲಿ ಸುಪ್ತಾವಸ್ಥೆಯಲ್ಲಿದ್ದಾಗ ಬರೆಯಲು ಸಾಧ್ಯವೇ?

೧೬೯. ಕಾಶ್ಮೀರದಲ್ಲಿ ಸರಸ್ವತೀ ಪೀಠವನ್ನು ಮರುಳಾರಾಧ್ಯ ಸ್ಥಾಪಿಸಿದ್ದಕ್ಕೆ ಮತ್ತೆಲ್ಲಿಯಾದರೂ ಆಧಾರ ದೊರೆಯುತ್ತದೆಯೇ?

೧೭೦. ಮರುಳಾರಾಧ್ಯರ ಉತ್ತರಾಧಿಕಾರಿಯು ಲಿಂಗದಿಂದ ಪ್ರಕಟವಾಗದೆ ಗೌರಿಕುಂಡದಲ್ಲೇಕೆ ಪ್ರಕಟವಾದನು?

೧೭೧. ಈ ಮುಕ್ತಿಮುನಿಗೆ ಪಟ್ಟವಾಗಿ ಮೆರವಣಿಗೆ, ಭಾಷಣ, ಕಾಣಿಕೆ ಸಮರ್ಪಣೆ ಎಲ್ಲಾ ಆದ ಮೇಲೆ ಗುರುಮುದ್ರೆ ಕೊಟ್ಟನೆಂದರೆ ವಿಧಿಗೆ ವಿರೋಧವಲ್ಲವೇ?

೧೭೨. ಇವೆಲ್ಲಾ ಆಗುವ ತನಕ ಗುರುಮುದ್ರೆ ಕೊಟ್ಟಿರಲಿಲ್ಲವಾದರೆ ಅದಿಲ್ಲದೆ ಅವನಿಗೆ ಪಟ್ಟಾಧಿಕಾರವು ಹೇಗೆ ಸಿಂಧುವಾಯಿತು.

೧೭೩. ಶಿವನು ಪಂಚಾಚಾರ್ಯರಿಗೂ, ವಿಷ್ಣುವಿಗೂ ಅವತರಿಸಲು ಏಕ ಕಾಲದಲ್ಲಿ ಹೇಳಿದನಷ್ಟೆ. ವಿಷ್ಣುವು ಆ ಕೂಡಲೇ ಅವತರಿಸದೆ ಸಾವಿರ ವರುಷಗಳಿಗಿಂತಲೂ ಹೆಚ್ಚಾಗಿ ನಿದಾನವೇಕೆ ಮಾಡಿದನು ?

೧೭೪. ಶಿವಮುನಿಗಳು ಬೌದ್ಧ ಮತವನ್ನು ಖಂಡಿಸದೆ ಜೈನಮತವನ್ನೇಕೆ ಖಂಡಿಸಿದರು ?

೧೭೫. ಈ ಎರಡೂ ಅವೈದಿಕ ಮತಗಳಲ್ಲವೇ ?

೧೭೬. ನೀಲಕಂಠರು ಗೋಕರ್ಣ ಲಿಂಗದಲ್ಲಿ ಉದ್ಭವಿಸಿದ್ದಕ್ಕೆ ಆಗಮ ಪ್ರಮಾಣವಿದೆಯೇ ? ತೋರಿಸಿ.

೧೭೭. ವ್ಯಾಸನು ಶಿವನನ್ನು ಕೇಳಿದ್ದು ಮರುಳಾರಾಧ್ಯರ ಕಾಲದಲ್ಲಿ. ಶಿವನು ನೀಲಕಂಠನಾಗಿ ಅವತರಿಸಿದ್ದು ಶಾಂತ ಮುನಿಯ ಕಾಲದಲ್ಲಿ. ಅಂದರೆ ಸಾವಿರಾರು ವರ್ಷಗಳ ಮೇಲೆ ಅಲ್ಲಿಯ ವರೆಗೆ ವ್ಯಾಸನು ಇದ್ದನೆಂಬುದಕ್ಕೆ ಆಧಾರವೇನು ?

೧೭೮. ನೀಲಕಂಠರ ಕಾಲದಲ್ಲಿ ರಾಷ್ಟ್ರಕೂಟ ವಂಶದ ಯಾವ ರಾಜನಿದ್ದನು?

೧೭೯. ಈಗ ನೀಲಕಂಠರ ಪರಂಪರೆ ಎಲ್ಲಿ ಇದೆ ?

೧೮೦. ನೀಲಕಂಠರು ಗೋವಿಂದ ಪಂಡಿತರಿಗೆ ಅದ್ವೈತವನ್ನು ಬೋಧಿಸಿದರೇ ? ಶಕ್ತಿ ವಿಶಿಷ್ಟಾದ್ವೈತವನ್ನು ಬೋಧಿಸಿದರೇ ?

೧೮೧. ಶಕ್ತಿ ವಿಶಿಷ್ಟಾದ್ವೈತವಾದರೆ ಗೋವಿಂದ ಪಂಡಿತರು ಶಂಕರಾಚಾರ್ಯರಿಂದ ಅದ್ವೈತವನ್ನೇಕೆ ಪ್ರಚಾರ ಮಾಡಿಸಿದರು ?

೧೮೨. ಅದ್ವೈತವನ್ನೇ ಬೋಧಿಸಿದ್ದಾದರೆ ನೀಲಕಂಠರು ತಮ್ಮ ಮತವನ್ನು ತಾವೇ ತಿರಸ್ಕರಿಸಿದಂತಾಗಲಿಲ್ಲವೇ ?

೧೮೩. ನೀಲಕಂಠರ ಭಾಷ್ಯಗಳೂ,ವ್ಯಾಖ್ಯಾನಗಳೂ ಈಗ ಉಪಲಬ್ಧವಿವೆಯೇ?

೧೮೪. ರೇವಣಸಿದ್ಧನು ಚಂದ್ರಮೌಳೀಶ್ವರಲಿಂಗವನ್ನು ಶಂಕರನಿಗೆ ಶರೀರದಲ್ಲಿ ಧರಿಸಲು ಕೊಟ್ಟನೇ? ಸ್ಥಾವರಲಿಂಗದಂತೆಇಟ್ಟು ಪೂಜಿಸಲು ಕೊಟ್ಟನೇ?

೧೮೫. ಶರೀರದಲ್ಲಿ ಧರಿಸಲು ಕೊಟ್ಟನಾದರೆ ಅವರ ಪರಂಪರೆಯವರು ಏಕೆ ಇಟ್ಟು ಪೂಜಿಸುತ್ತಾರೆ.

೧೮೬. ಇಟ್ಟು ಪೂಜಿಸಲು ಕೊಟ್ಟನಾದರೆ ಲಿಂಗಧಾರಣೆಯಲ್ಲಿ ರೇವಣಸಿದ್ಧನಿಗೆ ನಂಬಿಕೆ ಇರಲಿಲ್ಲವೇ ?

೧೪೭. ಇರಲಿಲ್ಲವಾದರೆ ಅವರ ವೀರಶೈವ ಗುರುತ್ವಕ್ಕೆ ಲೋಪವಲ್ಲವೇ ?

೧೪೮. ಶಾಂತಮುನಿ, ಗೋವಿಂದಪಂಡಿತ, ಶಂಕರಾಚಾರ್ಯ ಇವರ ಪ್ರಚಾರಾತಿಶಯದಿಂದ ಜೈನ, ಬೌದ್ಧ ಧರ್ಮಗಳು ಕಳೆಗುಂದಿದವಾದರೆ ಇದರಿಂದ ಈ ಮೂವರು ಶಿವನಾಜ್ಞೆಯನ್ನು ತಿರಸ್ಕರಿಸಿದಂತಾಗಲಿಲ್ಲವೇ ?

೧೪೯. ಬುದ್ಧಾವತಾರವನ್ನು ಮಾಡಲು ಹೇಳಿ, ಅದಕ್ಕೆ ಶಿವಗಣರ ಸಹಾಯವನ್ನು ಕಲ್ಪಿಸಿದವನು ಶಿವನಲ್ಲವೇ ?

೧೫೦. ಭವಭೂತಿ ಕವಿಯು ತಾನು ಬರೆದಿರುವ ಗ್ರಂಥಗಳಲ್ಲಿ ತಾನು ಪೀಠಾಧಿಪತಿಯೆಂದು ಹೇಳಿದ್ದಾನೆಯೇ ?

೧೫೧. ಭವಭೂತಿಗೆ ರಾಮನ ಬಗ್ಗೆ ಭಕ್ತಿ ಇದ್ದುದರಿಂದ ಉತ್ತರರಾಮ ಚರಿತೆಯನ್ನು ರಚಿಸಿದನಲ್ಲವೇ ?

೧೫೨. ಉಜ್ಜಯಿನೀ ರಾಜನಿಗೆ ಮರುಳಾರಾಧ್ಯರು ವೀರಶೈವ ದೀಕ್ಷೆಯನ್ನು ಮಾಡಿರಲಿಲ್ಲವೇ ?

೧೫೩. ಜೈನ ಬೌದ್ಧ ಮತಗಳನ್ನೆಲ್ಲಾ ನಷ್ಟಗೊಳಿಸಿದ ಗುರುಗಳು ಆ ಪೀಠದಲ್ಲಿದ್ದಾಗ ತಮ್ಮ ಊರಿನಲ್ಲಿಯ ರಾಜನನ್ನು ಜೈನಧರ್ಮದಿಂದ ವೀರಶೈವ ಧರ್ಮಕ್ಕೆ ತೆಗೆದುಕೊಳ್ಳಲು ಅಸಮರ್ಥರಾದರೆ ?

೧೫೪. ಹಿಂದೆ ಈ ದೊರೆಯ ವಂಶದವರು ಲಿಂಗಧಾರಿಗಳಾಗಿದ್ದರಷ್ಟೆ. ಇವರಿಗೆ ಯಾವಾಗ ಲಿಂಗಧಾರಣೆ ತಪ್ಪಿತು ? ಕಾರಣವೇನು ?

೧೫೫. ರೇವಣಸಿದ್ಧರ ಅಪ್ಪಣೆಯಂತೆ ಆದಿ ಮರುಳಸಿದ್ಧನು ಕಲ್ಯಾಣದ ದೊರೆಯನ್ನು ಕಾಣುವುದಕ್ಕಿಂತ ಮುಂಚೆ ಹೂಲಿಯ ಮುಕ್ತಿ ಮುನಿಯಲ್ಲಿ ಏಕೆ ಆಲೋಚಿಸಲಿಲ್ಲ ?

೧೫೬. ರೇವಣಸಿದ್ಧರ ಅಪ್ಪಣೆಯಂತೆ ಸೋಮೇಶ್ವರನಿಗೆ ಲಿಂಗಧಾರಣೆಯಾಯಿತೇ ?

೧೫೭. ಆಗಿದ್ದರೆ ಗದ್ಯಕಾವ್ಯದಲ್ಲಿ ಏಕೆ ಹೇಳಿಲ್ಲ. ಪದ್ಯಕಾವ್ಯದಲ್ಲಿದ್ದರೆ ತಿಳಿಸಿ.

೧೫೮. ರೇವಣಸಿದ್ಧರು ಕಲ್ಯಾಣದ ದೊರೆಯ ಸಹಾಯದಿಂದ ಉಜ್ಜಯಿನಿ ಕ್ಷೇತ್ರವನ್ನು ನಿರ್ಮಿಸಬೇಕೆಂತಲೂ, ಓರಂಗಲ್ ದೊರೆಯ ಸಹಾಯದಿಂದ ಮಠ, ಮಂದಿರ, ವಿಗ್ರಹಗಳನ್ನು ಸ್ಥಾಪಿಸಬೇಕೆಂತಲೂ ಹೇಳಿರಲಿಲ್ಲವೇ ?

೯೯. ಇದನ್ನು ಮೀರಿ ಕ್ಷೇತ್ರ, ಮಠ, ಮಂದಿರಗಳ ನಿರ್ಮಾಣ ಮತ್ತು ವಿಗ್ರಹಗಳ ಸ್ಥಾಪನೆ ಎಲ್ಲವನ್ನೂ ಕಲ್ಯಾಣದ ದೊರೆಯ ಸಹಾಯದಿಂದಲೇ ಮಾಡಿಸಿದ ಕಾರಣವೇನು ?

೧೦೦. ಉಜ್ಜಯಿನಿಯಲ್ಲಿ ಮಠ ಬೇರೆ, ದೇವಸ್ಥಾನ ಬೇರೆಯಲ್ಲವೇ ?

೧೦೧. ಉಜ್ಜಯಿನಿ ಮಠದ ಒಳಗೆ ನೋಡಬೇಕೆಂಬಲ್ಲಿ ಮಠ ಶಬ್ದವು ದೇವಸ್ಥಾನವಾಚಕವಾಗಿಲ್ಲವೇ ?

೧೦೨. ಮಠವು ಪ್ರತ್ಯೇಕವಾಗಿದ್ದೂ ಸಹ ದೇವಸ್ಥಾನಕ್ಕೆ ಮಠವೆಂದು ಕರೆಯಲು ಕಾರಣವೇನು ?

೧೦೩. ಮತ್ತಾರಾದರೂ ಎಲ್ಲಿಯಾದರೂ ದೇವಸ್ಥಾನವನ್ನು ಮಠವೆಂದು ಕರೆದಿರುವ ಉದಾಹರಣೆ ಇದೆಯೇ ?

೧೦೪. ಈ ಉಜ್ಜಯಿನಿಯಲ್ಲಿ ಸ್ಥಾಪಿತವಾದದ್ದು ಮರುಳಾರಾಧ್ಯ ಲಿಂಗವಲ್ಲವೇ ?

೧೦೫. ಸಂಕ್ಷೇಪ ಪರಿಚಯದಲ್ಲಿ ಮತ್ತು ಇನ್ನೂ ಅನೇಕ ಕಡೆಗಳಲ್ಲಿ ಮರುಳಸಿದ್ಧೇಶ್ವರ ಎಂದು ಕರೆಯಲು ಕಾರಣವೇನು ?

೧೦೬. ಹಾಗಾದರೆ ಮರುಳಸಿದ್ಧ, ಮರುಳಾರಾಧ್ಯ ಪದಗಳು ಪರ್ಯಾಯ ವಾಚಕಗಳೇ ?

೧೦೭. ಅಲ್ಲಿ ಸ್ಥಾಪಿಸಲ್ಪಟ್ಟ ೧೪ ಜನ ಗುರುಗಳ ವಿಗ್ರಹಗಳು ಈಗಲೂ ಅಲ್ಲಿ ಇವೆಯೇ ?

೧೦೮. ಇವೆಯಾದರೆ ಈಗ ದೇವಸ್ಥಾನದಲ್ಲಿರುವ ೧೪ ವಿಗ್ರಹಗಳೇ ಆ ಗುರುಗಳ ವಿಗ್ರಹಗಳೇನು ?

೧೦೯. ಹೌದಾದರೆ ಈಗಲೂ ಆ ೧೪ ಜನ ಗುರುಗಳ ಹೆಸರಿನ ಮೇಲೆ ಜನರು ಅವುಗಳನ್ನು ಕರೆಯುತ್ತಿದ್ದಾರೆಯೇ ?

೧೧೦. ಕರೆಯುತ್ತಿರುವುದಾದರೆ ಈಗಲೂ ಆ ವಿಗ್ರಹಗಳ ಮೇಲೆ ಬರೆದು ಹಾಕಿರುವ ಹಲಗೆಗಳಲ್ಲಿ ಈ ಗುರುಗಳ ಹೆಸರುಗಳಿರದೆ ಬೇರೆ ಹೆಸರುಗಳಿರಲು ಕಾರಣವೇನು ?

೧೧೧. ಬೇರೆ ಹೆಸರುಗಳಿರುವುದನ್ನು ನಾನು ಇದೇ ತಿಂಗಳು ದಿನಾಂಕ ೫ ರಲ್ಲಿ ಸ್ವತಃ ನೋಡಿರುತ್ತೇನೆ. ಅಲ್ಲಿರುವ ಹೆಸರುಗಳು:– ೧) ಪಾಪ

ವಿಮೋಚನ ೨) ಭಕ್ತಿಭೂಷಣ ೩) ಗೋಪಾಲಸ್ವಾಮಿ ೪) ರೇವಣ ಸಿದ್ಧ ೫) ಜಕ್ಕಣಾಚಾರಿ ೬) ಏಕೋರಾಮ ೭) ಪಂಡಿತಾರಾಧ್ಯ ೮) ವಿನಾಯಕ ೯) ವಿಶ್ವಾರಾಧ್ಯ ೧೦) ಮಳೆಯ ಮಲ್ಲಿಕಾರ್ಜುನ ೧೧) ಶಿವಾನಂದರಾಜ ೧೨) ವೀರಭದ್ರ ೧೩) ಸುಜ್ಞಾನೇಶ್ವರ ೧೪) ಮುಕ್ತಿನಾಥ. ಹೀಗಿರಲು ಕಾರಣವೇನು ?

೨೧೨. ೧೪ ಗುರುವಿಗ್ರಹಗಳು ಅಲ್ಲಿವೆಯಾದರೆ ಸಂಕ್ಷೇಪ ಪರಿಚಯದಲ್ಲಿ ಏಕೆ ಹೇಳಿಲ್ಲ.

೨೧೩. ಹೇಳದಿರುವಾಗ ಆ ಗುರುವಿಗ್ರಹಗಳು ಅಲ್ಲಿ ಇಲ್ಲವೆಂದು ಅರ್ಥವಾಗುವುದಿಲ್ಲವೇ ?

೨೧೪. ಇಲ್ಲವಾದ ಮೇಲೆ ಈ ಕಾವ್ಯದ ಪ್ರಾಮಾಣ್ಯದ ಬಗ್ಗೆ ಸಂಶಯ ಹುಟ್ಟುವುದಿಲ್ಲವೇ ?

೨೧೫. ಕಲ್ಯಾಣದ ದೊರೆಯು ಮರುಳಸಿದ್ಧನಿಗೆ ಉಂಬಳಿ ಹಾಕಿದ್ದು ೧೨೦, ಮಠಗಳನ್ನೋ ? ಗ್ರಾಮಗಳನ್ನೋ ?

೨೧೬. ಈಗ ಅವು ಇವೆಯೋ ? ಇಲ್ಲವೇ ?

೨೧೭. ಇಲ್ಲವಾದರೆ ಹಿಂದೆ ಇದ್ದ ಬಗ್ಗೆಯಾದರೂ ಏನಾದರೂ ಆಧಾರವಿದೆಯೋ ?

೨೧೮. ಹೂಲಿ ಮರುಳಸಿದ್ಧನು ಸಿದ್ಧನಂಜೇಶ್ವರನ ವಂಶದವನಾದರೆ ಅಥವಾ ಗುರುಕುಲದವನಾದರೆ ಆ ಸಿದ್ಧನಂಜೇಶ್ವರನು ಕ್ರಿ. ಶ. ೧೬೫೦ ರಲ್ಲಿ ಇದ್ದನೆಂದು ಕವಿಚರಿತೆಯು ಹೇಳಿಲ್ಲವೇ ?

೨೧೯. ಕ್ರಿ. ಶ. ೧೬೫೦ ರಲ್ಲಿದ್ದ ಸಿದ್ಧನಂಜೇಶ್ವರನು ಹೂಲಿ ಮರುಳಸಿದ್ಧನ ಕಾಲ ಕ್ರಿ. ಶ. ೧೦೮೧ ರಲ್ಲಿದ್ದನೆಂಬುದು ಹೇಗೆ ?

೨೨೦. ಅವನ ಕಾಲ ೧೬೫೦ ಅಲ್ಲವಾದರೆ ಹೂಲಿ ಮರುಳಸಿದ್ಧನ ಕಾಲ ಕ್ರಿ. ಶ. ೧೦೮೧ ರಲ್ಲಿದ್ದನೇ ?

೨೨೧. ಈ ಸಿದ್ಧನಂಜೇಶನು ಹೇಳಿದ್ದನ್ನೇ ನಂದೀಶನು ಬರೆದನೆಂದರೆ ಇವರಿಬ್ಬರೂ ಒಂದೇ ಕಾಲದವರಾಗುವುದಿಲ್ಲವೇ ?

೨೨೨. ಹಾಗಾದರೆ ಕ್ರಿ. ಶ. ೧೦೮೧ ರಲ್ಲಿದ್ದವರು ಅಲ್ಲಿಂದ ಮುಂದಿನ ಅಂದರೆ ೨೫ ನೇ ಗುರುಗಳವರೆಗಿನ (೧೫ ನೇ ಶತಮಾನದವರೆಗಿನ) ಚರಿತೆ

ಯನ್ನು ಇನ್ನೂ ನಡೆಯದಿರುವುದನ್ನು ಹೇಗೆ ಹೇಳಿದನು ? ಮತ್ತು ಹೇಗೆ ಬರೆದನು ?

೨೨೩. ಹೇಳಿದನು, ಬರೆದನು, ಎಂದರೆ ಈ ಕಾವ್ಯ ಅಪ್ರಮಾಣವಾಗುವುದಿಲ್ಲವೇ ? ಕೃತ್ರಿಮ ಸೃಷ್ಟಿಯೆಂದಾಗುವುದಿಲ್ಲವೇ ?

೨೨೪. ಗಜಪತಿ ಮಹೇಂದ್ರನಿಗೆ ದೀಕ್ಷೆ ಕೊಟ್ಟವನೂ, ಮಳೆಯ ಮಲ್ಲೇಶ್ವರನೆಂದು ಹೆಸರು ಪಡೆದವನೂ, ಗುರುರಾಜ ಚಾರಿತ್ರದಲ್ಲಿ ವಿಶ್ವೇಶ್ವರಾಚಾರ್ಯನ ಶಿಷ್ಯ ಸಿದ್ಧಮಲ್ಲೇಶನಲ್ಲವೇ ?

೨೨೫. ಆದ್ದರಿಂದ ಇಲ್ಲಿರುವ ಸಿದ್ಧಮಲ್ಲೇಶನು ಅವನೇ ಅಲ್ಲವೇ ?

೨೨೬. ಅಲ್ಲಿ ಇವನು ಉಜ್ಜಯಿನೀ ಪೀಠಾಧಿ ಪತಿಯಾಗಿದ್ದನೆಂದು ಏಕೆ ಹೇಳಿಲ್ಲ ?

೨೨೭. ಹೀಗಿರುವಾಗ ಈ ಸಿದ್ಧಮಲ್ಲನು ಉಜ್ಜಯಿನೀ ಪೀಠಾಧಿಪತಿಯೆಂದು ನಂಬುವುದು ಸಾಧ್ಯವೇ ?

೨೨೮. ಸಾಧ್ಯವಿಲ್ಲದಿರುವಾಗ ಇವನ ವರದಿಂದ ಹುಟ್ಟಿದ ಸಿಂದೋಗಿ ಮಾದಿಗ ಮರುಳಸಿದ್ಧನ ಕಥೆಯನ್ನಾದರೂ ನಂಬುವುದು ಹೇಗೆ ?

೨೨೯. ಬಸವ, ಅಲ್ಲಮ ಮೊದಲಾದವರು ಸ್ವತಃ ವಚನಗಳನ್ನು ರಚಿಸಲಿಲ್ಲವೇ ?

೨೩೦. ರಚಿಸಲಿಲ್ಲವಾದರೆ ಈ ಬಗ್ಗೆ ಮತ್ತಾವುದಾದರೂ ಆಧಾರವಿದೆಯೇ ?

೨೩೧. ಆಧಾರವಿಲ್ಲವಾದರೆ ಇದನ್ನು ನಂಬುವುದೆಂತು ?

೨೩೨. ಈ ಕಾವ್ಯದಲ್ಲಿ ೨೫ ಗುರುಗಳ ಚರಿತೆಯಿರುವಾಗ ಕವಿಯು ೩ ಜನ ಮರುಳಸಿದ್ಧರ ಚರಿತೆಯನ್ನು ಹೇಳುವುದಾಗಿ ಹೇಳಿರುವುದರ ಉದ್ದೇಶದಲ್ಲಿ ಔಚಿತ್ಯವಿದೆಯೇ ?

೨೩೩. ಇಲ್ಲವಾದರೆ ಇದಕ್ಕಾಗಿಯೇ ಸೃಷ್ಟಿಸಲ್ಪಟ್ಟ ಕಾವ್ಯವೆಂದು ಹೇಳಲು ಅವಕಾಶವಾಗುವುದಿಲ್ಲವೇ ?

೨೩೪. ಧಾರವಾಡದ ಸಾಹಿತ್ಯ ಸಮಿತಿ ಪತ್ರಿಕೆಯಲ್ಲಿಯ ಪ್ರಕಟಣೆಯಲ್ಲಿರುವ ೩೧ ವಿಷಯಗಳ ಬಗ್ಗೆ ಈ ಮರುಳಸಿದ್ಧಾಂಕದಲ್ಲಿ ಲೇಖನಗಳಿಲ್ಲದಿರುವ ಕಾರಣವೇನು ?

೨೩೫. ದಿನಾಂಕ ೨೪—೨—೪೮ ರ ಮತ್ತೊಂದು ಪ್ರಕಟಣೆಯಲ್ಲಿ ಮ:ಹಾ

ಮಹಾ ಆಚಾರ್ಯರ, ವಿರಕ್ತ ಮೂರ್ತಿಗಳ, ಸಮಾಜದ ಮುಂದಾಳು ಗಳ, ಹಾಗೂ ಉನ್ನತಾಧಿಕಾರಿಗಳ ಬರಹಗಳೂ, ಅಭಿಪ್ರಾಯಗಳೂ, ಮರುಳಸಿದ್ಧ ಗದ್ಯ ಪುರಾಣ, ಸಹ ಇವೆ ಎಂದು ಹೇಳಲಾಗಿದೆ. ಆದರೆ ಇದರಲ್ಲಿ ಇವಾವುವೂ ಇಲ್ಲ. ಕಾರಣವೇನು ?

೨೩೬. ಇಲ್ಲಿ ಮರುಳಾರಾಧ್ಯ ವಿಜಯ ಕಾವ್ಯದ ಗದ್ಯಾನುವಾದಕ್ಕೆ ಮರುಳ ಸಿದ್ಧ ಗದ್ಯಪುರಾಣವೆಂದು ಹೇಳಲಾಗಿದೆ. ಇದರಿಂದ ಮರುಳಾರಾಧ್ಯ, ಮರುಳಸಿದ್ಧ ಈ ಪದಗಳು ಪರ್ಯಾಯಾರ್ಥದಲ್ಲಿ (ಏಕಾರ್ಥದಲ್ಲಿ) ಇಲ್ಲಿ ಪ್ರಯುಕ್ತವಾಗಿವೆ ಯೆಂದು ಅರ್ಥವಾಗುವುದಿಲ್ಲವೇ ?

೨೩೭. ನೀಲಕಂಠ ಶಿವಾಚಾರ್ಯರು ತಮ್ಮ ಕ್ರಿಯಾಸಾರ ಗ್ರಂಥದಲ್ಲಿ ತನ್ನ ತಂದೆ ಮಲ್ಲಯ ದೇವನೆಂದೂ, ತಾಯಿ ಚನ್ನಮಾಂಬೆಯೆಂದೂ ಸ್ಪಷ್ಟ ವಾಗಿ ಹೇಳಿರುತ್ತಾರೆ. ವಿಜಯ ಕಾವ್ಯವು ಇವರು ಗೋಕರ್ಣ ಲಿಂಗ ದಿಂದ ಉದ್ಭವಿಸಿದರೆಂದು ಹೇಳುತ್ತಿದೆ. ಇಲ್ಲಿ ಯಾವುದನ್ನು ನಂಬ ಬೇಕು ?

## ಪತ್ರಗಳು.

ದಿನಾಂಕ ೮—೯—೬೯ ರಲ್ಲಿ ಹುಬ್ಬಳ್ಳಿ ಶ್ರೀ ಪಿ. ಐ. ಹಿರೇಮಠ, ವಕೀಲರಿಗೆ ಬರೆದ ನನ್ನ ಪತ್ರ.

ಮಾನ್ಯರೇ,

ತಾವು ಶ್ರೀ ಮರುಳಸಿದ್ಧಾಂಕದಲ್ಲಿ ಕೊಟ್ಟಿರುವ ತಮ್ಮ ಅಭಿಪ್ರಾಯ ದಲ್ಲಿ ಸಂದೀಶಕವಿಯ ಮರುಳಾರಾಧ್ಯ ವಿಜಯಕಾವ್ಯವನ್ನು ಆಧಾರವಿಟ್ಟು ಕೊಂಡು ಅನೇಕ ಅಂಶಗಳನ್ನು ಪುಷ್ಟೀಕರಿಸಿರುತ್ತೀರಿ. ಆ ವಿಜಯ ಕಾವ್ಯ ದಲ್ಲಿರುವ ಉಜ್ಜಯಿನೀ ಪೀಠದ ಗುರುಪರಂಪರೆಯನ್ನು ತಾವು ಒಪ್ಪಿಯೇ ಇದ್ದೀರಷ್ಟೆ. ಅಂತೆಯೇ ತಾವು ಹಿರೇಹಡಗಲಿ ಶ್ರೀ ವಿರೂಪಾಕ್ಷಶಾಸ್ತ್ರಿಗಳು ಬರೆದಿರುವ ಸಿದ್ಧಲಿಂಗೇಶ ವಿಜಯವೆಂಬ ಗ್ರಂಥಕ್ಕೆ ನನ್ನ ಮುಡುಪು ಎಂಬ ಹೆಸರಿನಲ್ಲಿ ಒಂದು ಲೇಖನವನ್ನು ಕೊಟ್ಟಿರುತ್ತೀರಿ. ಈ ಕಾರಣದಿಂದ ಆ ಸಿದ್ಧಲಿಂಗೇಶ ವಿಜಯದಲ್ಲಿ ಕೊಟ್ಟಿರುವ ಉಜ್ಜಯಿನೀ ಪೀಠದ ಗುರುಪರಂಪರೆ ಯನ್ನು ತಾವು ಒಪ್ಪಿಯೇ ಇದ್ದೀರಿ. ಈ ಎರಡರಲ್ಲಿ ಜನತೆ ಯಾವುದನ್ನು

ಒಪ್ಪಿಕೊಳ್ಳಬೇಕು ? ಯಾವುದನ್ನು ತಿರಸ್ಕರಿಸಬೇಕು ? ಅಥವಾ ಎರಡನ್ನೂ ತಿರಸ್ಕರಿಸಬೇಕೆ ? ಅಥವಾ ಎರಡನ್ನೂ ಒಪ್ಪಿಕೊಳ್ಳಬೇಕೆ ? ಇದಕ್ಕೆ ಶೀಘ್ರವಾಗಿ ಜವಾಬು ಕೊಟ್ಟು ನಾನು ಬರೆಯುತ್ತಿರುವ ವಿಮರ್ಶೆಗೆ ಸಹಾಯ ಮಾಡಬೇಕಾಗಿ ಕೋರುತ್ತೇನೆ.

ಇದಕ್ಕೆ ಹಿರೇಮಠರ ಉತ್ತರ.—

ದಿ. ೧೨-೯-೪೯.

ಪಂಡಿತರೇ,

ತಮ್ಮ ಸೆಪ್ಟೆಂಬರ್ ತಿಂಗಳ ೮ನೇ ದಿನಾಂಕದ ಓಲೆಯು ಈ ದಿನ ನನ್ನ ಕೈಸೇರಿತು. ಈ ದಿನ ನನಗೆ ತುಸು ಬಿಡುವು ಇದ್ದುದರಿಂದ ಈಗಲೇ ತಮಗೆ ಉತ್ತರವನ್ನು ಬರೆದಪ್ಪಾಗಿದೆ. "ಮರುಳಸಿದ್ಧಾಂಕ" ತಮ್ಮ ಕೈ ಸೇರಿರ ಬಹುದು. ತಮ್ಮ ಓಲೆಯಲ್ಲಿ "ನಂದೀಶ ಕವಿ" ಯ ........................ ಅನೇಕ ಅಂಶಗಳನ್ನು ಪುಷ್ಟೀಕರಿಸಿರುವಿರಿ. ಎಂದು ಬರೆದ ವಿಷಯ ಗೂಢವಾಗಿವೆ. ಆ ವಿಜಯ ಕಾವ್ಯದಲ್ಲಿ ಎಲ್ಲಿ ಗುರು ಪರಂಪರೆ ಇದೆ ಎಂಬುದನ್ನು ತುಸು ಮಟ್ಟಿಗೆ ತಾವು ವಿವರಿಸುವಿರಾ ? ನಾವು ಯಾವುದನ್ನು ಒಪ್ಪಿದ್ದಾಗಿದೆ. ನಮ್ಮ ಒಪ್ಪಿಗೆಯನ್ನು ಕೇಳುವ ಮುನ್ನ ತಾವೇ ನಮ್ಮ ವಪ್ಪಿಗೆಯನ್ನು ಗ್ರಹಿಸಿದ್ದಾದರೆ ಹೇಗೆ ? ಒಪ್ಪಿದ ವಿಷಯಗಳನ್ನಾದರೂ ಮುಂಡಿಸಿ ಕೇಳುವುದು ಚಿತವಲ್ಲವೇ ? ಅದನ್ನಷ್ಟು ತಾವು ವಿಶದಪಡಿಸುವಿರಾ ?

ಇನ್ನು ವಿರೂಪಾಕ್ಷ ಶಾಸ್ತ್ರಿಗಳು ಬರೆದ ಗ್ರಂಥಕ್ಕೆ "ನನ್ನ ಮುಡುಪು" ಎಂಬ ಲೇಖನವನ್ನು ಕೊಟ್ಟಿದ್ದಿದ್ದು ಆ ಸಿದ್ಧಲಿಂಗೇಶ ವಿಜಯದಲ್ಲಿ ಯಾವ ಪಾನಿನ ಮೇಲೆ ಹೇಗೆ ಗುರು ಪೀಠದ ಪರಂಪರೆ ಬರೆದಿದೆ ಎಂಬುದನ್ನು ನಮಗೆ ಶೀಘ್ರದಲ್ಲಿ ತಿಳಿಸುವಿರಾ ?

ವಿಮರ್ಶನ ಮತ್ತು ವಿವೇಚನ ವಿಚಕ್ಷಣಗಳಾದ ತಾವು ವಿಷಯ ವಿಪರ್ಯಾಸ ಮಡುವಿನಲ್ಲಿ ಹೆಜ್ಜೆಯನ್ನಿಡದೆ ಶೀಘ್ರವಾಗಿ ತಮ್ಮ ವಿಮರ್ಶನಾ ಪ್ರಭೆಯ ಕಿಡಿಗಳನ್ನು ನಮಗರುಹಿದಲ್ಲಿ ಮತ್ತು ತಾವು ಕಂಡ ಅನುಚಿತ ಪ್ರತಿಪಾದನೆಯನ್ನು ತಿಳಿಸಿದಲ್ಲಿ ಆ ಕೂಡಲೇನೇ ತಮಗೆ ಸವಿಸ್ತಾರವಾಗಿ ಉತ್ತರ ಕೊಡಲಾಗುವುದು.

ತಮ್ಮ ಹೇಳಿಕೆ ಏನಿದೆ ಎಂಬುದನ್ನೇ ನಿರೀಕ್ಷಿಸುವ,

ತಮ್ಮ,

ಇದಕ್ಕೆ ನನ್ನ ಉತ್ತರ.—

ಮಾನ್ಯರೇ,

ತಮ್ಮ ೧೧–೯–೪೯ ರ ಪತ್ರ ಕೈ ಸೇರಿತು. ತಾವು ಆ ಪತ್ರದಲ್ಲಿ "ನಂದೀಶ ಕವಿಯ ಅನೇಕ ಅಂಶಗಳನ್ನು ಪುಷ್ಟೀಕರಿಸಿರುವಿರಿ ಎಂದ್ಯ ಬರೆದ ವಿಷಯ ಗೂಢವಾಗಿದೆ."– ಎಂದು ಬರೆದಿರುತ್ತೀರಿ. ಈ ಬಗ್ಗೆ ತಾವು ಯಾವ ರೀತಿಯ ಸ್ಪಷ್ಟೀಕರಣವನ್ನು ಬಯಸಿರುವಿರೆಂಬುದು ಗೂಢವಾಗಿದೆ. ತಾವು ತಮ್ಮ ಆ ಅಭಿಪ್ರಾಯ ಎಂಬ ಲೇಖನದಲ್ಲಿ ಉಲ್ಲೇಖಿಸಿರುವ ವಿಷಯ ಗಳು ಬಹುತರವಾಗಿ ನಂದೀಶಕವಿಯ ಕಾವ್ಯವನ್ನೇ ಅನುಸರಿಸಿವೆಎಂದು ನನ್ನ ಅಭಿಪ್ರಾಯ. ತಾವು ಆ ಲೇಖನದಲ್ಲಿ ಯಾವ ವಿಷಯಗಳನ್ನುಲ್ಲೇಖಿಸಿದ್ದೇ ನೆಂಬು ನನ್ನನ್ನು ಕೇಳದೆ ಒಮ್ಮೆ ಆ ಲೇಖನವನ್ನು ಓದಿ ತಿಳಿದುಕೊಳ್ಳುವಿರಾಗಿ ನಂಬಿರುತ್ತೇನೆ.

"ಆ ವಿಜಯ ಕಾವ್ಯದಲ್ಲಿ ಎಲ್ಲಿ ಗುರು ಪರಂಪರೆ ಇದೆ ಎಂಬುದನ್ನು ತುಸು ಮಟ್ಟಿಗೆ ತಾವು ವಿವರಿಸುವಿರಾ ?" ಎಂದು ತಾವು ಬರೆದಿರುವುದರಿಂದ ವಿಜಯ ಕಾವ್ಯವನ್ನು ನೋಡಿಯೇ ಇಲ್ಲವೆಂದು ಭಾಸವಾಗುತ್ತದೆ. ತಾವು ತಮ್ಮ ಅಭಿಪ್ರಾಯುವನ್ನು ಕೊಟ್ಟು ಯಾವ ಪುಸ್ತಕವನ್ನು ಗೌರವಿಸಿರುತ್ತೀರೋ ಅದನ್ನು ತಾವು ನೋಡಿಯೇ ಇಲ್ಲವೆಂದು ಹುಟ್ಟಿರುವ ಈ ಸಂದೇಹಕ್ಕೆ ಮನ್ನ ಣೆಕೊಡುವ ಸಾಹಸವನ್ನು ಮಾಡಲಾರೆನು. ಆದ್ದರಿಂದ ತಾವು ಆ ಕಾವ್ಯ ವನ್ನು ತಾವು ಓದಿ ನೋಡಿದರೆ ಅದರಲ್ಲಿ ಉಜ್ಜಯಿನೀ ಪೀಠದ ೨೫ ಜನ ಗುರು ಗಳ ಪರಂಪರೆ ಇದೆ ಎಂಬುದು ವ್ಯಕ್ತವಾಗುತ್ತದೆ.

"ನಾವು ಯಾವುದನ್ನು ಒಪ್ಪಿದ್ದಾಗಿದೆ" ಎಂದು ಬರೆದಿರುತ್ತೀರಿ. ತಮ್ಮ ಅಭಿಪ್ರಾಯದಿಂದ ಗೌರವಿಸಲ್ಪಟ್ಟ ಆ ಕಾವ್ಯದಲ್ಲಿ ಯಾವು ಯಾವುದಿದೆಯೋ ಅದೆಲ್ಲವನ್ನೂ ತಾವು ಒಪ್ಪಿದ್ದಾಗಿದೆ.. ಈ ಬಗ್ಗೆ ಅಲ್ಲಿ ತಮ್ಮ ಒಪ್ಪಿತರೂಪ ವಾದ ಅಭಿಪ್ರಾಯವೇ ಇರುವಾಗ ತಾವು ಒಪ್ಪುತ್ತೀರಾ ಇಲ್ಲವೇ ಎಂದು ಕೇಳುವುದು ಪಿಷ್ಟಪೇಷಣವಾಗುತ್ತದೆ.

" ಒಪ್ಪಿದ ವಿಷಯುವನ್ನಾದರೂ ಮುಂಡಿಸಿ ಕೇಳುವುದುಚಿತವಲ್ಲವೇ ?"
ಆ ವಿಷಯುವನ್ನೇ ಮುಂಡಿಸಿ ನಾನು ತಮುಗೆ ಪತ್ರ ಬರೆದದ್ದು. ಆ ವಿಷಯು ಗುರುಪರಂಪರೆಗೆ ಸಂಬಂಧಪಟ್ಟದೆಂಬುದು ಅದರಲ್ಲಿ ಸ್ಪಷ್ಟವಾಗಿಯೇ ಇದೆ.

ಸಿದ್ಧಲಿಂಗೇಶ ವಿಜಯುದಲ್ಲಿ ಯಾವ ಪಾನಿನ ಮೇಲೆ ಹೇಗೆ ಗುರು ಪೀಠದ ಪರಂಪರೆ ಬರೆದಿದೆ ಎಂಬುದನ್ನು ನನ್ನಿಂದ ತಾವು ಕೇಳಿ ತಿಳಿದುಕೊಳ್ಳುವುದು ಉಚಿತವಲ್ಲ. ತಾವು ಅದಕ್ಕೆ ತಮ್ಮ ಮುಡುಪು ಎಂಬ ಹೆಸರಿನಿಂದ ಲೇಖನವನ್ನು ಕೊಟ್ಟಿರುವಾಗ ಅದರಲ್ಲಿರುವ ವಿಷಯುಗಳನ್ನು ತಾವು ನೋಡಿಯೇ ಇರಬೇಕು. ಈಗ ಜ್ಞಾಪಕವಿಲ್ಲದಿದ್ದಲ್ಲಿ ಮತ್ತೊಮ್ಮೆ ನೋಡಿ.

ನಾನು ವಿಷಯು ವಿಪರ್ಯಾಸ ಮುಡುವಿನಲ್ಲಿ ಹೆಜ್ಜೆಯನ್ನಿಡಕೂಡದಾಗಿ ನನ್ನನ್ನು ಎಚ್ಚರಿಸಿರುತ್ತೀರಿ. ಇದಕ್ಕಾಗಿ ನಾನು ತಮುಗೆ ತುಂಬಾ ಕೃತಜ್ಞನಾಗಿರುತ್ತೇನೆ. ಆದರೆ ಈ ರೀತಿ ನನಗೆ ಎಚ್ಚರಿಸಿರುವ ತಾವೇ ವಿಪರ್ಯಾಸ ಪಥದಲ್ಲಿ ಪ್ರವೇಶಿಸಿದ್ದೀರೆಂದು ತಿಳಿಸಲು ವಿಷಾದವಾಗುತ್ತದೆ. ಏಕೆಂದರೆ ತಮ್ಮ ಅಭಿಪ್ರಾಯು ಮತ್ತು ಮುಡುಪು ಎಂಬ ಲೇಖನಗಳಿಂದ ಅಲಂಕೃತವಾಗಿರುವ ವಿಜಯುಕಾವ್ಯ ಮತ್ತು ಸಿದ್ಧಲಿಂಗೇಶ ವಿಜಯು ಈ ಪುಸ್ತಕಗಳಲ್ಲಿರುವ ವಿಷಯುಗಳು ತಮುಗೆ ಗೊತ್ತಿದ್ದರೂ ಸಹ ಗೊತ್ತಿಲ್ಲವೆಂದು ವಿಪರ್ಯಾಸ ಭಾವನೆಯುನ್ನು ಹೊಂದಿ ಅವುಗಳನ್ನು ತಿಳಿಸಲು ನನಗೆ ಬರೆದಿರುತ್ತೀರಿ. ಪೂಜ್ಯರೇ, ತಾವು ಈಗಲಾದರೂ ಈ ವಿಪರ್ಯಾಸ ಭಾವನೆಯುನ್ನು ಬಿಟ್ಟು ನೇರವಾದ ರೀತಿಯುಲ್ಲಿ ನನ್ನ ವಿಮರ್ಶೆಗೆ ನೆರವಾಗುವಿರಾಗಿ ಪೂರ್ಣನಂಬಿರುತ್ತೇನೆ.

---

ಶ್ರೀಶೈಲದ ಶ್ರೀ ಸ್ವಾಮಿಗಳವರಿಗೆ ದಿನಾಂಕ ೮—೯—೪೯ ರಲ್ಲಿ ಬರೆದ ನನ್ನ ಪತ್ರ.

ಪೂಜ್ಯರೇ,

ಶ್ರೀ ಮುರುಳಸಿದ್ಧಾಂಕದಲ್ಲಿ ತಾವು ಬರೆದಿರುವ ಶ್ರೀ ಶಿವ ಶ್ರೀಶೈಲವೆಂಬ ಅಂಕಿತದಲ್ಲಿರುವ ಮುರುಳಸಿದ್ಧರೆಷ್ಟು ಜನ ಎಂಬ ಲೇಖನದಲ್ಲಿ ಉಜ್ಜಯಿನಿ ಪೀಠದ ಗುರುಪರಂಪರೆಯಲ್ಲಿ ೩೫ ಜನ ಗುರುಗಳಿದ್ದರೆಂದು ಒಪ್ಪಿಕೊಂಡಿರು

ತ್ತೀರಿ ಮತ್ತು ಹಿರೇಹಡಗಲಿ ಶ್ರೀ ವಿರೂಪಾಕ್ಷಶಾಸ್ತ್ರಿಗಳು ಬರೆದಿರುವ ಶ್ರೀ ಸಿದ್ಧಲಿಂಗೇಶ ವಿಜಯಕ್ಕೆ ತಮ್ಮ ಮಹತ್ತರವಾದ ಒಪ್ಪಿಗೆಯನ್ನು ಕೊಟ್ಟಿರು ತ್ತೀರಿ. ಅದರಲ್ಲೂ ಶ್ರೀ ಮಠದ ೧೮೯ ಜನ ಗುರುಗಳ ಪರಂಪರೆಯಿದ್ದೆ, ಇದೇ ಅಂಕದಲ್ಲಿರುವ ತಮ್ಮ ಇನ್ನೊಂದು ಲೇಖನದಲ್ಲಿ ಶಿವತತ್ವರತ್ನಾಕರದ ಬಗ್ಗೆ ಪ್ರಾಮಾಣ್ಯ ಬುದ್ಧಿಯನ್ನು ಸೂಚಿಸಿದ್ದೀರಿ. ಅಲ್ಲೂ ೭ ಜನ ಗುರುಗಳ ಪರಂಪರೆ ಇದೆ ಎಂಬುದು ತಮಗೆ ಜ್ಞಾಪಕವಿರಲಿಕ್ಕೆ ಸಾಕು. ಈ ಮೂರು ಪರಂಪರೆಗಳಲ್ಲಿ ತಮ್ಮ ನಿಜ ಪ್ರಾಮಾಣ್ಯ ಯಾವುದರಲ್ಲಿದೆ ಎಂಬುದನ್ನು ತಿಳಿಸಿ ನನ್ನ ವಿಮರ್ಶೆಗೆ ಸಹಾಯ ಮಾಡಬೇಕಾಗಿ ಕೋರುತ್ತೇನೆ.

---

ಇದೇ ದಿನಾಂಕದಲ್ಲಿ ಮೊರಬದ ಜಡೇಮಠದ ಶ್ರೀ ಗಂಗಾಧರ ಶಿವಾ ಚಾರ್ಯರಿಗೆ ಬರೆದ ನನ್ನ ಪತ್ರ:—

ಮಾನ್ಯರೇ,

ತಾವು ಶ್ರೀ ಮರುಳಸಿದ್ಧಾಂಕದಲ್ಲಿ ಬರೆದಿರುವ ಲೇಖನದಲ್ಲಿ ೫ ಜನ ಮರುಳಸಿದ್ಧರನ್ನು ಉಲ್ಲೇಖಿಸಿರುತ್ತೀರಿ. ಉಜ್ಜಯಿನೀ ಪೀಠಕ್ಕೆ ಅಧಿಪತಿ ಯಾದವನು ಒಬ್ಬ ಮರುಳಸಿದ್ಧನೇ ಎಂದು ಹೇಳಿರುತ್ತೀರಿ. ಮರುಳಾ ರಾಧ್ಯ ವಿಜಯಕಾವ್ಯವು ಮರುಳಾರಾಧ್ಯ, ಆದಿಮರುಳಸಿದ್ಧ, ಹೂಲಿ ಮರುಳ ಸಿದ್ಧ, ಈ ಮೂರು ಜನರನ್ನು ಉಜ್ಜಯಿನೀ ಪೀಠದವರೆಂದು ಹೇಳಿದೆ. ನೀವು ಹೂಲಿ ಮರುಳಸಿದ್ಧನನ್ನು ಉಜ್ಜಯಿನೀ ಪೀಠದವನೆಂದು ಒಪ್ಪಿಲ್ಲ. ಉಜ್ಜ ಯಿನಿಯಲ್ಲಿ ಮಾದಿಗ ಮರುಳಸಿದ್ಧನೆಂಬುವನು ಒಬ್ಬನಿದ್ದನೆಂದು ನೀವು ಹೇಳಿ ದ್ದೀರಿ. ಉಜ್ಜಯಿನಿಯಲ್ಲಿದ್ದವನು ಹರಳನೆಂದು ವಿಜಯಕಾವ್ಯ ಮತ್ತು ಶ್ರೀ ಶಿವ ಶ್ರೀಶೈಲ ಇವರು ಹೇಳುತ್ತಾರೆ. ನೀವು ಕಣ್ಣಾರೆ ಕಂಡದ್ದು ನಿಜವೇ? ವಿಜಯಕಾವ್ಯ ಶ್ರೀ ಶಿವ ಶ್ರೀಶೈಲ ಇವರು ಹೇಳಿದ್ದು ನಿಜವೇ?

ದಯವಿಟ್ಟು ತಿಳಿಸಿ ನಾನು ಬರೆಯುತ್ತಿರುವ ವಿಮರ್ಶೆಗೆ ಸಹಾಯ ಮಾಡಬೇಕಾಗಿ ಕೋರುತ್ತೇನೆ.

---

ಇದೇ ದಿನಾಂಕದಲ್ಲಿ ಪಂಡಿತರತ್ನ ಚನ್ನಬಸವ ಕವಿಗಳಿಗೆ ಬರೆದ ನನ್ನ ಪತ್ರ.—

ಮಾನ್ಯರೇ,

ಮರುಳಸಿದ್ಧನಿಂದ ರಚಿತವಾದ ೬೮೦೦೦ ವಚನಗಳು ಎಲ್ಲಿ ಹೋದವು? ಎಂದು ಕೇಳಿರುವಿರಿ. ಇದೇ ಅಂಕದಲ್ಲಿರುವ ಮರುಳಸಿದ್ಧರೆಷ್ಟು ಜನ? ಎಂಬ ಲೇಖನದಲ್ಲಿ ಮರುಳಸಿದ್ಧರು ೬೮೦೦೦ ವಚನಗಳನ್ನು ಹಂಪೆಯಲ್ಲಿ ರಚಿಸಿ ವಿರಕ್ತರಿಗೆ ಅನುಗ್ರಹಿಸಿದರು ಎಂದು ಶ್ರೀ ಶಿವ ಶ್ರೀ ಶೈಲರು ಬರೆದಿರುತ್ತಾರೆ. ಆದ್ದರಿಂದ ಅವರಿಂದ ಒಪ್ಪಿಗೆ ಪಡೆದು ನನ್ನ ವಿಮರ್ಶೆಗೆ ನೆರವೀಯಲು ಕೂಡಲೇ ಜವಾಬು ಬರೆಯುವಿರಾಗಿ ನಂಬಿರುತ್ತೇನೆ.

———

ಇದೇ ದಿನಾಂಕದಲ್ಲಿ ಬನ್ನೀಕೊಪ್ಪದ ಶ್ರೀ ಅಮರನಾಥ ಶಾಸ್ತ್ರಿಗಳಿಗೆ ಬರೆದ ನನ್ನ ಪತ್ರ.—

ಮಾನ್ಯರೇ,

ಶ್ರೀ ಮರುಳಸಿದ್ಧಾಂಕದಲ್ಲಿ ಬರೆದಿರುವ ತಮ್ಮ ಲೇಖನದಲ್ಲಿ ಕ್ರಿ. ಶ. ೩ ನೇ ಶತಮಾನದಲ್ಲಿದ್ದ ಪಾಂಡ್ಯ ರಾಜರು ಸದ್ಧರ್ಮ ಪೀಠವನ್ನು ಕಟ್ಟಿಸಿದ ರೆಂದು ಹೇಳಲಾಗಿದೆ. ೩ ನೇ ಶತಮಾನದಲ್ಲಿ ಪಾಂಡ್ಯರಾಜರಿದ್ದುದಕ್ಕೆ ಆಧಾರವೇನು ? ಮರುಳಾರಾಧ್ಯ ವಿಜಯ ಕಾವ್ಯದಲ್ಲಿ ಕಲ್ಯಾಣದ ಸೋಮೇಶ್ವರ ದೊರೆಯು ಕ್ರಿ. ಶ. ೧೦೪೦ ರಲ್ಲಿ ಕಟ್ಟಿಸಿದನೆಂದು ಹೇಳಲಾಗಿದೆ. ಶ್ರೀ ಶಿವ ಶ್ರೀ ಶೈಲರು ತಮ್ಮ ಲೇಖನದಲ್ಲಿ ಇವನ್ನು ಒಪ್ಪಿಕೊಂಡಿರುತ್ತಾರೆ. ಇದರಿಂದ ತಮಗೆ ವಿಜಯ ಕಾವ್ಯದಲ್ಲಿ ಪ್ರಾಮಾಣ್ಯ ಭಾವನೆ ಇಲ್ಲವೆಂದ ಹಾಗಾಯಿತು. ೩ ನೇ ಶತಮಾನದಲ್ಲಿ ಸದ್ಧರ್ಮಪೀಠ ಇಲ್ಲಿ ಸ್ಥಾಪಿತವಾಗಿದ್ದರೆ ಕಲಿಯುಗಾದಿ ಕಥೆಯೂ,ಮಾಳವ ಉಜ್ಜಯಿನಿ ಕಥೆಯೂ ಕೃತ್ರಿಮವಾದುದಾಗುವುದಿಲ್ಲವೇ?

ಇದಕ್ಕೆ ಜವಾಬನ್ನು ಕೊಟ್ಟು ನಾನು ಬರೆಯುತ್ತಿರುವ ವಿಮರ್ಶೆಗೆ ಸಹಾಯ ಮಾಡುವಿರಾಗಿ ನಂಬಿರುತ್ತೇನೆ.

———

ಈ ಮೇಲ್ಕಂಡ ಪತ್ರಗಳಿಗೆ ಶ್ರೀ ಶ್ರೈಲದ ಶ್ರೀ ಸ್ವಾಮಿಗಳವರ ಪ್ರತ್ಯುತ್ತರ.— ಗೆ. ನಂ. ೪೬೦೧/೧೨–೯–೪೯.

ತಮ್ಮ ತಾ. ೯–೯–೪೯ ರ ಪತ್ರದಿಂದ ಮರುಳ ಸಿದ್ಧಾಂಕದ ಬಗ್ಗೆ ನೀವು ತಿಳಿಯಪಡಿಸಿರುವ ಅಂಶವೆಲ್ಲವೂ ಅರಿಕೆಯಾಯಿತು. ಬಹಳ ಸಂತೋಷ! ಶ್ರೀ ಶಿವರು ನಾವೇ ಎಂಬುದನ್ನು ಗೊತ್ತಿಸಿರುವುದೂ ಆ ಲೇಖದಲ್ಲಿನ ವಿಷಯಗಳ ಬಗ್ಗೆ ವಿಶಾಲಾಭಿಪ್ರಾಯವನ್ನು ತಿಳಿಯ ಬಯಸಿರುವುದೂ ನಮಗೆ ಇಮ್ಮಡಿ ಆನಂದವಾಗಿದೆ.

೧) "ಮರುಳಸಿದ್ಧಾಂಕ" ವು ಸಂಪಾದಕರ ಸಂಗ್ರಹ ಗ್ರಂಥವಾಗಿರುವುದರಿಂದ ಯಾವ ಲೇಖಕರು ಹೇಗೆ ಬರೆದು ಕಳಿಸಿರುವರೋ ಹಾಗೆ ಪ್ರಕಟಿಸಲಾಗಿದೆ. ಆದರೆ ಸಂಪಾದಕೀಯದ ೧೮ ನೆಯ ಪುಟದಲ್ಲಿ ಹೇಳಿರುವಂತೆ ಕನ್ನಡ ಭಾಷೆಯ ಅಂದಕ್ಕಾಗಿ ವ್ಯಾಕರಣ ದೋಷಗಳನ್ನು ತಿದ್ದುವುದೂ, ಉದ್ದವಾಗಿದ್ದ ಲೇಖವನ್ನು ಕಡಿಮೆ ಮಾಡಿರುವುದೂ ಇಷ್ಟುಮಾತ್ರ ಮಾಡಿಸಿದ್ದಾಗಿದೆ. ಕಾರಣ ಲೇಖಕರ ಸ್ವಾತಂತ್ರ್ಯ ಹರಣವನ್ನು ಈ ಅಂಕದಲ್ಲಿ ಎಲ್ಲಿಯೂ ಮಾಡಲಾಗಿಲ್ಲ ಮತ್ತು ಅಂಕಗಳನ್ನು ಪ್ರಕಟಿಸುವರಾರೂ ಹಾಗೆ ಮಾಡಲು ಬರುವುದೂ ಇಲ್ಲ.

ಆದಕ್ಕಾಗಿ ಮರುಳಸಿದ್ಧಾಂಕದಲ್ಲಿ ಎಲ್ಲಾ ಲೇಖಕರ ಅಭಿಪ್ರಾಯಗಳು ಭಿನ್ನ ಭಿನ್ನವಾಗಿರುವುದು ಸಹಜವಾಗಿದೆ. ಅವುಗಳಲ್ಲಿಯ ಸತ್ಯಾಂಶವನ್ನು ಕಂಡುಕೊಳ್ಳುವುದು ನಿರ್ಮತ್ಸರ ಭಾವದ ಐತಿಹಾಸಿಕ ಪಂಡಿತರಿಗೆ ಮಾತ್ರ ಸಾಧ್ಯ, ಎಂಬ ವಿಷಯವನ್ನು ತಾವು ಮಾತ್ರ ಗಮನದಲ್ಲಿಟ್ಟುಕೊಳ್ಳಬೇಕಾದುದು ಮುಖ್ಯ. "ಮರುಳ ಸಿದ್ಧಾಂಕ" ಒಬ್ಬ ಪಂಡಿತರ ಒಂದು ಸ್ವತಂತ್ರ ಗ್ರಂಥವಲ್ಲ. ಬಹು ಪಂಡಿತರ ಬಹು ಬಗೆಯ ಭಿನ್ನಾಭಿಪ್ರಾಯದ ಲೇಖನಗಳ ಸಂಗ್ರಹ ಅದೊಂದು. ಮುಂದೆ ಮರುಳಸಿದ್ಧರ ಬಗ್ಗೆ ಒಂದು ಸ್ವತಂತ್ರ ಇತಿಹಾಸ ಗ್ರಂಥವನ್ನು ಯಾರಾದರೂ ಬರೆಯ ಬೇಕೆಂದಿದ್ದರೆ ಅವರಿಗೆ ಈ ಅಂಕ ತಕ್ಕಮಟ್ಟಿಗಾದರೂ ಸಹಾಯಕವಾಗಬಹುದು. ಪರ ಮತೀಯರು ನಮ್ಮ ಮತ ಸಾಹಿತ್ಯದಲ್ಲಿ ಕೈಯಿಟ್ಟು ಕುಚೇಷ್ಟೆ ಮಾಡಿದ್ದಕ್ಕಾಗಿ

ಅವರು ನಮಗೆ ಉಪಕಾರ ಮಾಡಿದಂತೆಯೇ ಆಯಿತು. ಆ ಮಹಾನು ಭಾವರ ಬಿಸಿಯಿಂದಲೇ ಎಲ್ಲಿಯೋ ಗಟ್ಟಿಯಾಗಿ ನಿಂತಿದ್ದ ಮರುಳಸಿದ್ಧನೆಂಬ ಬೆಣ್ಣೆ ಕರಗಿ ತುಪ್ಪವಾಗಿ ನಾವೂ ನೀವೂ ಊಟಮಾಡಲು ಬರುವಂತಾ ಯಿತು.

೨) ನಮಗಾಗಿ ನೀವು ಅರಿಕೆ ಮಾಡಿರುವ ಪತ್ರದಲ್ಲಿ ಕೇಳಿರುವಂತೆ ಆ ಮೂರು ಪರಂಪರೆಯ ಬಗ್ಗೆ ನಮ್ಮ ದೃಷ್ಟಿಯಿಲ್ಲ. ಈ ಗುರು ಪರಂಪರೆ ಯುಗ ಯುಗಾದಿಯಿಂದ ಬಂದಿರುವಂತೆ ಶಿವಾಗಮಗಳು ಒಪ್ಪುತ್ತಿರುವುದ ರಿಂದ ೫೫ ಜನರೋ, ೧೦೯ ಜನರೋ, ೭ ಜನರೋ, ೭೦೦೦ ಜನರೋ ಶೋಧಿ ಸಿದ ಹಾಗೆಲ್ಲಾ ಸಿಗಬಹುದು. ಇದರೆ ನಮ್ಮ ದೃಷ್ಟಿ ಆಕಡೆಗಿಲ್ಲ. ಆದರೆ ಮೂಲ ಮರುಳಸಿದ್ಧ ಅವನ ಹೆಸರಿನ ಇತರ ಮರುಳಸಿದ್ಧರು ಬೇರೆ ಬೇರೆ ಇ ದ್ದರೇ ಇಲ್ಲವೇ ಎಂಬ ಶೋಧನೆ ಮಾತ್ರ ಪ್ರಧಾನವಾದುದು. ಈ ಬಗ್ಗೆ ನಮಗೆ ಆಧಾರ ಕಾವ್ಯಗಳು ಹೇಗೆ ದೊರೆತಿವೆಯೋ ಆ ವಿವರಣೆಯನ್ನೇ ವಾಚಕರ ಮುಂದೆ ಇರಿಸಲಾಗಿದೆ ಮತ್ತು ಆ ಆಧಾರಗಳ ಮೇಲಿಂದ ಅನೇಕ ಮರುಳ ಸಿದ್ಧರಿಗಿಂತ ಒಬ್ಬ ಮೂಲ ಮರುಳಸಿದ್ಧ ಕಾಲಿಕಂ ಉಜ್ಜಯಿನಿಯಲ್ಲಿದ್ದು (ಕ್ರಿ. ಶ. ೯೦೨) ಅವನೇ ಕರ್ನಾಟಕದ ಉಜ್ಜಯಿನಿಗೆ ಮೂಲಪುರುಷನಾದ ನೆಂದೂ ನಂಬಿದ್ದೇವೆ.

೩) ಇನ್ನು ತಾವು ಪಂಡಿತರತ್ನ ಚನ್ನಬಸವ ಕವಿಗಳಿಗಾಗಿ ಒಂದು ಪತ್ರ ಬರೆದು ಅದರಲ್ಲಿ ಸಪರಿಯುವರಿಗೊಂದು, ಮೊರಬದ ಶ್ರೀ ಗಂಗಾಧರ ಶಿವಾಚಾರ್ಯರಿಗೊಂದು, ಮತ್ತು ಬನ್ನಿಕೊಪ್ಪದ ಪಂ|| ಅಮರನಾಥಶಾಸ್ತ್ರಿಗ ಳಿಗೊಂದು, ಹೀಗೆ ಮೂರು ಪತ್ರಗಳನ್ನಿಟ್ಟದ್ದೀರಿ. ಅವೆಲ್ಲವೂ ಅವರಿಗೆ ಮುಟ್ಟಿ ನಿಮಗೆ ಉತ್ತರಕ್ಕೆ ವಿಲಂಬವಾಗಬಹುದೆಂದು ನಮಗೆ ತಿಳಿದಮು ಟ್ಟಿಗೂ ಅವಕ್ಕೆ ಉತ್ತರವನ್ನು ಈ ಕೆಳಗೆ ವಿವರಿಸಿದ್ದೇವೆ.

೧ನೆಯ ಪತ್ರ:- ೬೮,೦೦೦ ವಚನಗಳ ಬಗ್ಗೆ:—

ಮರುಳಸಿದ್ಧರ ವಚನ ಶೋಧಕರಿಗೆ ಅವುಗಳಿನ್ನೂ ಸಿಗದಿರುವುದರಿಂದ ಅವರು ಹಾಗೆ ಪ್ರಶ್ನೆ ಮಾಡಿರುವುದು ಸೂಕ್ತವಾಗಿದೆ. "ಮರುಳಸಿದ್ಧ ಶೆಟ್ಟ

ಜನ ? " ಎಂಬ ನಮ್ಮ ಲೇಖದಲ್ಲಿ ಮರುಳಸಿದ್ಧರು ೬೮,೦೦೦ ವಚನಗಳನ್ನು ರಚಿಸಿದರೆಂಬುದು ನಮ್ಮ ಸ್ವಂತ ಅಭಿಪ್ರಾಯವಲ್ಲ. ಮರುಳಾರಾಧ್ಯ ವಿಜಯ ಕಾವ್ಯದಲ್ಲಿ ಹೇಗೆ ಬರೆದಿದೆಯೋ ಹಾಗೆ ಇಲ್ಲಿ ವಿವರಿಸಿದ್ದೇವೆ. ಅಷ್ಟ ರಿಂದ ಎಲ್ಲಾ ವಚನಗಳು ಸಿಕ್ಕಿವೆಯೆಂದು ತಿಳಿಯಬಾರದು. ಒತ್ತಿರ್ಣ ವಚನಗಳು ಎಲ್ಲಿ ಹೋದವು ? ಎಂದು ಪ್ರಶ್ನಿಸಿರುವ ಕವಿಗಳೇ, "ಮರುಳಾ ರಾಧ್ಯ ವಿಜಯ "ವನ್ನು ಪದ್ಯದಿಂದ ಗದ್ಯಕ್ಕೆ ಅನುವಾದ ಮಾಡುವಾಗ ೨೧ ನೆಯ ಪುಟದಲ್ಲಿ " ಅರವತ್ತೆಂಟುಸಾವಿರ ವಚನಗಳನ್ನು ರಚಿಸಿದರು" ಎಂದು ವಿವರಿಸಿರುವರು. ಅದನ್ನು ನೋಡಿದ್ದರೆ ನಿಮಗೆ ಈ ಮೇಲಿನಂತೆ ಸಂದೇಹ ಬರುತ್ತಿರಲಿಲ್ಲ. ಏನೂ ತಪ್ಪಿಲ್ಲ. ಆ ಪುಟವನ್ನು ನೋಡಿರಿ !

೨ ನೆಯ ಪತ್ರ:– ಮೊರಬದ ಗಂಗಾಧರ ಶಿವಾಚಾರ್ಯರನ್ನು ಉದ್ದೇ ಶಿಸಿದುದು. ೫ ಜನ ಮರುಳಸಿದ್ಧರ ಬಗ್ಗೆ:—

ಸದರಿ ಗಂಗಾಧರ ಶಿವಾಚಾರ್ಯರಾಗಲಿ, ಇತರ ಲೇಖಕರಾಗಲಿ, (ಸಂಪಾದಕರು, ಶ್ರೀ ಶಿವರು, ಮುನ್ನುಡಿಕಾರರು, ಅಭಿಪ್ರಾಯದಾತರು ಇವರ ಹೊರತು) "ಮರುಳಾರಾಧ್ಯ ವಿಜಯ ಕಾವ್ಯ"ವನ್ನು ಕಾಣದವರಾಗಿ ಲೇಖ ಗಳನ್ನು ಬರೆದಿರುವುದರಿಂದ ಅವರು ಯಾರಿಂದ, ಹೇಗೆ ಕೇಳಿರಬೇಕೋ ಹಾಗೆ ಬರೆದಿರುವುದು ತಪ್ಪೇನೂ ಅಲ್ಲ, "ಮರುಳಾರಾಧ್ಯ ವಿಜಯ ಕಾವ್ಯ" ಸಿಗ್ಗು ವವರೆಗೆ ಹೂಲಿಯ ಮರುಳಸಿದ್ಧರು ಉಜ್ಜಯಿನಿ ಪೀಠಕ್ಕೆ ಜಗದ್ಗುರುಗಳಾಗಿ ದ್ದರೆಂದು ಯಾರೂ ತಿಳಿದುಕೊಂಡಿದ್ದಿಲ್ಲ. ಗಂಗಾಧರ ಶಿವಾಚಾರ್ಯರೂ ತಿಳಿ ದುಕೊಂಡಿದ್ದಿಲ್ಲ. ಅದಕ್ಕಾಗಿ ಹಾಗೆ ಬರೆದಿರುವುದು ತಪ್ಪಲ್ಲ. ಉಜ್ಜಯಿನಿ ಯವರು ಹೇಳುವುದು ಮಾದಿಗ ಮರುಳಪ್ಪನ ಸಮಾಧಿಯಂತಲೇ.

ಮೂರನೇ ಪತ್ರ:- ಪಂಡಿತ ಅಮರನಾಥ ಶಾಸ್ತ್ರಿಗಳು ಕ್ರಿ. ಶ. ೩ ನೆಯ ಶತಮಾನದಲ್ಲಿ ಪಾಂಡ್ಯರಾಜರು ಸದ್ಧರ್ಮ ಪೀಠವನ್ನು ಕಟ್ಟಿಸಿದರೆಂದು ಬರೆದಿರುವ ಬಗ್ಗೆ:–

ಸದರಿ ಶಾಸ್ತ್ರಿಗಳವರು ದ್ವಾಪರ, ಕಲಿಯುಗಗಳ ಮರುಳಸಿದ್ಧರ ವಿಷ ಯವನ್ನು ವಿವೇಚಿಸುವ ಕಾಲದಲ್ಲಿ ೩ ನೆಯ ಶತಮಾನದ ಪಾಂಡ್ಯ ಅರಸರ

ಸೇವೆಯನ್ನು ಉಲ್ಲೇಖಿಸಿರುವರು. ಕಾರಣ ಈ ತರದ ಸೇವೆಯು ಕರ್ಣಾಟಕದ ಉಜ್ಜಯಿನಿಗೆ ಸೇರುವುದಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ. ೩ ನೆಯ ಶತಕದ ಈ ಶಿಲಾಲೇಖವು ಯಾವ ಉಜ್ಜಯಿನಿಯಲ್ಲಿ ಸಿಕ್ಕುತ್ತೋ. ಅದರಲ್ಲಿ ಉಜ್ಜಯಿನಿ ಮಠ, ಮರುಳಸಿದ್ಧರ ದಿವ್ಯ ನಾಮಗಳಿದ್ದರೆ ನಾವೂ ನೀವೂ ಕೂಡಿಯೇ ಒಪ್ಪಿಬಿಟ್ಟರಾಯಿತು ಇಷ್ಟೇ ಕಾರಣದಿಂದ ಉಳಿದ ಮರುಳಾರಾಧ್ಯ ವಿಜಯಕಾವ್ಯದ ಚರಿತೆಯು ಸುಳ್ಳಾಗಲು ಕಾರಣವೇ ಇಲ್ಲ.

ಸರಿ! ಇಷ್ಟಕ್ಕೆ ತಮ್ಮ ಸಂದೇಹದ ಪತ್ರಗಳಿಗೆ ಉತ್ತರವಿತ್ತು ಲೇಖನಿಕೆಗೆ ವಿಶ್ರಾಂತಿಯನ್ನು ಕೊಡುವೆವು. ಮತ್ತು ಇನ್ನೂ ಸಂದೇಹಗಳು ಬಂದರೆ ಅವಶ್ಯಕವಾಗಿ ಅರಿಕೆ ಮಾಡಿರಿ. ಸಂತೋಷವಾಗಿ ಉತ್ತರವೀಯುವೆವು. ಪದ್ಯಮಯವಾದ "ಮರುಳಾರಾಧ್ಯ ವಿಜಯ ಕಾವ್ಯ" ವನ್ನು ಶೀಘ್ರವಾಗಿ ಅಚ್ಚುಮಾಡಿಸುವುದರಲ್ಲಿದ್ದೇವೆ. ಅದು ಬಯಲಿಗೆ ಬಂದರೆ ಪಂಡಿತರಿಗೆ ಇನ್ನೂ ಅನುಕೂಲವಾಗಬಹುದು. ವಿಶೇಷಗಳಿಗೆ ಆಗಾಗಲೇ ಅರಿಕೆ ಮಾಡಿರಿ.

ಇದಕ್ಕೆ ನನ್ನ ೨ ನೆಯ ಪತ್ರ:— ದಿ. ೧೫-೯-೪೯ ರಲ್ಲು

ಶ್ರೀಗಳವರೇ,

ತಮ್ಮ ಪತ್ರ ಮುಟ್ಟಿತು. ತಮಗೆ ನಾನು ಬರೆದ ಪತ್ರದಲ್ಲಿ ಉಜ್ಜಯಿನೀ ಪೀಠದ ಪರಂಪರೆಗಳು ಮೂರು ಇವೆ ಈ ಮೂರರಲ್ಲಿ ತಾವು ಯಾವುದರ ಬಗ್ಗೆ ಪ್ರಾಮಾಣ್ಯ ಬುದ್ಧಿಯನ್ನು ಇಟ್ಟುಕೊಂಡಿರುವಿರಿ; ತಿಳಿಸಿರೆಂದು ಮಾತ್ರ ಬರೆದಿದ್ದೆನು. ಆದರೆ ತಾವು ತಮ್ಮ ಪತ್ರದಲ್ಲಿ ಅನೇಕ ವಿಷಯಗಳನ್ನು ಉಲ್ಲೇಖಿಸಿ ನನ್ನ ಮೂಲ ಪ್ರಶ್ನೆಯ ಬಗ್ಗೆ ಅನಾಸ್ಥೆಯನ್ನು ವ್ಯಕ್ತಪಡಿಸಿರುವಿರಿ. ತಾವು ಉಲ್ಲೇಖಿಸಿರುವ ವಿಷಯಗಳನ್ನು ಓದಿದ ಮೇಲೆ ಮತ್ತೆ ಅನೇಕ ಸಂಶಯಗಳು ನನಗೆ ಉಂಟಾಗಿವೆ. ಆದರೆ ನನ್ನ ಮೂಲ ಪ್ರಶ್ನೆಗೆ ಉತ್ತರ ದೊರೆಯುವವರೆಗೆ ನಾನು ಆ ಸಂಶಯಗಳ ನಿವಾರಣೆಬಗ್ಗೆ ತಮ್ಮನ್ನು ಪ್ರಶ್ನಿಸುವುದು ಪ್ರಾಸಂಗಿಕವಾಗಲಾರದು. ಆದ್ದರಿಂದ ತಾವು ನನ್ನ ಮೂಲ ಪ್ರಶ್ನೆಯಾದ ಮೂರು ಪರಂಪರೆಗಳ ಬಗ್ಗೆ ತಾವು ಯಾವುದನ್ನು ಒಪ್ಪುತ್ತೀರಿ ಎಂಬುದನ್ನು ಈಗಲಾದರೂ ತಿಳಿಸುವಿರಾಗಿ ನಂಬಿರುತ್ತೇನೆ. ತಾವು ತಿಳಿಸಿ

ರುವಂತೆ ತಮಗೆ ಆ ಸಂದರ್ಭದಲ್ಲಿ ಪರಂಪರೆಗಳ ಕಡೆಗೆ ದೃಷ್ಟಿ ಇರದ ಮಾತ್ರಕ್ಕೆ ಆ ಪರಂಪರೆಯು ಅವ್ಯವಸ್ಥಿತ ಹಾಗೂ ಅನಿರ್ಧಾರಿತವಾಗಿರಬೇಕೆಂದು ಪ್ರಾಯಶಃ ತಾವೂ ಬಯಸಲಾರಿರಿ. ಆದರೆ ಆ ಸಂದರ್ಭವೇನೇ ಇರಲಿ ಈಗಲಾದರೂ ತಾವು ಈ ಬಗ್ಗೆ ಒಂದು ನಿರ್ಣಯವನ್ನು ಕೈಕೊಳ್ಳಲೇಬೇಕಾಗಿದೆ. ಆದ್ದರಿಂದ ತಾವು ಈ ಮೂರು ಪರಂಪರೆಗಳ ಬಗ್ಗೆ ಯಾವುದನ್ನು ಒಪ್ಪುತ್ತೀರೆಂಬುದನ್ನು ಈಗಲಾದರೂ ತಿಳಿಸಬೇಕಾಗಿ ಸೂಚಿಸುತ್ತೇನೆ. ಒಂದು ಪೀಠ ಅಥವಾ ಒಂದು ಮನೆತನದ ಬಗ್ಗೆ ಒಂದೇ ಒಂದಾದ ನಿಶ್ಚಿತ ಪರಂಪರೆ ಇರುವುದು ಸಹಜವೇ ವಿನಾ ಒಂದು ಕಡೆ ೨೫ ಜನರಿಂದಲೂ, ಇನ್ನೊಂದು ಕಡೆ ೧೦೯ ಜನರಿಂದಲೂ, ಮತ್ತೊಂದು ಕಡೆ ೭ ಜನರಿಂದಲೂ ಕೂಡಿಕೊಂಡಿರುವದೆಂದರೆ ಸಹಜವಾಗಲಾರದು. ತಾವು ಹೇಳಿರುವಂತೆ ಮತ್ತೊಮ್ಮೆ ೭೦೦೦ ಜನರಾದರಂತೂ ಆ ಬಗ್ಗೆ ಜನರಿಗೆ ನಂಬಿಕೆಯೇ ಉಳಿಯಲಾರದು! ಆದ್ದರಿಂದ ನನ್ನ ಈ ಪ್ರಶ್ನೆಯನ್ನು ಆಳವಾಗಿ ಅಭ್ಯಸಿಸಿ ಸಮರ್ಪಕವಾದ ಹಾಗೂ ನಿಸ್ಸಂದಿಗ್ಧವಾದ ಉತ್ತರವನ್ನು ಕೊಡುವಿರಾಗಿ ನಂಬಿರುತ್ತೇನೆ

ನಾನು ತಮ್ಮ ಏಜಂಟರ ವಿಳಾಸಕ್ಕೆ ಈ ಮುಂಚೆಯೇ ಒಂದು ರಿಜಿಸ್ಟರ್ ಪತ್ರವನ್ನು ಬರೆದು ಅದರಲ್ಲಿ ಈ ಕೆಳಗಿನ ವಿಷಯವನ್ನು ನಮೂದಿಸಿದ್ದೆನು.

"ಆದಿ ಮರುಳಸಿದ್ಧನು ಕ್ರಿ.ಶ. ೧೦೫೩ ರಲ್ಲಿ ಕಾಲವಾದ ಮೇಲೆ ೮ ಜನ ಗುರುಗಳು ೨೪೫ ವರ್ಷಗಳ ವರೆಗೆ ಆಳಿದರೆಂದು ತಾವು ಪ್ರಮಾಣವೆಂದು ಹೇಳುತ್ತಿರುವ ವಿಜಯ ಕಾವ್ಯವು ಹೇಳಿದೆ ಮತ್ತು ಇದೇ ವಿಜಯ ಕಾವ್ಯವು ಈ ೮ ಜನರ ನಂತರ ಕ್ರಿ.ಶ. ೧೦೬೨ರಲ್ಲಿ ಅಂದರೆ ೨೪೫ ವರ್ಷಗಳ ನಂತರವಲ್ಲ. ೯ ವರ್ಷಗಳ ನಂತರ ಹೂಲಿ ಮರುಳಸಿದ್ಧನು ಪಟ್ಟಕ್ಕೆ ಬಂದನೆಂದು ಹೇಳುತ್ತಿದೆ ತಾವೂ ಸಹ ತಮ್ಮ ಲೇಖನದಲ್ಲಿ ಇದೇ ರೀತಿ ಹೇಳಿರುತ್ತೀರಿ. ಒಂದು ಕಡೆ ೨೪೫ ವರ್ಷಗಳೆಂದೂ, ಮತ್ತೊಂದು ಕಡೆ ೯ ವರ್ಷಗಳೆಂದೂ ಹೇಳುತ್ತಿರುವುದರಿಂದ ಉಂಟಾಗಿರುವ ಈ ಅಸಂಬದ್ಧತೆಯನ್ನು ದೂರೀಕರಿಸುವುದೆಂತು! " ಈ ನನ್ನ ಪತ್ರವು ತಮಗೆ ಇನ್ನೂ ಮುಟ್ಟಿಲ್ಲವೆಂದು ತೋರುತ್ತದೆ. ತಾವೂ ಇದಕ್ಕೂ ಸಹ ಸದುತ್ತರವನ್ನು ಕೊಡುವಿರಾಗಿ ಭರವಸೆ ಇದೆ.

ಇನ್ನು ಪೋಂಬದ ಗಂಗಾಧರ ಶಿವಾಚಾರ್ಯರಿಗೆ ಬರೆದ ಪತ್ರದ ವಿಚಾರ.—

ಶ್ರೀಯುತರು ತಾವು ಕಂಡಂತೆ ಬರೆದಿರಬಹುದು. ಆದರೆ ತಾವು ತಮ್ಮ ಪತ್ರದಲ್ಲಿ ಉಜ್ಜಯಿನಿಯವರು ಹೇಳುವುದು ಮಾದಿಗ ಮರುಳಪ್ಪನ ಸಮಾಧಿ ಎಂತಲೇ. ಈ ರೀತಿ ತಾವು ಬರೆದು ಅವರ ಅಭಿಪ್ರಾಯವನ್ನು ಪುಷ್ಟೀಕರಿಸಿರುವುದು ಉಚಿತವಲ್ಲ. ಏಕೆಂದರೆ ತಾವು ತಮ್ಮ ಲೇಖನದಲ್ಲಿ ಪುಟ ೧೩೮ ರಲ್ಲಿ “ ಹರಳಯ್ಯನ ಸಮಾಧಿಯು ಉಜ್ಜಯಿನಿಯ ಮಾದಿಗರ ಕೇರಿಯಲ್ಲೂ ಮಾದಿಗ ಮರುಳಸಿದ್ಧನ ಸಮಾಧಿಯು ಸಿಂಧೋಗಿಯಲ್ಲಿಯೂ ಈಗಲೂ ಇರುವುವು ” ಎಂದು ಉಲ್ಲೇಖಿಸಿರುತ್ತೀರಿ. ಅಂದರೆ ತಮ್ಮ ಅಭಿಪ್ರಾಯದಲ್ಲಿ ತಾವು ಆ ಲೇಖನವನ್ನು ಬರೆಯುವ ಕಾಲದಲ್ಲಿ ಉಜ್ಜಯಿನಿಯಲ್ಲಿ ಹರಳಯ್ಯನ ಸಮಾಧಿಯನ್ನು ನೋಡಿದಂತೆಯೂ, ಈ ಪತ್ರವನ್ನು ಬರೆಯುವ ಕಾಲದಲ್ಲಿ ಮರುಳಪ್ಪನ ಸಮಾಧಿಯನ್ನು ನೋಡಿದಂತೆಯೂ ಅರ್ಥವಾಗುತ್ತದೆ. ತಾವು ಈ ಸಂಶಯವನ್ನು ನಿವಾರಿಸುವುದು ಅತ್ಯಾವಶ್ಯಕವಾಗಿದೆ.

ಪಂಡಿತ ಅಮರನಾಥ ಶಾಸ್ತ್ರಿಗಳಿಗೆ ಬರೆದ ಪತ್ರದ ವಿಚಾರ:—

ನಾನು ಈ ಪತ್ರದಲ್ಲಿ ೩ ನೆಯ ಶತಮಾನದಲ್ಲಿ ಪಾಂಡ್ಯರಾಜರಿದ್ದುದಕ್ಕೆ ಆಧಾರವೇನು? ಎಂದು ಪ್ರಶ್ನಿಸಿರುತ್ತೇನೆ. ಈ ಪ್ರಶ್ನೆಗೆ ತಮ್ಮ ಪತ್ರದಲ್ಲಿ ಉತ್ತರವಿಲ್ಲ, ಈಗಲಾದರೂ ಉತ್ತರಿಸುವಿರಾಗಿ ನಂಬಿಕೆ ಇದೆ. ಮೂರನೆಯ ಶತಕದ ಸೇವೆಯು ಕರ್ಣಾಟಕ ಉಜ್ಜಯಿನಿಗೆ ಸೇರುವುದಿಲ್ಲವೆಂದು ತಾವು ತಮ್ಮ ಪತ್ರದಲ್ಲಿ ಬರೆದಿರುತ್ತೀರಿ. ಮತ್ತು ಮೂರನೆಯ ಶತಕದ ಶಿಲಾಲೇಖವು ಯಾವ ಉಜ್ಜಯಿನಿಯಲ್ಲಿ ಸಿಕ್ಕುತ್ತದೆಯೋ ಅದರಲ್ಲಿ ಉಜ್ಜಯಿನಿ ಮಠ, ಮರುಳಸಿದ್ಧರ ದಿವ್ಯನಾಮಗಳಿದ್ದರೆ ನಾವೂ ನೀವೂ ಕೂಡಿಯೇ ಒಪ್ಪಿ ಬಿಟ್ಟರಾಯಿತು ಎಂದು ಬರೆದಿರುತ್ತೀರಿ. ತಮ್ಮ ಈ ಬರಹದಿಂದ ಅನೇಕ ಪ್ರಶ್ನೆಗಳು ಉದ್ಭೂತವಾಗಿವೆ. ೧) ಮೂರನೆಯ ಶತಕದ ಶಿಲಾಲೇಖವು ಈ ವರೆಗೂ ಸಿಕ್ಕಿಲ್ಲವೇ ? ೨) ಸಿಕ್ಕಿಲ್ಲವಾದರೆ ಯಾವ ಆಧಾರದ ಮೇಲೆ ಲೇಖಕರು ಈ ಶಿಲಾಲೇಖದ ಪ್ರಸಂಗವನ್ನು ಎತ್ತಿದರು ? ೩) ಸಿಕ್ಕಿರುವುದಾದರೆ ಉಜ್ಜಯಿನಿಗಳೆರಡರಲ್ಲಿ ಯಾವ ಉಜ್ಜಯಿನಿಯದೆಲ್ಲೆಂಬುದು ನಿರ್ಧರವಾಗಿ

ಲ್ಲವೇ ? ೪) ಮತ್ತು ಆ ಶಿಲಾಲೇಖನದಲ್ಲಿ ಉಜ್ಜಯಿನಿ ಮಠ ಮತ್ತು ಮರುಳ ಸಿದ್ಧರ ದಿವ್ಯನಾಮಗಳ ಉಲ್ಲೇಖಗಳು ಇರುವ ಮತ್ತು ಇಲ್ಲದಿರುವ ಬಗ್ಗೆ ನಿರ್ಧಾರವಾಗಿಲ್ಲವೇ ? ೫) ಮೂರನೆಯ ಶತಮಾನದಲ್ಲಿ ಪಾಂಡ್ಯರು ಕಟ್ಟಿಸಿದ ಸದ್ಧರ್ಮ ಸಿಂಹಾಸನವನ್ನು ಮರುಳ ಸಿದ್ಧನೇರಿದನೆಂದ ಮೇಲೆ ತಾವು ಹೇಳಿರುವ ಕ್ರಿ. ಶ. ೯೦೨ ರ ಕಾಲವು ಅಸತ್ಯವಾಗುವುದಿಲ್ಲವೇ ? ೬) ಮೂರನೆಯ ಶತಮಾನದ ಸೀಮೆಯು ಕರ್ನಾಟಕ ಉಜ್ಜಯನಿಗೆ ಸಂಬಂಧವಿಲ್ಲವಾದಲ್ಲಿ ಕರ್ನಾಟಕದ ಅರಸರಾದ ಪಾಂಡ್ಯರ ವ್ಯಾಪ್ತಿಯು ಮಾಳವೋಜ್ಜಯಿನಿಯವರೆಗೆ ಇತ್ತೆಂಬುದಕ್ಕೆ ಐತಿಹಾಸಿಕ ಆಧಾರವೇನು ?

ಈ ಎಲ್ಲಾ ಪ್ರಶ್ನೆಗಳಿಗೂ ತಮ್ಮಿಂದ ಉತ್ತರಗಳನ್ನು ನಿರೀಕ್ಷಿಸಿದ್ದೇನೆ.

ಪಂಡಿತರತ್ನ ಚನ್ನಬಸವ ಕವಿಗಳಿಗೆ ಬರೆದ ಪತ್ರದ ವಿಚಾರ:—

ತಾವು ತಮ್ಮ ಪತ್ರದಲ್ಲಿ ಈ ಕವಿಗಳೇ ವಿಜಯ ಕಾವ್ಯದ ಗದ್ಯಾನುವಾದವನ್ನು ಮಾಡಿದವರೆಂದೂ, ಅದರಲ್ಲಿ ೬೮೦೦೦ ವಚನಗಳನ್ನು ರಚಿಸಿದರು ಎಂದೂ ವಿವರಿಸಿರುವರು ಎಂದು ಬರೆದಿರುತ್ತೀರಿ. ಮತ್ತು ಮರುಳಸಿದ್ಧರೆಷ್ಟು ಜನ ? ಎಂಬ ತಮ್ಮ ಲೇಖನದಲ್ಲಿ "ಮರುಳಸಿದ್ಧರು ೬೮೦೦೦ ವಚನಗಳನ್ನು ರಚಿಸಿದರೆಂಬುದು ನಮ್ಮ ಸ್ವಂತ ಅಭಿಪ್ರಾಯವಲ್ಲ. ಮರುಳಾರಾಧ್ಯ ವಿಜಯ ಕಾವ್ಯದಲ್ಲಿ ಹೇಗೆ ಬಂದಿದೆಯೋ ಹಾಗೆ ಅಲ್ಲಿ ವಿವರಿಸಿದ್ದೇವೆ" ಎಂದು ಬರೆದಿರುತ್ತೀರಿ. ತಮ್ಮಂತೆಯೇ ಈ ಕವಿಗಳೂ ಪದ್ಯಕಾವ್ಯದಲ್ಲಿದ್ದುದನ್ನೇ ಗದ್ಯದಲ್ಲಿ ಅನುವಾದಿಸಿದ್ದಾರೆಯೇ ವಿನಃ ಅದು ಕವಿಗಳ ಸ್ವಂತ ಅಭಿಪ್ರಾಯವಾಗಲಾರದು. ಕವಿಗಳು ೬೮೦೦೦ ವಚನಗಳು ಎಲ್ಲಿ ಹೋದವು ? ಎಂದು ಪ್ರಶ್ನಿಸಿರುವುದು ಆ ವಚನಗಳಿಲ್ಲನೆಂಬ ಅಭಿಪ್ರಾಯವನ್ನಿಟ್ಟುಕೊಂಡೇ ಎಂಬುವುದು ಸುಸ್ಪಷ್ಟವಾಗುತ್ತದೆ ಮತ್ತು ಗದ್ಯಾನುವಾದವನ್ನು ಮಾಡಿರುವವರು ಪಂಡಿತರತ್ನ ಚನ್ನಬಸವ ಕವಿಗಳಲ್ಲ. ಪಂ|| ಕವಲೀ ಚನ್ನಬಸಪ್ಪನವರು ಈ ಎರಡು ಹೆಸರುಗಳು ಒಬ್ಬರಿಗೆ ಸಂಬಂಧಪಟ್ಟವೆಂಬುದನ್ನು ಹೇಗೆ ತಿಳಿಯಲು ಸಾಧ್ಯವಿತ್ತು ಆದರೆ ತಮ್ಮ ಪತ್ರವನ್ನು ನೋಡಿ ನಿರುಪಾಯನಾಗಿ ಒಬ್ಬನೇ ಎಂದು ಭಾವಿಸಿದೆನು. ಇವರ ಹೆಸರಿನ ಈ ಭಿನ್ನ ಸ್ವರೂಪದ ಕಾರಣವನ್ನು ವಿವರಿಸುವುದು ಉಚಿತವಾಗಿದೆ. ಈ ಎಲ್ಲಾ ಕಾರಣದಿಂದ ನಾನು ಗದ್ಯಾನು

ನಾದವನ್ನು ಚೆನ್ನಾಗಿ ನೋಡಿದ್ದರೂ ಈ ಸಂದೇಹವು ಬಾರದಿರಲು ಕಾರಣವೇ ಇಲ್ಲ. ಆದ್ದರಿಂದ ಕವಿಗಳು ತಮ್ಮ ಸ್ವಂತ ಅಭಿಪ್ರಾಯದಲ್ಲಿ ೬೫೦೦ ವಚನಗಳನ್ನು ರಚಿಸಿದರೆಂಬುದನ್ನು ಒಪ್ಪಿಯೇ ಇಲ್ಲವೆಂಬುದು ಈಗಲೂ ಸ್ಪಷ್ಟವಾಗಿದೆ. ತಾವೂ ಸಹ ರಚಿಸಿದರೆಂದು ಹೇಳುವುದು ನನ್ನ ಸ್ವಂತ ಅಭಿಪ್ರಾಯವಲ್ಲವೆಂದು ಹೇಳುತ್ತೀರಿ. ಆ ವಚನಗಳು ಸಿಕ್ಕಿರುವ ಅಥವಾ ಸಿಕ್ಕದಿರುವ ಬಗ್ಗೆ ನನ್ನ ಪ್ರಶ್ನೆಯಿಲ್ಲ. ರಚಿಸಿದ ಬಗ್ಗೆಯೇ ಇರುವುದು. ಆದ್ದರಿಂದ ರಚಿಸಿದ ಬಗ್ಗೆಯೇ ತಾವು ಮತ್ತು ಕವಿಗಳೂ ಸ್ವಂತ ಅಭಿಪ್ರಾಯವನ್ನು ಕೊಡದಿರುವಾಗ ಅವು ಎಲ್ಲಿ ಹೋದವು ಎಂಬ ಕವಿಗಳ ಪ್ರಶ್ನೆಗೆ ಉತ್ತರವೆಲ್ಲಿಂದ ದೊರೆಯಬೇಕು ?

ತಾವು ತಮ್ಮವಲ್ಲದ ಮೂರು ಪತ್ರಗಳಿಗೂ ಈಗ ಉತ್ತರವಿತ್ತಿರುವಂತೆ ಮುಂದೆಯೂ ಉತ್ತರ ಕೊಡುವಿರಾಗಿ ನಂಬಿರುತ್ತೇನೆ.

ಇದಕ್ಕೆ ಶ್ರೀ ಸ್ವಾಮಿಗಳವರ ಉತ್ತರ ಗೇ. ನಂ. 6105/18-9-49.

ಮಹನೀಯರೇ,

ತಾವು ನಮ್ಮ ಏಜಂಟರಿಗೆ ರಿಜಿಸ್ಟರಿನೊಂದಿಗೆ ಕಳುಹಿಸಿದ ಪತ್ರದಿಂದ ವಿಷಯವೆಲ್ಲವೂ ವಿದಿತವಾಯಿತು. ತಮಗೆ ಈ ಮೊದಲು ತಮ್ಮ ಪತ್ರಕ್ಕುತ್ತರವಾಗಿ No. 4601/12-9-49 ಅಪ್ಪಣೆ ಕೊಡಿಸಿದ ವಿಶಾಲವಾದ ಪತ್ರದಿಂದ ಎಷ್ಟೋ ವಿಷಯಗಳು ತಿಳಿದಿರಬಹುದು.

ಈಗ ಆದಿ ಮರುಳಸಿದ್ಧ-ಹೂಲಿಯ ಮರುಳಸಿದ್ಧ ಇತರ ಕಾಲಮಾನದ ವಿಷಯದಲ್ಲಿ ನೀವು ಸಂದೇಹಪಟ್ಟಿರುವ ಬಗ್ಗೆ ಈ ಕೆಳಗಿನಂತೆ ಸರಿಮಾಡಿಕೊಳ್ಳಬಹುದೆಂದು ನಮ್ಮ ಅಭಿಪ್ರಾಯ.

ಆದಿ ಮರುಳಸಿದ್ಧನು ಕ್ರಿ.ಶ. ೧೧೫೨ರ ಅಂದಾಜಿಗೆ ಶಿವೈಕ್ಯನಾದನು.
ಅವನ ಶಿಷ್ಯ ಮುಕ್ತಿಮುನಿಯ ಕೊನೆ ಕ್ರಿ.ಶ. ೧೧೪೨.
,, ಸಿದ್ಧಲಿಂಗನ ಕೊನೆ ,, ೧೧೮೭.

ಅವನ ಶಿಷ್ಯ ಸಿದ್ಧೇಶ್ವರನ ಕೊನೆ  ಕ್ರಿ.ಶ. ೧೫೬೭.

,,  ಸಿದ್ಧನಾಥನ ಕೊನೆ  ,,  ೧೫೭೭ ಆಗುತ್ತದೆ.

ಈ ಸಮಯಕ್ಕೆ ಹೂಲಿಯ ಮರುಳಸಿದ್ಧನು ಉಜ್ಜಯಿನೀ ಪಟ್ಟಕ್ಕೆ ಬಂದನೆಂದು ಗ್ರಹಿಸಿದರೂ ಯೊಗಸಿದ್ಧನಾದ ಅವನು ೪೯೬ ವರ್ಷಗಳನ್ನು ತನ್ನ ಹೂಲಿಯ ಗುರುಕುಲದಲ್ಲಿ ಕಳೆದಿದ್ದನೆಂದು ಗ್ರಹಿಸಬೇಕು. ಯೋಗೀಶ್ವರರಿಗೆ ಈ ಧೀರ್ಘಜೀವನವು ಸುಲಭ ಸಾಧ್ಯ. ಮರುಳಾರಾಧ್ಯರ ಶಿಷ್ಯ ಆದಿ ಮುಕ್ತಿಮುನಿಯು ೩೦೦ ವರ್ಷ ಜೀವಿಸಿದ್ದಂತೆ ಮರುಳಾರಾಧ್ಯ ವಿಜಯ ಹೇಳುತ್ತಿದೆ. ಈ ಹೂಲಿಯ ಮರುಳಸಿದ್ಧ ಎಷ್ಟು ವರ್ಷ ಜೀವಿಸಿದ್ದನೆಂಬುದನ್ನು ಈ ವಿಜಯ ಹೇಳಿಲ್ಲ. ಆದುದರಿಂದ ಇವರು ಧೀರ್ಘ ಜೀವಿಗಳಾಗಿರಬೇಕೆಂದು ನಾವು ತಿಳಿದುಕೊಳ್ಳಬೇಕಾಗಿದೆ.

ಮೂಲ ಮರುಳಸಿದ್ಧನ ಕೊನೆ ಕ್ರಿ.ಶ. ೧೦೫೨ ಆದರೆ ಹೂಲಿಯ ಮರುಳಸಿದ್ಧನ ಜನನ ಕ್ರಿ.ಶ. ೧೦೮೧. ಅಲ್ಲದೆ ೨೯ ವರ್ಷಕ್ಕೆ ಈತನು ಭೂಮಿಗೆ ಅವತರಿಸಿದುದು ಸಹಜ. ಆ ಜನನ ಕಾಲದಿಂದ ಕ್ರಿ.ಶ. ೧೫೭೭ ರವರೆಗೆ ಅಂದರೆ (೪೯೬ ವರ್ಷ) ಹೂಲಿಯಲ್ಲಿಯೇ ಯೋಗೀಶ್ವರನಾಗಿ ವಾಸ ಮಾಡಿದ್ದನೆಂದು ಗ್ರಹಿಸಬೇಕು.

ಶಾ ಶಕ. ೧೦೦೩ (ಕ್ರಿ.ಶ. ೧೦೮೧) ರ ಕಾಲಮಾನವು ಹೂಲಿಯ ಮರುಳಸಿದ್ಧನ ಜನನಕ್ಕೆ ಸಂಬಂಧಿಸಿದುದು. ಮರುಳಾರಾಧ್ಯ ವಿಜಯವೂ (ಸಂ. ೧ ಪದ್ಯ ೩೪ ರಿಂದ) "ಸಂಜನಿಸಿ" ಎಂತಲೇ ಹೇಳಿದೆ. ನಾವು ವಿವರಿಸಿರುವ ಆದಿ ಮರುಳಸಿದ್ಧ, ಹೂಲಿಯ ಮರುಳಸಿದ್ಧ, ಸಿಂದೋಗಿಯ ಮರುಳಸಿದ್ಧರ ಚರಿತ್ರೆಯು ಈ ಮರುಳಾರಾಧ್ಯ ವಿಜಯದಿಂದಲೇ. ಆದ ಕಾರಣ ಆ ಆಧಾರಕ್ಕೆ ಲವಲೇಶವೂ ವ್ಯತ್ಯಾಸವಾಗಿ ಹೋಗಲು ಬರುವಂತಿಲ್ಲ.

ಆದರೆ ಮರುಳಸಿದ್ಧಾಂಕದ ೧೩೩ ನೆಯ ಪುಟದಲ್ಲಿ ಕ್ರಿ.ಶ. ೧೦೮೧ರ ಜನನ ಕಾಲವೇ ಹೂಲಿಯ ಮರುಳಸಿದ್ಧನ ಪಟ್ಟಾಧಿಕಾರ ಕಾಲವೆಂದು ಬಿದ್ದಿರುವುದು ಅಚ್ಚಿನ ದೋಷ. ಆದನ್ನೇ ಕ್ರಿ.ಶ. ೧೫೭೭ ಮಾಡಿಕೊಂಡರೆ ಸಂಗತವಾಗುತ್ತದೆ. ಹಾಗೆ ಗ್ರಹಿಸಿಕೊಳ್ಳಿರಿ.

ಮರುಳಸಿದ್ಧಾಂಕದಲ್ಲಿ ಮುದ್ರಣ ದೋಷಗಳು ಅಪಾರವಾಗಿವೆ. ಅಂಕ ದಲ್ಲಿ ಓದುಗರಿಗೆ ಸರಿಯಾಗಿದೆ ಎಂದುಕೊಳ್ಳುವ ಕೆಲವು ಕಡೆಯೂ ಬಹಳ ಮುದ್ರಣ ದೋಷಗಳಾಗಿವೆ. ಅದನ್ನು ನಾವು ಒಪ್ಪಲೇಬೇಕು.

ಹೂಲಿಯ ಮರುಳಸಿದ್ಧರ ಬಗ್ಗೆ ಕ್ರಿ.ಶ. ೧೫೧೩ ರಲ್ಲಿ ಲಕ್ಷ್ಮೇಶ್ವರದಲ್ಲಿ ಒಂದು ಶಿಲಾಲೇಖ ರಚನೆಯಾಗಿರುವುದು ನಮ್ಮ ಅಂಕದ ೯೩ ನೆಯ ಪುಟ ದಲ್ಲಿಯ ವೇ|| ಆಸ್ಥಾನ ವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಲೇಖನದಿಂದ ತಿಳಿಯುತ್ತದೆ. ಆ ಶಿಲಾ ಲೇಖನವನ್ನು ಓದಿಸಿ ಸಂಗ್ರಹಿಸು ವುದು ಅತ್ಯಾವಶ್ಯಕ.

ತಾವು ಅತ್ಯಂತ ಶ್ರದ್ಧೆಯಿಂದ ಹಾಗೂ ಕುತೂಹಲದಿಂದ ಅಂಕದ ವಿಷ ಯದಲ್ಲಿ ಶೋಧಕ ಬುದ್ಧಿಯಿಂದ ನಮ್ಮನ್ನು ತಿಳಿಯುತ್ತಿರುವುದಕ್ಕೆ ನಮಗೆ ಅಪಾರ ಸಂತೋಷವಾಗುತ್ತದೆ. ಒಟ್ಟಾರೆ ಧರ್ಮಸಾಹಿತ್ಯವನ್ನು ಇತಿಹಾ ಸಕ್ಕೆ ಅಂಟಿಸಿಕೊಂಡು ಸಾಹಿತ್ಯದ ದಾರಿಯನ್ನು ತುಳಿಯುವುದೇ ವೀರಶೈವ ಸಾಹಿತಿಗಳ ಕರ್ತವ್ಯವಾದರೆ ಸರ್ವರೀತಿಯಿಂದ ವೀರಶೈವ ಸಮಾಜದ ಉನ್ನ ತಿಯಾಗಬಹುದು.

ತಾಜಾಕಲಮು:- ನಿಮ್ಮ ೧೫—೯—೬೯ ರ ಪತ್ರವೀಗ ತಲುಪಿತು. ನಮ್ಮ ಮೊದಲಿನ ಪತ್ರವನ್ನು ನೀವು ಇನ್ನೊಮ್ಮೆ ಸರಿಯಾಗಿ ಅವಲೋಕಿಸಿ. "ಅಂಕದ ಸ್ವರೂಪವೇನು ?" ಒಬ್ಬ ವ್ಯಕ್ತಿಯ ಬಗ್ಗೆ ಸಿಗಬಹುದಾದ ವಿಷಯುಗಳ ಗೊತ್ತನ್ನು ಶೇಖರಿಸುವುದೇ ಅಂಕವಾಗಿದೆ ಎಂಬುದನ್ನು ಗ್ರಹಿಸಿ ಕೊಂಡರೆ ನಿಮಗೆ ನಾನಾ ಬಗೆಯಾಗಿ ಸಂಶಯುಗಳು ಬರಲಾರವೆಂದು ನಾವು ಭಾವಿಸುತ್ತೇವೆ. ಆದರೂ ನಿಮಗೂ ಇತರರಿಗೂ ಅಂಕದಿಂದ ಹುಟ್ಟಬಹು ದಾದ ಸಂಶಯುಗಳನ್ನು ಸಂಗ್ರಹಿಸಿ ಪ್ರಕಟಿಸಬೇಕಾಗಿರುವ ವಿಜಯಕಾವ್ಯದಲ್ಲಿ ಉತ್ತರ ಕೊಡಲು ನಿರ್ಧರಿಸಿದ್ದೇವೆ.

ಉಜ್ಜಯಿನೀ ಪೀಠವನ್ನು ಎಷ್ಟು ಜನರಾಳಿದರೆಂಬ ಪರಂಪರೆಯನ್ನು ಹೆಣೆಯುವುದಕ್ಕಾಗಿ ಅಂಕ ಪ್ರಕಟವಾಗಿಲ್ಲ. ಮಾದಿಗ ಮರುಳಸಿದ್ಧನಿಗಿಂತ ಬೇರೊಬ್ಬ ಮರುಳಸಿದ್ಧನೇ ಇಲ್ಲವೇ ? ಎಂಬುದನ್ನು ಕಂಡುಕೊಳ್ಳುವ ಸದು

ದ್ದೇಶಕ್ಕಾಗಿ ಈ ಅಂಕ ಪ್ರಯುಕ್ತಿಸಿದೆ ಮಾತ್ರ ಜಗತ್ತಿಗೆ ಸಂದೇಹ ಬಂದಿರು ವುದೂ ಇದೇ ವಿಷಯದಲ್ಲಿ. ನೀವು ಬರೆದಿರುವಂತೆ ಮೊರಬದ ಗಂಗಾಧರ ಶಿವಾಚಾರ್ಯರ ಅಭಿಪ್ರಾಯವನ್ನು ಪುಷ್ಟೀಕರಿಸುವುದು ನಮ್ಮ ಇಚ್ಛೆಯಲ್ಲ; ವರ.ಆರಾಧ್ಯ ವಿಜಯದಲ್ಲಿ ಕಾಣಿಸಿರುವಂತೆ ಉಜ್ಜಯಿನಿಯಲ್ಲಿ ಶಿವಾಧೀನ ನಾದವರು ಮಾದರಸರು. ಅವನು ಕಟ್ಟಿರುವ ಆ ಕೇರಿಯಲ್ಲಿನ ಗದ್ದಿ ಮರುಳಸಿದ್ಧನ ಹೆಸರಿನದು. ಕಾರಣ ಪ್ರತೀತಿ. ಮಾದಿಗ ಮರುಳನ ಸಮಾಧಿ ಎಂದಿದೆ ಎಂಬುದನ್ನು ನೀವು ತಿಳಿದುಕೊಳ್ಳಲೆಂದು ನಾವು ಹಾಗೆ ಅಪ್ಪಣೆ ಮಾಡಿರುವೆವು. ಅದೇ ೧೩೮ ನೆಯ ಪುಟವನ್ನೇ ಸರಿಯಾಗಿ ಅವಲೋಕಿಸಿರಿ. ಮತ್ತು ಸಂಪಾದಕೀಯದ ೧೩ ನೆಯ ಪುಟವನ್ನು ನೋಡಿರಿ.

ಪ॥ ಕವಲಿ ಚೆನ್ನಬಸಪ್ಪನವರಿಗೆ ಚೆನ್ನಬಸವ ಕವಿಗಳೆಂದು ಎರಡು ಹೆಸರು ಬರಲು ಕಾರಣವೇನೆಂದು ಕೇಳಿದ್ದೀರಿ ಅವರು ಕವಿಗಳೂ, ಲೇಖಕರೂ ಆಗಿರುವುದರಿಂದ ಹಾಗೆ ಬರೆಯುತ್ತಿದ್ದಾರೆಂದು ನಮ್ಮ ಭಾವನೆ. ಅಲ್ಲದೆ ಅವರು ಇನ್ನೂ ಮೂರನೆಯ ಹೆಸರಿನಿಂದಲೂ ಪ್ರಸಿದ್ಧರಾಗಿದ್ದಾರೆ. ಬಹಳ ಮಂದಿ ಅವರಿಗೆ "ಪಂಡಿತ ಕವಲಿ" ಯವರೆಂತಲೇ ಹೆಚ್ಚಾಗಿ ಕರೆ ಯುತ್ತಾರೆ. ಎಲ್ಲರ ಬಗ್ಗೆ ನಾವೇ ಉತ್ತರವೀಯಬೇಕೆಂಬ ಅಭಿಪ್ರಾಯ ನಮಗಿರಲಿಲ್ಲ. ನಿಮಗಿರುವ ಅವಸರವನ್ನು ಕಂಡುಕೊಂಡು ಹಾಗೆ ಅಪ್ಪಣೆ ಕೊಡಿಸಬೇಕಾಯಿತು. ಅವರನ್ನೂ ಪ್ರತ್ಯೇಕ ನೀವು ಕೇಳಿಕೊಳ್ಳಲು ನಮ್ಮ ಅಂತಕವಿಲ್ಲ.

ಈ ಮುಂದೆ ನಾವುಗಳು ಶಿಷ್ಯೋದ್ಧಾರ ನಿಮಿತ್ತ ದೇಶ ಸಂಚಾರವನ್ನು ಕೈಕೊಳ್ಳುವುದರಿಂದ ತಾ॥ ೨೮-೯-೪೯ ರ ಮುಂದೆ ನಿಮ್ಮೊಡನೆ ಪತ್ರ ವ್ಯವ ಹಾರಕ್ಕೆ ಅನುಕೂಲವಾಗುವುದಿಲ್ಲ ಎಂಬುದನ್ನು ತಿಳಿಸಬಯಸುವೆವು.

ಈ ಮೇಲ್ಕಂಡ ಪತ್ರದಲ್ಲಿಯ ನನ್ನ ರಿಜಿಸ್ಟರ್ ಪತ್ರದಲ್ಲಿದ್ದ ವಿಷಯವು ನನ್ನ ಎರಡನೆಯ ಪತ್ರದಲ್ಲಿರುವುದರಿಂದ ಅದನ್ನು ಪ್ರತ್ಯೇಕ ಪ್ರಕಟಿಸಿಲ್ಲ. (ಲೇಖಕ)

ಶ್ರೀಗಳಿಂದ ಈ ಪತ್ರ ಬಂದ ಮೇಲೆ ಈ ಹಿಂದೆ ಬೇರೆ ಕಡೆ ಕೊಟ್ಟಿದ್ದವ ಪ್ರಶ್ನೆಗಳನ್ನೆಲ್ಲಾ ಬರೆದು ಈ ಕೆಳಗಿನಂತೆ ಪತ್ರ ಬರೆದಿರುತ್ತೇನೆ.

ಶ್ರೀ ಶ್ರೀಗಳವರೇ,

ನನ್ನ ಕೆಲವು ಸಂಶಯಗಳನ್ನು ನಿವಾರಿಸಲು ನಾನು ತಮ್ಮೊಡನೆ ಪತ್ರ ವ್ಯವಹಾರವನ್ನು ಮಾಡುತ್ತಿರುವೆನಷ್ಟೆ. ಒಂದೊಂದೇ ಪ್ರಶ್ನೆಗೆ ಒಂದೊಂದು ಸಲ ಪತ್ರ ಬರೆಯುತ್ತಾ ಹೋದರೆ ದೀರ್ಘಕಾಲವಾಗುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಶ್ರೀ ಮರುಳಸಿದ್ಧಾಂಕದಲ್ಲಿ ನನಗೆ ಹುಟ್ಟಿದ ಸಂಶಯಗಳನ್ನೆಲ್ಲಾ ಪ್ರಶ್ನೆಗಳನ್ನಾಗಿ ಮಾಡಿ ಈ ಮೂಲಕ ತಮ್ಮ ಕಡೆಗೆ ಕಳುಹಿಸಿದ್ದೇನೆ. ತಾವು ತಮ್ಮ ಪತ್ರದಲ್ಲಿ ಇನ್ನೂ ಸಂಶಯಗಳಿದ್ದರೆ ನಿವಾರಿಸುವುದಾಗಿ ಔದಾರ್ಯವನ್ನು ಸೂಚಿಸಿದ್ದರಿಂದ ನನಗೆ ತುಂಬಾ ಸಂತೋಷವಾಯಿತು. ಕೃಪೆಯಿಟ್ಟು ಈ ಪ್ರಶ್ನೆಗಳಿಗೆಲ್ಲಾ ಶೀಘ್ರವಾಗಿ ಉತ್ತರವಿತ್ತು ನನಗೆ ಸಹಾಯ ಮಾಡುವಿರಾಗಿ ಪೂರ್ಣ ನಂಬಿರುತ್ತೇನೆ. ತಮ್ಮ ಪ್ರತ್ಯುತ್ತರದ ನಿರೀಕ್ಷಣೆಯಲ್ಲಿರುವ.

ದಿನಾಂಕ ೮—೯—೪೯ ರಲ್ಲಿ ಹರಿಹರದ ವಿಳಾಸಕ್ಕೆ ಪಂಡಿತ ಕವಲಿ ಚನ್ನಬಸಪ್ಪನವರಿಗೆ ಬರೆದ ಪತ್ರ:-

ಶ್ರೀ ಮರುಳಾರಾಧ್ಯವಿಜಯ ಗದ್ಯಾನುವಾದದಲ್ಲಿ ನಂದೀಶ ಕವಿಯು ಗುರುರಾಜಚಾರಿತ್ರಕರ್ತನ ಶಿಷ್ಯನೆಂದೂ, ಚಾರಿತ್ರಕರ್ತನು ತನ್ನ ಹೆಂಡತಿಗೆ ಹೇಳಿದುದನ್ನು ನಂದೀಶ ಕವಿಯು ಬರೆದಿರುತ್ತಾನೆಂದೂ ತಿಳಿಸಿರುತ್ತೀರಿ. ಗುರುರಾಜ ಚಾರಿತ್ರಕರ್ತ ಸಿದ್ಧ ನಂಜೇಶನಿಗೆ ಹೆಂಡತಿಯಿದ್ದ ಬಗ್ಗೆ ಆಧಾರವೇನು? ನೀವು ಹೇಳಿರುವ ಚೆನ್ನವೀರಾಂಬೆಯು ಸಿದ್ಧನಂಜೇಶನ ಗುರುವಾದ ಸಿದ್ಧನಂಜೇಶನ ಹೆಂಡತಿಯಲ್ಲವೇ? ಗುರುವಿನ ಹೆಂಡತಿಯನ್ನು ಶಿಷ್ಯನಿಗೆ ಹೊಂದಿಸಿರುವ ನಂದೀಶ ಕವಿಯು ಯಾವ ಕಾಲದವನು? ಅವನು ಬರೆದ ಗ್ರಂಥಗಳಾವುವು? ತಿಳಿಸಿ ನನ್ನ ವಿಮರ್ಶೆಗೆ ನೆರವಾಗಬೇಕಾಗಿ ಕೋರುತ್ತೇನೆ.

ಸದರಿಯವರಿಗೆ ಬರೆದ ಮತ್ತೊಂದು ಪತ್ರ.

ತಾವು ಸಂಪಾದಿಸಿರುವ ಶ್ರೀ ಮರುಳಸಿದ್ಧಾಂಕದ ಸಂಪಾದಕೀಯದಲ್ಲಿ ಮರುಳಾರಾಧ್ಯರೇ ಬೇರೆ, ಮರುಳಸಿದ್ಧರೇ ಬೇರೆ, ಎಂದು ಬರೆದು ಅದಕ್ಕೆ

ಮರುಳಾರಾಧ್ಯ ವಿಜಯ ಕಾವ್ಯವನ್ನು ಪ್ರಮಾಣವನ್ನಾಗಿ ಸೂಚಿಸಿದ್ದೀರಿ. ಆದರೆ ತಾವೇ ಹೊರಡಿಸಿರುವ ದಿನಾಂಕ ೨೪-೬-೪೮ ರ ಪ್ರಕಟಣೆಯಲ್ಲಿ ಈ ಮರುಳಾರಾಧ್ಯ ವಿಜಯದ ಗದ್ಯಾನುವಾದವನ್ನೇ ಮರುಳಸಿದ್ಧ ಗದ್ಯ ಪುರಾಣವೆಂದು ಕರೆದಿರುತ್ತೀರಿ. ಹೀಗಿರುವಾಗ ಮರುಳಾರಾಧ್ಯ, ಮರುಳಸಿದ್ಧ ಬೇರೆ ಬೇರೆ ಎಂಬ ಅಭಿಪ್ರಾಯವು ಅಸಂಬದ್ಧವಾಗುವುದಿಲ್ಲವೇ? ಉತ್ತರವೀಯಲು ಕೋರಿದೆ.

ಎಂ. ವಿ. ಮಠದ ಇವರಿಗೆ ಬರೆದ ಪತ್ರ. ತಾ|| ೮-೯-೪೯.

ಉಜ್ಜಯಿನೀ ಕ್ಷೇತ್ರದ ಸಂಕ್ಷೇಪ ಪರಿಚಯವೆಂಬ ತಮ್ಮ ಲೇಖನದಲ್ಲಿ ಸಣ್ಣ ಪುಟ್ಟ ವಿಷಯಗಳ ಬಗ್ಗೆ ವಿಸ್ತೃತವಾಗಿ ಬರೆದು ಮುಖ್ಯವಾದ ಮೂಲ ಮರುಳಾರಾಧ್ಯ ಲಿಂಗ ಮತ್ತು ೧೪ ಜನ ಗುರುಗಳ ವಿಗ್ರಹಗಳ ಪರಿಚಯವು ಕೊಡಲ್ಪಟ್ಟಿಲ್ಲ. ಅದಕ್ಕೆ ಈ ವಿಷಯದ ಬಗ್ಗೆ ಕೂಡಲೇ ಬರೆಯಿರಿ. ಅಲ್ಲದೆ, ಶ್ರೀ ಶಿವ ಶ್ರೀ ಶೈಲ ಇವರು ಹೇಳಿರುವ ಸೋಮೇಶ್ವರ ವಿಗ್ರಹವನ್ನು ನೀವು ಕ್ಷೇತ್ರಪಾಲನೆಂದಿರುವಿರಿ. ಯಾವುದು ನಿಜ? ಜಾಗ್ರತಯಾಗಿ ಉತ್ತರವಿತ್ತು ನನ್ನ ವಿಮರ್ಶೆಗೆ ಸಹಾಯಮಾಡಲು ಕೋರಿದೆ.

ಹಿರೇಹಡಗಲಿ ಶ್ರೀ ವಿರೂಪಾಕ್ಷ ಶಾಸ್ತ್ರಿಗಳಿಗೆ ಇದೇ ದಿನಾಂಕದಲ್ಲಿ ಬರೆದ ಪತ್ರ.

ತಾವು ಶ್ರೀ ಮರುಳಸಿದ್ಧಾಂಕದಲ್ಲಿ ಒಂದು ಲೇಖನವನ್ನು ಬರೆದಿರುತ್ತೀರಿ. ಅದರಲ್ಲಿರುವ ಮರುಳಾರಾಧ್ಯ ವಿಜಯ ಕಾವ್ಯದಲ್ಲಿ ಹೇಳಲಾಗಿರುವ ೨೫ ಜನ ಗುರುಗಳ ಪರಂಪರೆಯು ತಮ್ಮ ಜ್ಞಾಪಕದಲ್ಲಿದೆಯಷ್ಟೆ. ಮತ್ತು ತಾವು ಬರೆದಿರುವ ಸಿದ್ಧಲಿಂಗೇಶ ವಿಜಯದಲ್ಲಿ ೧೮೯ ಜನ ಗುರುಗಳ ಪರಂಪರೆ ಇದೆ. ಇವುಗಳಲ್ಲಿ ಯಾವುದರ ಬಗ್ಗೆ ತಮಗೆ ಪ್ರಾಮಾಣ್ಯ ಬುದ್ಧಿ ಇದೆ. ತಿಳಿಸಿ ನನ್ನ ವಿಮರ್ಶೆಗೆ ಸಹಾಯ ಮಾಡಲು ಕೋರುತ್ತೇನೆ.

ಶ್ರೀ ಬಸವನಾಳರಿಗೆ ಇದೇ ದಿನಾಂಕ ಬರೆದ ಪತ್ರ.

ಶ್ರೀ ಮರುಳ ಸಿದ್ಧಾಂಕದಲ್ಲಿ ತಾವು ಬರೆದಿರುವ ಮುನ್ನುಡಿಯಲ್ಲಿ ದೇವ ಕವಿಯು ಮರುಳಸಿದ್ಧ ಕಾವ್ಯ ಮರುಳಸಿದ್ಧನು ಮೂಡಿಗನೆಂಬುದಕ್ಕೆ ಅಪವಾದ

ಗ್ರಂಥವೆಂದೂ ಅದೂ ಸಹ ಒಂದೇ ಒಂದೇದ್ದೂ, ಆದ್ದರಿಂದ ಇಷ್ಟರಿಂದಲೇ ಮರುಳಸಿದ್ಧನು ಮಾದಿಗನೆಂದು ಹೇಳಲು ಸಾಧ್ಯವಿಲ್ಲವೆಂದೂ ಬರೆದಿರುತ್ತೀರಿ.

ಮರುಳಸಿದ್ಧರು ಅನೇಕರೆಂದು ತಾವು ತಮ್ಮ ಮುನ್ನುಡಿಯಲ್ಲಿ ಒಪ್ಪಿಕೊಂಡಿರುತ್ತೀರಿ. ಉಜ್ಜಯಿನಿ ಮರುಳಸಿದ್ಧರು ಅನೇಕರೆಂದು ಹೇಳುವ ಮರುಳಾರಾಧ್ಯ ವಿಜಯ ಚರಿತವು ಒಂದೇ ಒಂದಾದ ಅಪವಾದವಾಗಿಲ್ಲವೇ? ಮತ್ತಾವುದಾದರೂ ಗ್ರಂಥದಲ್ಲಿ ಉಜ್ಜಯಿನೀ ಮರುಳಸಿದ್ಧರನೇಕರು ಎಂಬುದಕ್ಕೆ ಆಧಾರವಿದೆಯೇ? ತಿಳಿಸಿ ನನ್ನ ವಿಮರ್ಶೆಗೆ ಸಹಾಯಮಾಡಲು ಕೋರುತ್ತೇನೆ.

ಇದೇ ದಿನಾಂಕದಲ್ಲಿ ಎಸ್. ಹಂಚಿನಾಳು ರುದ್ರಯ್ಯನವರಿಗೆ ಬರೆದ ಪತ್ರ.

ಮರುಳಾರಾಧ್ಯ ವಿಜಯವನ್ನು ಬರೆದಿರುವ ನಂದೀಶ ಕವಿಯು ಯಾರು? ಯಾವ ಕಾಲದವನು? ಅವನು ಸಿದ್ಧನಂಜೇಶರಿಬ್ಬರಲ್ಲಿ ಯಾವ ಸಿದ್ಧನಂಜೇಶನ ಶಿಷ್ಯ? ಅವನು ಬರೆದಿರುವ ಮತ್ತಾವುದಾದರೂ ಗ್ರಂಥವಿದೆಯೇ? ಇವನು ಪೀಠವನ್ನಾಳಿದ ಎಲ್ಲಾ ಗುರುಗಳ ಕಾಲವನ್ನು ಹೇಳಿರುವಾಗ ತನ್ನ ಕಾಲವನ್ನು ಏಕೆ ಹೇಳಲಿಲ್ಲ? ಇವನು ಆದಿ ಮರುಳಸಿದ್ಧನು ಶಾ. ಶ. ೮೩೪ ರಲ್ಲಿ ಉಜ್ಜಯಿನಿಯನ್ನು ಬಿಟ್ಟು ಪಡಳಿಗೆ ಬಂದ ನಂತರ ೧೫೦ ವರ್ಷಗಳವರೆಗೆ ಇದ್ದು ಕೊಟ್ಟೂರು ಬಳಿ ಹೊಸ ಉಜ್ಜಯಿನಿಯನ್ನು ಸ್ಥಾಪಿಸಿದನೆಂದೂ ನಂತರ ೪ ಜನರು ೨೪೫ ವರ್ಷ ಆಳಿದ ಮೇಲೆ ಶಾ. ಶ. ೧೦೦೩ ರಲ್ಲಿ ಹೂಲಿ ಮರುಳಸಿದ್ಧನು ಪಟ್ಟಕ್ಕೆ ಬಂದನೆಂದೂ ಹೇಳಿರುತ್ತಾನೆ. ಈ ಸಂದರ್ಭವನ್ನು ಹೇಗೆ ಸಮನ್ವಯಗೊಳಿಸುತ್ತೀರಿ? ಸಮನ್ವಯವಾಗದಿದ್ದರೆ ನಂದೀಶ ಕವಿಯ ಬಗ್ಗೆ ಸಂಶಯಪಡಬೇಕಾಗುವುದಿಲ್ಲವೆ? ಈ ಬಗ್ಗೆ ನನ್ನ ಸಂಶಯವನ್ನು ಪರಿಹರಿಸಿ ನನ್ನ ವಿಮರ್ಶೆಗೆ ಸಹಾಯ ಮಾಡಲು ಕೋರುತ್ತೇನೆ.

ಈ ರೀತಿ ಬರೆದ ನನ್ನ ಪತ್ರಗಳಿಗೆ ಬಂದ ಉತ್ತರಗಳನ್ನು ಇಲ್ಲಿಯೇ ಪ್ರಕಟಿಸಿರುತ್ತೇನೆ. ಆದರೆ ಅನೇಕರು ಉತ್ತರವನ್ನು ಬರೆಯದೆ ಮೌನವನ್ನು ಧರಿಸಿದರು. ಇದರಿಂದ ಈ ಲೇಖಕರು ತಮ್ಮ ಹೊಣೆಯನ್ನು ಕಾಪಾಡಿ

ಕೊಳ್ಳಲು ಅಸಮರ್ಥರಾದರೆಂದು ಭಾವಿಸಲು ಅಭ್ಯಂತರವಿಲ್ಲ. ಜವಾಬು ಬರೆದಿರುವರಾದರೂ ಎರಡೇ ಜನರು. ಮೊದಲನೆಯವರು ಹುಬ್ಬಳ್ಳಿಯ ವಕೀಲ್ ಹಿರೇಮಠರು. ಎರಡನೆಯವರು ಶ್ರೀ ಶೈಲದ ಶ್ರೀಗಳವರು.

ವಕೀಲ್ ಹಿರೇಮಠರು ಬರೆದ ಪತ್ರವು ವಾಚಕರಿಗೆ ನಗೆಯುನ್ನುಂಟು ಮಾಡದಿರದು. ಅವರಿಗೆ ಎರಡನೆಯ ಸಲ ಬರೆದ ಪತ್ರದಲ್ಲಿ ಅವರ ಅಂತರಾಳವು ಬಹಿರಂಗವಾಗಿದೆ. ಶ್ರೀಯುತರು ತಮ್ಮನ್ನು ತಾವು ತಿದ್ದಿಕೊಳ್ಳುವುದು ಸಾಕಷ್ಟಕ್ಕಿಂತ ಹೆಚ್ಚಾಗಿರುವಾಗ ವಿಪರ್ಯಾಸ ಮಡುವಿನಲ್ಲಿ ಹೆಜ್ಜೆ ಇಡಬೇಡಿರೆಂದು ಹೇಳುವ ಧಾರ್ಷ್ಟ್ಯ ತೋರಿಸುವ ಹುಚ್ಚು ಧೈರ್ಯವನ್ನು ತೋರಿಸಿದ್ದಾರೆ. ಇವರ ವಾಕ್ಯರಚನಾ ಕೌಶಲ್ಯವೋ ಹೇಳತೀರದಾಗಿದೆ. ಮಡುವಿನಲ್ಲಿ ಬೀಳಬೇಡಿರೆನ್ನುವುದು ಬಿಟ್ಟು ಹೆಜ್ಜೆ ಇಡಬೇಡಿರೆಂದಿರುತ್ತಾರೆ. ಮತ್ತು "ವಿಮರ್ಶನಾ ಪ್ರಭೆಯು ಕಿಡಿಗಳನ್ನು ನಮುಗರುಹಿದಲ್ಲಿ" ಎಂದಿರುತ್ತಾರೆ. ಕಿಡಿಗಳನ್ನು ಹೇಗೆ ಅರುಹಬೇಕೋ ತಿಳಿಯದಾಗಿದೆ. ಕಿಡಿಗಳನ್ನೆರಚಬಹುದು. ಹೀಗಿದೆ ಇವರ ಪಾಂಡಿತ್ಯ. ಆ ಕೂಡಲೇನೇ ಸವಿಸ್ತಾರವಾಗಿ ಉತ್ತರ ಕೊಡುವುದಾಗಿಯೂ, ನನ್ನ ಹೇಳಿಕೆಯೇನಿದೆಯೆಂಬುದನ್ನೇ ನಿರೀಕ್ಷಿಸುತ್ತಿರುವುದಾಗಿಯೂ ತಮ್ಮ ಪತ್ರದಲ್ಲಿ ಹೇಳಿದ್ದಾರೆ. ಆದರೆ ಈವರೆಗೆ ನಿರೀಕ್ಷಿಸಿದರೂ ಜವಾಬೇ ಇಲ್ಲ.

ಇನ್ನು ಶ್ರೀ ಶ್ರೀಗಳವರ ಪತ್ರಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳುತ್ತೇನೆ. ಶ್ರೀಗಳು ನನ್ನ ಯಾವ ಪ್ರಶ್ನೆಗೂ ನೇರವಾಗಿ ಉತ್ತರವನ್ನು ಕೊಟ್ಟಿಲ್ಲವೆಂಬುದು ಉಭಯತರದ ಪತ್ರಗಳನ್ನು ನೋಡಿದರೆ ವಾಚಕರಿಗೆ ಮನವರಿಕೆಯಾಗುತ್ತದೆ. ನಾನು ಪತ್ರಗಳಲ್ಲಿ ಅನೇಕ ಪ್ರಶ್ನೆಗಳನ್ನು ಕೇಳಿದ್ದರೆ ಅಸಮಂಜಸವಾಗಿ ಒಂದೆರಡು ಪ್ರಶ್ನೆಗಳಿಗೆ ಮಾತ್ರ ಉತ್ತರವಿತ್ತಿರುತ್ತಾರೆ. ಒಂದು ಪೀಠಕ್ಕೆ ೩ ಪರಂಪರೆಗಳು ಹೇಗೆ ಇರಲು ಸಾಧ್ಯ ಎಂದು ಕೇಳಿದರೆ ಆ ಕಡೆ ನಮ್ಮ ದೃಷ್ಟಿಯಿಲ್ಲವೆಂದು ಉತ್ತರಿಸಿರುತ್ತಾರೆ. ಆದಿ ಮರುಳಸಿದ್ಧನ ನಂತರ ೨೪೫ ವರ್ಷಗಳು ಕಳೆದ ಮೇಲೆ ಬರಬೇಕಾದ ಹೊಲಿ ಮರುಳಸಿದ್ಧನು ಕ್ರಿ.ಶ. ೧೦೮೧ ರಲ್ಲಿ ಅಂದರೆ ೨೯ ವರ್ಷಗಳ ನಂತರವೇ ಬಂದನೆಂದು ಹೇಳಿರುವ ಬಗ್ಗೆ ನನ್ನ ಸಂಶಯಗಳನ್ನು ಪರಿಹರಿಸಲು ಕೇಳಿದ್ದೆನು.

ಆದಕ್ಕೆ ಶ್ರೀಗಳವರು ಪಟ್ಟಕ್ಕೆ ಬಂದನೆಂಬುದು ಅಚ್ಚು ದೋಷ. ಅದು ಅವನು ಜನಿಸಿದ ಕಾಲ. ಕಾವ್ಯದಲ್ಲಿ "ಜನಿಸಿ" ಎಂತಲೇ ಹೇಳಿದ್ದಾನೆ. ಆದ್ದರಿಂದ ಪಟ್ಟಕ್ಕೆ ಬಂದ ಕಾಲ ೧೫೬೭ ಎಂದು ನಿರ್ಣಯ ಕೊಟ್ಟರು. ಇದು ಎಷ್ಟರಮಟ್ಟಿನ ಸಮಂಜಸವೆಂಬುದನ್ನು ವಿವರಿಸುತ್ತೇನೆ.

ಸಂಪಾದಕರು "ಈ ಪುಸ್ತಕದ ಕೊನೆಯಲ್ಲಿ ಕೊಟ್ಟಿರುವ ಒಪ್ಪೋಲೆಯಲ್ಲಿ ಕೊನೆಗೆ" ಅನರ್ಥ - ಅಪಾರ್ಥಗಳಾಗುವಂತಿರುವ ಎಲ್ಲಾ ಕಡೆಗಳಲ್ಲಿಯೂ, ಬಹುಶಃ ತಿದ್ದಲಾಗಿದೆ. ಸಹಜವಾಗಿ ತಿಳಿಯುವಂತಿರುವ ಮತ್ತು ಅಲ್ಲೊಂದಿಲ್ಲೊಂದು ಉಳಿದಿರಬಹುದಾದ ಅಶುದ್ಧಗಳನ್ನು ತಿದ್ದಿಕೊಳ್ಳುವುದಾಗಬೇಕು ಎಂದು ಬರೆದಿರುತ್ತಾರೆ. ಹೀಗಿರುವಾಗ "ಶಾಲಿವಾಹನ ಶಕ ೧೦೦೩ ರಲ್ಲಿ ಹೂಲಿಯ ಮಾಹೇಶ್ವರ ವಂಶದಿಂದ ಕರ್ನಾಟಕ ಉಜ್ಜಯಿನಿಗೆ ಪಟ್ಟಕ್ಕೆ ಬಂದ (೩) ಮರುಳಸಿದ್ಧ" ಹೀಗೆಂದು ಸ್ಪಷ್ಟವಾದ ವಾಕ್ಯಭಾಗದಲ್ಲಿ ಅಚ್ಚಿನ ದೋಷವನ್ನು ಆರೋಪಿಸುವುದು ಸರಿಯಾಗಲಾರದು. ಸಾಮಾನ್ಯವಾಗಿ ಅಚ್ಚಿನ ದೋಷಗಳೆಂದರೆ ಒಂದಕ್ಷರ, ಎರಡಕ್ಷರಗಳು ವ್ಯತ್ಯಾಸವಾಗುತ್ತವೆಯೇ ವಿನಾ, ಅಭಿಪ್ರಾಯವೇ ಬದಲಾಗುವಷ್ಟು ವಾಕ್ಯಭಾಗಗಳು ಬದಲಾಗುವುದಿಲ್ಲ. ಅದರಲ್ಲೂ ಒಂದು ನಿರ್ದಿಷ್ಟ ಅಭಿಪ್ರಾಯ ಬದಲಾಗುವುದು ಸಾಧ್ಯವೇ ಇಲ್ಲ. ಇಷ್ಟಕ್ಕೂ ಒಪ್ಪೋಲೆಯ ಕೊನೆಯಲ್ಲಿರುವ ಸಂಪಾದಕರ ಸೂಚನೆಯೂ ಸಹ ನನ್ನ ಅಭಿಪ್ರಾಯವನ್ನೇ ಧೃಢಪಡಿಸುತ್ತದೆ. ಇನ್ನೊಂದು ವಿಚಾರ:— ಒಂದು ವೇಳೆ ಅಚ್ಚಿನ ದೋಷ ಇದಾದಲ್ಲಿ ಈ ಬಗ್ಗೆಯೇ ಇದೇ ಲೇಖನದಲ್ಲಿಯೇ, ಈ ಲೇಖಕರೇ ಪುಟ ೧೩೩ ರಲ್ಲಿ "ಈ ಮಹಿಮನ ಪಟ್ಟಾಧಿಕಾರದ ಸಮಯ ಕ್ರಿ ಶ. ೧೦೮೧" (ಶಾ. ಶ. ೧೦೦೩) ಎಂದಿರುತ್ತಾರೆ. ೧೫ ನೆಯ ಪುಟದಲ್ಲಿರುವುದೇನೋ ಅಚ್ಚಿನ ದೋಷವೆಂದರೂ ಇದೂ ಅಚ್ಚಿನ ದೋಷವೇ? ಮತ್ತೊಂದು ವಿಚಾರ:— ಪುಟ ೧೨೦ ರಲ್ಲಿ ಮರುಳಾರಾಧ್ಯ, ಮೂಲ ಮರುಳಸಿದ್ಧ, ಹೂಲಿ ಮರುಳಸಿದ್ಧ ಇವರ ಕಾಲವನ್ನು ಹೇಳುವಾಗ ಕ್ರಮ್ಮವಾಗಿ ಕಲಿಯುಗಾರಂಭ, ಶಾ. ಶ. ೮೩೪. ಶಾ. ಶ. ೧೦೦೩ ಎಂದು ಹೇಳಲಾಗಿದೆ. ಮರುಳಾರಾಧ್ಯ ಮತ್ತು ಮೂಲ ಮರುಳಸಿದ್ಧರ ಬಗ್ಗೆ ಇಲ್ಲಿ ಕೊಟ್ಟಿರುವ ಕಾಲವು ಪಟ್ಟಾಧಿಕಾರಕ್ಕೆ ಸಂಬಂಧಪಟ್ಟದ್ದೆಂದು ಅನೇಕ ಕಡೆ

ಲೇಖಕರು ಹೇಳಿರುತ್ತಾರೆ. ಆದ್ದರಿಂದ ಹೂಲಿ ಮರುಳಸಿದ್ಧನ ಬಗ್ಗೆ ಕೊಟ್ಟಿರುವ ಕಾಲವೂ ಪಟ್ಟಕ್ಕೆ ಸಂಬಂಧಪಟ್ಟದ್ದೆಂದೇ ಭಾವಿಸಬೇಕಾಗುತ್ತದೆ. ಮುಂದೂ ಸಹ ೧೩೩ ನೆಯ ಪುಟದಲ್ಲಿ ಪಟ್ಟದ ಕಾಲವೆಂದೇ ಸ್ಪಷ್ಟವಾಗಿ ಹೇಳಿರುವಾಗ ಇಲ್ಲಿಯೂ ಪಟ್ಟದ ಕಾಲವೆಂದೇ ಲೇಖಕರ ಅಭಿಪ್ರಾಯವೆಂದು ತಿಳಿಯಲೇ ಬೇಕಾಗುತ್ತದೆ. ಆದ್ದರಿಂದ ಇದು ಯಾವ ಕಾರಣದಿಂದಲೂ ಅಚ್ಚಿನ ದೋಷವಾಗಿರದೆ ಲೇಖಕರ ಅಭಿಪ್ರಾಯ ದೋಷವಾಗಿದೆಯೆಂದು ಭಾವಿಸಬಹುದು. ಲೇಖಕರಿಗೆ ಅಭಿಪ್ರಾಯ ಹುಟ್ಟುವುದಾದರೂ ಮೂಲ ಕಾವ್ಯದ ಆಧಾರದ ಮೇಲೆಯೇ. ಕಾವ್ಯದಲ್ಲಿ "ಜನಿಸಿ" ಎಂದು ಸ್ಪಷ್ಟವಾಗಿ ಬರೆದಿರುವಾಗ ಇದಕ್ಕೆ ವಿರುದ್ಧವಾದ ಅಭಿಪ್ರಾಯ ಲೇಖಕರಿಗೆ ಬರುವ ಸಂಭವವೇ ಇಲ್ಲ. ಆದರೂ ಅದಕ್ಕೆ ವಿರುದ್ಧವಾದ ಅಭಿಪ್ರಾಯ ಬಂದಿರುವುದು ನಮ್ಮ ಕಣ್ಣೆದುರಿನಲ್ಲಿದೆ. ಇದು ಏಕೆ ಮತ್ತು ಹೇಗೆ ಎಂದು ಒಂದು ಸಮಸ್ಯೆಯೇ ಆಗಿದೆಯಾದರೂ ಈ ಮರುಳಸಿದ್ಧಾಂಕವನ್ನು ಪೂರ್ಣಾಗಮನವಿಟ್ಟು ಓದಿದರೆ ಈ ಸಮಸ್ಯೆಯ ಮೂಲವೇನೆಂಬುದು ತಿಳಿಯದಿರದು.

ಕಾವ್ಯದಲ್ಲಿ ನಿಜವಾಗಿಯೂ ಯಾರ ಪಟ್ಟದ ಕಾಲವನ್ನೂ ಕವಿಯು ಹೇಳಿಲ್ಲ. ಮೂಲ ಮರುಳಸಿದ್ಧನು ಮಾಳವ ಉಜ್ಜಯಿನಿಯನ್ನು ಬಿಟ್ಟ ಕಾಲವನ್ನು ಮತ್ತು ಹೂಲಿ ಮರುಳಸಿದ್ಧನು ಜನಿಸಿದ ಕಾಲವನ್ನೂ ಕವಿಯು ಹೇಳಿದ್ದಾನೆ. ಇವೆರಡೂ ಪಟ್ಟದ ಕಾಲವೆಂದು ಹೇಳಿರುವವರು ಈ ಲೇಖಕರು. ಅಂದರೆ ಶ್ರೀ ಶೈಲದ ಸ್ವಾಮಿಗಳವರು. ನ್ಯಾಯವಾಗಿ ನೋಡಿದರೆ ಇಲ್ಲಿರುವ ಕಾಲವು ಎರಡೂ ಜನರ ಮಾಳವ ಉಜ್ಜಯಿನಿ ತ್ಯಾಗದ ಮತ್ತು ಸಂಜನಿಸಿದ ವಿಷಯಕ್ಕೆ ಸಂಬಂಧಪಡಬೇಕು. ಅಥವಾ ಎರಡು ಜನರ ಪಟ್ಟಕ್ಕೆ ಸಂಬಂಧಪಡಬೇಕು. ಒಬ್ಬರ ಪಟ್ಟದ ಕಾಲವಾಗಿ, ಇನ್ನೊಬ್ಬರ ಜನನ ಕಾಲವಾಗಲು ಸಾಧ್ಯವೇ ಇಲ್ಲ. ಈಗ ಶ್ರೀ ಸ್ವಾಮಿಗಳವರು ಎರಡೂ ಪಟ್ಟದ ಕಾಲವೆಂದಾಗಲಿ, ಅಥವಾ ಪಟ್ಟದ ಕಾಲವಲ್ಲವೆಂದಾಗಲಿ ಈ ಎರಡರಭಿಪ್ರಾಯಗಳಲ್ಲಿ ಒಂದನ್ನು ಒಪ್ಪಲೆ ಬೇಕು. ಮತ್ತು ಅನೇಕ ಕಡೆ ಈ ಎರಡು ಕಾಲಗಳೂ ಪಟ್ಟಕ್ಕೆ ಸಂಬಂಧಪಟ್ಟವೇ ಎಂಬುದನ್ನು ಲೇಖಕರೇ ಸ್ಪಷ್ಟ ಹೇಳಿರುವಾಗ ಒಪ್ಪಿಯೇ ಇದ್ದಾರೆಂಬಲ್ಲಿ ಸಂಶಯವೂ ಇಲ್ಲ. ಈ

ರೀತಿ ಒಪ್ಪಿದ್ದರಿಂದ ಕಾವ್ಯದ ಪ್ರಮಾಣತ್ವಕ್ಕೆ ಭಂಗ ಬಂದಿರುವುದನ್ನು ತಪ್ಪಿ ಸಲು ಶ್ರೀಗಳು ತಮ್ಮ ಪತ್ರದಲ್ಲಿ ಈ ಕಾಲ ಜನನಕ್ಕೆ ಸಂಬಂಧಿಸಿದುದೆಂದು ಹೇಳ ಹೊರಟಿದ್ದಾರೆ. ಇಷ್ಟಕ್ಕೂ ಕಾಲವನ್ನು ಹೇಳಿರುವವನು ಕವಿ. ಕವಿ ಮಾಡಿ ಕೊಂಡಿರುವ ಲೋಪದ ಬಗ್ಗೆ ಈ ಅಂಕದಲ್ಲಿರುವ ಯಾವ ಲೇಖಕರಿಗೂ ಮತ್ತು ಸಂಪಾದಕರಿಗೂ ಸಹ ಇರದ ಹೊಣೆ ಶ್ರೀಗಳಿಗೊಬ್ಬರಿಗೆ ಮಾತ್ರ ಇರುವುದು ಇದರಿಂದ ಸ್ಪಷ್ಟವಾಗುತ್ತದೆ. ಇದು ವಾಚಕರಿಗೆ ವಿಸ್ಮಯವನ್ನುಂಟು ಮಾಡದಿರದು. ಆದ್ದರಿಂದ ಈ ಪ್ರಸಂಗದಿಂದ ನಾವು ಈ ತೀರ್ಮಾನಕ್ಕೆ ಬರುವುದರಲ್ಲಿ ಯಾವ ಆತಂಕವೂ ಉಳಿದಿಲ್ಲವೆಂದು ಧೈರ್ಯ ವಾಗಿ ಹೇಳಬಹುದು.

ಅದೇನೆಂದರೆ :– ಈ ಕಾವ್ಯದಕರ್ತ ನಂದೀಶ ಕವಿಯ ಬಗ್ಗೆ ಮೊದಲು ಕಟ್ಟಿರುವ ಅಸಂಬದ್ಧ ವಿಷಯಗಳನ್ನು ಗಮನದಲ್ಲಿಟ್ಟು ಕೊಂಡರೆ ನಿಜ ವಾಗಿಯೂ ಕ್ರಿ. ಶ. ೧೬೫೦ ರಲ್ಲಿದ್ದ ನಂದೀಶನು ಈ ಕಾವ್ಯವನ್ನು ಬರೆದಿಲ್ಲ ವೆಂಬುದು ನಿರ್ಧರವಾಗುತ್ತದೆ. ಮತ್ತಾವ ನಂದೀಶನೂ ಇದ್ದ ಬಗ್ಗೆ ಆಧಾರ ವಿಲ್ಲ. ಸಿದ್ಧನಂಜೇಶನ ಸಂಪರ್ಕವುಳ್ಳ ನಂದೀಶನೆಂದು ಹೇಳಿರುವುದರಿಂದ ಬೇರೊಬ್ಬ ನಂದೀಶನ ಕಲ್ಪನೆಯೂ ಸಾಧುವಾಗುವುದಿಲ್ಲ. ಆದ್ದರಿಂದ ನಂದೀಶ ಹೆಸರಿನ ಮೇಲೆ ಬೇರೊಬ್ಬರು ಈ ಕಾವ್ಯವನ್ನು ಬರೆದಿರುತ್ತಾರೆಂದು ತೀರ್ಮಾನಕ್ಕೆ ಬರಲು ಹಿಂಜರಿಯಬೇಕಾಗಿಲ್ಲ. ಹಾಗಾದರೆ ಆ ನಂದೀಶನ ಅವತಾರ ತಾಳಿರುವ ಮಹನೀಯರು ಯಾರಿರಬಹುದೆಂದು ತಿಳಿಯಲು ಹೆಚ್ಚು ಶ್ರಮಪಡಬೇಕಾಗಿಯೂ ಇಲ್ಲ. ಈ ಪುಸ್ತಕದಲ್ಲಿ ಲೇಖಕರಲ್ಲಿ ಯಾರು ಹೆಚ್ಚಾಗಿ ನಂದೀಶ ಕವಿಯನ್ನು ಬಳಸಿಕೊಂಡಿದ್ದಾರೋ, ಯಾರು ಅವನ ಕಾವ್ಯದಲ್ಲಿ ಆ ಅಭಿಪ್ರಾಯವಿಲ್ಲದಿದ್ದರೂ, ಆ ಅಭಿಪ್ರಾಯವಿದೆಯೆಂದು ನಿರ್ಣೀತವಾಗಿ ಹೇಳುತ್ತಿದ್ದಾರೋ ಅವರೇ ನಂದೀಶ ಕವಿಯ ಅವತಾರಿಗಳೆನ್ನ ಬಹುದಾಗಿದೆ. ಅಂತಹ ಲೇಖಕರಾರೆಂದರೆ :– ಶ್ರೀ ಶ್ರೀಗಳವರೇ, ಶ್ರೀ ಶೈಲದ ಸೂರ್ಯ ಸಿಂಹಾಸನದ ಜಗದ್ಗುರುಗಳೆಂದು ಭಾವಿಸಿಕೊಂಡಿರುವವರು ಎಷ್ಟು ಸತ್ಯ ಪ್ರಿಯತೆ ಮತ್ತು ನ್ಯಾಯ ಪ್ರಿಯತೆ, ವೀರಶೈವ ಜಗದ್ಗುರು ಗಳೆಂದು ಕೊಳ್ಳುವವರಿಗಿವೆಯೆಂಬುದಕ್ಕೆ ಇದಕ್ಕಿಂತಲೂ ಬೇರೆ ನಿದರ್ಶನವೇಕೆ

ಬೇಕು? ಒಟ್ಟಿನಲ್ಲಿ ಈ ನಂಡೀಶ ಕವಿಗಳು (ಶ್ರೀಗಳು) ಪದ್ಯಗಳಲ್ಲಿ ಪಟ್ಟದ ಕಾಲವನ್ನು ಜೋಡಿಸಬೇಕೆಂದು ಯತ್ನಮಾಡಿದ್ದಾರೆ. ಅಪೂರ್ಣ ಪಾಂಡಿತ್ಯ, ಅನ್ಯಭ್ಯಸ್ತ ಕವಿಮಾರ್ಗರಾದುದರಿಂದ ಅದು ಸಾಧ್ಯವಾಗದೆ ಹೋಗಿದೆ. ಅಲ್ಲಿರುವ ಪದಗಳ ಅರ್ಥವೇನೇ ಆಗಲಿ ತಮಗೆ ಯಾವ ಉದ್ದಿಷ್ಟ ಅಭಿಪ್ರಾಯ ಬೇಕಿತ್ತೋ ಅದನ್ನು ಕಲ್ಪಿಸಿಕೊಂಡು ಸಮಾಧಾನಪಟ್ಟುಕೊಂಡರು. ಕಾವ್ಯದ ಪದಗಳ ಅರ್ಥವನ್ನು ಬಿಟ್ಟರು ತಮ್ಮ ಉದ್ದಿಷ್ಟ ಅಭಿಪ್ರಾಯವನ್ನೇ ತಮ್ಮ ಲೇಖನದಲ್ಲಿ ಒಂದಲ್ಲ, ಎರಡಲ್ಲ, ಅನೇಕ ಕಡೆ ಹೇಳಿಕೊಂಡು ಬಂದರು. ನಾನು ಕೇಳಿದ ಕೂಡಲೇ ಗಾಬರಿಯಾಗಿ ಎರಡು ಪುಟ ತಿರುಗಿ ಹಾಕಿ ಈ ಜವಾಬು ಕೊಟ್ಟರು. ಎಷ್ಟು ಕಡೆ ಹೀಗೆ ಹೇಳಿದ್ದೇನೆಂಬುದನ್ನು ಪರಿಶೀಲಿಸುವ ಗೋಜಿಗೇ ಹೋಗಲಿಲ್ಲ. ಒಂದು ವೇಳೆ ಎಲ್ಲಾ ಕಡೆ ಪರಿಶೀಲಿಸಿದ್ದರೂ ಇವರಿಗೆ ಪರಿಹಾರ ಮಾರ್ಗವಾದರೂ ಎಲ್ಲಿತ್ತು? ಒಂದಕ್ಕೆ ತೇಪೆ ಹಾಕಲು ಹೋದರೆ ಮತ್ತೊಂದು ತೂತು ಕಂಡು ಬರುತ್ತಿದೆ.

ಈಗ ಇವರು ಹೇಳಿರುವಂತೆ ಹೂಲಿ ಮರುಳಸಿದ್ಧನು ಕ್ರಿ. ಶ. ೧೦೮೧ ರಲ್ಲಿ ಜನಿಸಿ, ಕ್ರಿ. ಶ. ೧೫೯೭ ರಲ್ಲಿ ೫೧೬ ವರ್ಷಗಳ ವಯಸ್ಸಿನಲ್ಲಿ ಪಟ್ಟಕ್ಕೆ ಬಂದನೆಂದೇ ಭಾವಿಸೋಣ. ಮತ್ತು ಶ್ರೀ ಶಿವಮೂರ್ತಿ ಶಾಸ್ತ್ರಿಗಳವರ ಲಕ್ಷ್ಮೇಶ್ವರದ ಶಾಸನದ ಬಗ್ಗೆಯ ಅಭಿಪ್ರಾಯದಂತೆ ಕ್ರಿ. ಶ. ೧೫೧೩ ರ ನಂತರವೂ ಜೀವಿಸಿದ್ದನೆಂದೇ ಭಾವಿಸೋಣ. ಈ ಸಂದರ್ಭದಲ್ಲಿ ಎಷ್ಟೆಷ್ಟು ತೊಡಕುಗಳು ಬರುತ್ತವೆಂಬುದನ್ನು ಪರಿಶೀಲಿಸೋಣ.

ಮೊದಲನೆಯದಾಗಿ, ಈ ಹೂಲಿ ಮರುಳಸಿದ್ಧನು ಹುಟ್ಟಿದಂದಿನಿಂದ ಇದ್ದ ಸಿದ್ಧನಂಜೇಶನು ಇವನ ನಂತರ ಸಿದ್ಧ ಮಲ್ಲಾರ್ಯನಿಗೆ ಪಟ್ಟಕಟ್ಟುವ ಬಗ್ಗೆ ಇವನಿಗೆ ಸಲಹೆ ಕೊಡಲು ಇರಬೇಕಾಗುತ್ತೆ. ಇವನೇನೋ ಯೋಗಸಿದ್ಧ ಇದ್ದರೂ ಇರಬಹುದೆನ್ನೋಣ. ಸಿದ್ಧನಂಜೇಶನು ಸಂಸಾರಿಕ. ಅವನು ಹೇಗೆ ಯೋಗಸಿದ್ಧನಾಗಿದ್ದಾನೆಂದು ಭಾವಿಸಬೇಕು?

ಎರಡನೆಯದಾಗಿ, ಕ್ರಿ. ಶ ೧೪೦೨ ರಲ್ಲಿ ಪ್ರೌಢದೇವರಾಯನ ಕಾಲದಲ್ಲಿ ಈ ಹೂಲಿ ಮರುಳಸಿದ್ಧನ ನಂತರದ ಸಿದ್ಧ ಮಲ್ಲಾರ್ಯನು ವಚನ

ಸಾಹಿತ್ಯವನ್ನು ಪಂಡಿತರಿಂದ ಬರೆಸಬೇಕಾಗಿದೆ. ಆದರೆ ಕ್ರಿ. ಶ. ೧೫೧೩ ರವರೆಗೆ ಹೂಲಿ ಮುರುಳಸಿದ್ಧನೇ ಇರುವಾಗ ಪ್ರೌಢದೇವರಾಯನಿಗೂ, ವಚನ ಸಾಹಿತ್ಯಕ್ಕೂ, ಸಿದ್ಧ ಮಲ್ಲಾರ್ಯನಿಗೂ ಇರಬೇಕಾದ ಸಂಬಂಧ ಉಳಿಯುವುದಿಲ್ಲ.

ಮೂರನೆಯದಾಗಿ, ಶ್ರೀಗಳು ಪುಟ ೧೯೯ ರಲ್ಲಿ ಹೇಳಿರುವಂತೆ ಕ್ರಿ.ಶ. ೧೫೮೯ ರಲ್ಲಿ ಸಿಂದೋಗಿ ಮಾದಿಗ ಮುರುಳಸಿದ್ಧನಿರಬೇಕಾಗಿದೆ. ಆದರೆ ೧೫೧೩ ರ ನಂತರವೂ ಹೂಲಿ ಮುರುಳಸಿದ್ಧನೇ ಇರುವಾಗ ಅವನ ನಂತರ ಬಂದ ಸಿದ್ಧಮಲ್ಲಾರ್ಯನ ವರದಿಂದ ಹುಟ್ಟಬೇಕಾಗಿರುವ ಮಾದಿಗ ಮುರುಳಸಿದ್ಧನು. ೧೫೮೯ ರಲ್ಲಿ ಹೇಗೆ ಇರಲು ಸಾಧ್ಯವಾದೀತು?

ನಾಲ್ಕನೆಯದಾಗಿ, ೧೦೮೧ ರಲ್ಲಿ ಹುಟ್ಟಿ ೧೫೯೭ ರಲ್ಲಿ ಪಟ್ಟವಾಗಿ ೧೫೧೩ ರ ನಂತರವೂ ಇರಬೇಕಾದ ಹೂಲಿ ಮುರುಳಸಿದ್ಧನ ನಂತರ ಬರುವ ಸಿದ್ಧಮಲ್ಲ, ಸಿದ್ಧನಾಥ, ಸಿದ್ಧೇಶ್ವರ ಇವರುಗಳ ಕಾಲ ೩೪೦ ವರ್ಷಗಳನ್ನು ಸೇರಿಸಿಕೊಂಡರೆ ೨೫ ನೆಯ ಗುರುಸಿದ್ಧನ ಪಟ್ಟದ ಕಾಲ ೧೭೫೩ ಕ್ಕೆ ಬರುತ್ತದೆ. ಈ ಹಿಂದೆ ಈ ಕಾಲ ೧೫ ನೆಯ ಶತಮಾನಕ್ಕೆ ಬರುತ್ತದೆಂದು ಇವರೇ ಶೀರ್ಷಾಸಿಸಿ ಕೊಂಡಿರುತ್ತಾರೆ.

ಐದನೆಯದಾಗಿ, ನಿಜವಾಗಿಯೂ ಹೂಲಿ ಮುರುಳಸಿದ್ಧನು ೧೦೮೧ ರಲ್ಲಿ ಹುಟ್ಟಿದವನೂ ಅಲ್ಲ. ೧೫೧೩ ರಲ್ಲಿ ಜೀವಂತವಿದ್ದವನೂ ಅಲ್ಲ. ಆ ದಿನ ಅವನು ಕಾಲವಾದನೆಂದು ಸ್ಪಷ್ಟವಾಗಿ ಹೇಳಿದೆ. ಆದಕ್ಕಿಂತ ಹಿಂದೆ ೭೦-೮೦ ವರ್ಷಗಳ ಹಿಂದೆ ಅವನು ಹುಟ್ಟಿರಬಹುದು. ಅವನು ರೇಣುಕಾಚಾರ್ಯನ ಅವತಾರವೆಂದು ಹೊಗಳಲ್ಪಟ್ಟಿರುತ್ತಾನೆಯೇ ವಿನಾ ಉಜ್ಜಯಿನಿ ಪೀಠಕ್ಕೂ ಅವನಿಗೂ ಯಾವ ಸಂಬಂಧವೂ ಇಲ್ಲ.

ಆರನೆಯದಾಗಿ, ಸಿದ್ಧಮಲ್ಲಾರ್ಯನು ಸಿದ್ಧಸಂಜೇಶನ ಗುರುರಾಜ ಚಾರಿತ್ರ್ಯದಲ್ಲಿ ಬಂದಿರುವುದರಿಂದ ಅವನು ಅವನಿಗಿಂತ ಹಿಂದಿನವನು. ಅವನು ಸಿದ್ಧೇಶ್ವರಾಚಾರ್ಯನ ಶಿಷ್ಯ. ಗಜಪತಿ ಮಹೇಂದ್ರನಿಗೆ ದೀಕ್ಷೆ ಕೊಟ್ಟ

ಪ್ಪಾನೆ. ಆದರೆ ಉಜ್ಜಯಿನೀ ಪೀಠಕ್ಕೂ ಅವನಿಗೂ ಯಾವ ಸಂಬಂಧವೂ ಇರುವುದಿಲ್ಲ. ತನಗಿಂತ ಹಿಂದೆ ಇದ್ದ ಸಿದ್ಧಮಲ್ಲನಿಗೆ ಪಟ್ಟಕಟ್ಟಲು ಸಲಹೆ ಕೊಡುವುದು ಹೇಗೆ ಸಮಂಜಸವಾಗುತ್ತೆ ?

ಏಳನೆಯದಾಗಿ, ಈ ರೀತಿ ಕಟ್ಟಿರುವ ಕಾಲವೇ ಕೃತ್ರಿಮವಾದುದಾಗಿದೆ. " ಶ್ರೀ ಶಕಾಬ್ದಿಯ ಸಮಯದೊಂದನೇ ಸಾಸಿರದ ಮೂರನೆಯ ಶತಕದಿ " ಎಂದಿರುವ ಕಾವ್ಯದ ಪದ್ಯಭಾಗವನ್ನು ನೋಡಿದರೆ ಇದು ಅಪ್ರಬುದ್ಧ ಕವಿಯ ಕೃತಿಯೆಂಬುದು ಸ್ಪಷ್ಟವಾಗುತ್ತಿದೆ. ಈ ಪದ್ಯ ಭಾಗದಲ್ಲಿ ೧೧೦೩ ಎಂಬರ್ಥ ವನ್ನು ಹೊರಡಿಸುವುದು ತುಂಬಾ ಕಷ್ಟವಾಗಿದೆ. ಪದ್ಯಭಾಗ ಇರುವಂತೆ ಅರ್ಥ ಮಾಡಿದರೆ " ಶ್ರೀ ಶಕ ವರ್ಷದ ಕಾಲ, ಒಂದನೆಯ, ಸಾವಿರದ ಮೂರನೆಯ ಶತಮಾನದಲ್ಲಿ " ಎಂದು ಅರ್ಥ ಬರುತ್ತದೆ, ತಾತ್ಪರ್ಯ ಇಷ್ಟಾಗುತ್ತದೆ. ಶಕ ವರ್ಷದ ಕಾಲ ಒಂದನೆಯ ಮತ್ತು ಸಾವಿರದ ಮೂರನೆಯ ಶತಮಾನದಲ್ಲಿ ಎಂದಾಗುತ್ತದೆ, ಇದರಿಂದ ೧೧೦೩ ಎಂಬು ದನ್ನು ಗ್ರಹಿಸಬೇಕಾಗುತ್ತದೆ. ಈ ರೀತಿ ಗ್ರಹಿಸುವುದು ೧೧೦೩ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಭಾಗವನ್ನು ರಚಿಸಿದ ಕಾವ್ಯಕರ್ತನಿಗೆ ಸಾಧ್ಯವೇ ವಿನಾ ಇತರರಿಗೆ ಸಾಧ್ಯವಾಗುವುದಿಲ್ಲ

ಈ ರೀತಿ ನೂರಾರು ಕಾರಣಗಳನ್ನು ತೋರಿಸಬಹುದಾಗಿದೆ. ಇದೊಂದೇ ನಿದರ್ಶನದಿಂದ ಈ ಕಾವ್ಯವು ನಂದೀಶ ಕವಿಯಿಂದ ರಚಿತವಾದು ದಲ್ಲವೆಂದೂ ಶ್ರೀಗಳವರೇ ಕಾವ್ಯಕರ್ತರಾಗಿ ನಂದೀಶ ಕವಿಯ ಹೆಸರನ್ನು ಉಪಯೋಗಿಸಿದ್ದಾರೆಂದೂ, ಮತ್ತು ದೇವ ಕವಿ ಕಾವ್ಯವನ್ನು ಖಂಡಿಸಲು ತಮಗೆ ಯಾವ ಆಧಾರವೂ ದೊರೆಯದ ಕಾರಣ ತಮ್ಮ ಪರಂಪರಾ ಪದ್ಧತಿ ಯಂತೆ ಈ ಕೃತ್ರಿಮ ಕಾವ್ಯ ಸೃಷ್ಟಿಗೆ ಕೈ ಹಾಕಿ ಅಪಹಾಸ್ಯಕ್ಕೆ ಈಡಾಗುವು ದರ ಜೊತೆಗೆ ದೇವ ಕವಿಯ ಕಾವ್ಯಕ್ಕೆ ತಮ್ಮ ಬೆಂಬಲವನ್ನು ಕೊಟ್ಟಿದ್ದಾ ರೆಂದೂ ನಿಸ್ಸಂದೇಹವಾಗಿ ಹೇಳಬಹುದಾಗಿದೆ.

ಶ್ರೀಗಳವರ ಪತ್ರದಲ್ಲಿರುವ ಪ್ರತಿಯೊಂದು ಪದದಲ್ಲೂ ಅಸಂಬದ್ಧತೆಯು ಎದ್ದು ಕಾಣುತ್ತಿದೆ ಅದೆಲ್ಲವನ್ನೂ ಖಂಡಿಸುತ್ತಾ ಹೋದಲ್ಲಿ ಇದೊಂದು

ಮಹಾ ಗ್ರಂಥವಾಗುತ್ತಗಿ ಅದನ್ನೆಲ್ಲಾ ಕಂಡುಕೊಳ್ಳಲು ವಾಚಕ ವರ್ಗದ ಕಡೆಗೆ ವಹಿಸಿ ವಿರಮಿಸುತ್ತೇನೆ.

ನನ್ನ ೮–೯–೪೯ ರ ಪತ್ರಗಳಿಗೆ ಶ್ರೀ ಎಂ. ವಿ. ಮಠದ, ಇವರು ಇತ್ತ ಉತ್ತರ :–

ಹರಿಹರ, ೫೯–೯–೪೯.

ಮಾನ್ಯರೆ, ನಿಮ್ಮ ೮–೯–೪೯ ರ ಪತ್ರವನ್ನು ಇದೀಗ ನೋಡುತ್ತಿದ್ದೇನೆ. ಕಳೆದ ಕೆಲದಿನಗಳಿಂದ. ನಾನು ಹರಿಹರದಲ್ಲಿರಲಿಲ್ಲ. ಕಾರಣ ತಡವಾಯಿತು. ನಿಮ್ಮ ಆಕ್ಷೇಪಗಳಿಗೆ ನನ್ನ ಸಮಾಧಾನವು ಹೀಗಿದೆ :–

ಮೂಲ ಮರುಳಸಿದ್ಧರಿಂದ ಮರುಳಾರಾಧ್ಯ ಲಿಂಗವು ಸ್ಥಾಪಿಸಲ್ಪಟ್ಟ ಬಗ್ಗೆ ಆಧಾರ ದೊರೆತರೆ ಆ ಲಿಂಗವನ್ನು ಹುಡುಕಲು ಯತ್ನಿಸಬಹುದು.

ಮರುಳಾರಾಧ್ಯ ವಿಜಯದಲ್ಲಿ ಹೇಳಿರುವಂತೆ ಆ ಹದಿನಾಲ್ಕು ಗುರುಮೂರ್ತಿಗಳ ಶೋಧೆ ಇನ್ನೂ ಆಗಿಲ್ಲ. ಆದಲ್ಲಿ ಮುಂದೆ ಪ್ರಕಟಿಸಬಹುದು.

ನಾವು ಕ್ಷೇತ್ರ ಪರಿಚಯದಲ್ಲಿ ಕ್ಷೇತ್ರಪಾಲ ಭೈರವನೆಂದು ಹೇಳಿರುವುದು ಪ್ರತೀತಿಯನ್ನನುಸರಿಸಿದೆ. ಆದರೆ ಮರುಳಾರಾಧ್ಯ ವಿಜಯದಲ್ಲಿ ಅದಕ್ಕೆ ಸೋಮೇಶ್ವರನೆಂದು ಹೇಳಿದೆ. ಎರಡು ಅಭಿಪ್ರಾಯಗಳು ತಿಳಿಯಲೆಂದೇ ಹಾಗೆ ಬರೆದಿದ್ದೇವೆ. ನಿರ್ಣಯದಲ್ಲಿ ಪ್ರತೀತಿ ಸುಳ್ಳಾದರೆ ಕಾವ್ಯಾಧಾರ ಸತ್ಯವಾಗುವುದು. ಇಷ್ಟಕ್ಕೇನೇ ನೀವು ಉಚಿತಾನುಚಿತಗಳನ್ನು ನಿರ್ಣಯಿಸ ಹೋಗಿರುವುದು ನಮಗೂ ಅನುಚಿತವಾಗಿಯೇ ತೋರುತ್ತದೆ.

ಸಿದ್ಧನಂಜೇಶನ ವಿಚಾರ :– ಮರುಳಾರಾಧ್ಯ ವಿಜಯದ ಗದ್ಯಾನುವಾದದಲ್ಲಿ ಎಂದು ನೀವು ಅಭಿಪ್ರಾಯ ಪಟ್ಟಿರುವಂತೆ ಗುರುವಿನ ಹೆಂಡತಿಯನ್ನು ಶಿಷ್ಯನಿಗೆ ಹೊಂದಿಸಿರುವುದು ಅಲ್ಲಿ ತೋರುವುದಿಲ್ಲ. ಇಂಥಾ ಹೀನ ಕೆಲಸವನ್ನು ಮರುಳಸಿದ್ಧ ಕಾವ್ಯದಲ್ಲಿ ದೇವನು ಮಾಡಿದ್ದಾನೆ. ಸರಿಯಾಗಿ ಓದಿಕೊಳ್ಳಿರಿ. (ಸಂ. ಶಿವಮೂರ್ತಿ ಶಾಸ್ತ್ರಿಗಳವರ ಲೇಖನವನ್ನು) ಮ. ವಿ. ಗದ್ಯಾನುವಾದದಲ್ಲಿ ಕಪಿಯು ಗುರುವಾದ ಸಿದ್ಧನಂಜೇಶ್ವರನನ್ನು ಸ್ತುತಿಸಿರು

ವಂತೆಯೂ ಒಂದು ಕಡೆ ಇದೆ. ಮತ್ತೊಂದು ಕಡೆ ಶ್ರೀ ಸಿದ್ಧನಂಜನು ತನ್ನ ಪ್ರಿಯಸತಿ ಚೆನ್ನವೀರಾಂಬಿಕೆಗೆ ಬೋಧಿಸಿದ ಮರುಳಾರಾಧ್ಯ ಚರಿತ್ರೆಯನ್ನು ತಾನು ಕಾವ್ಯ ರೂಪದಲ್ಲಿ ಬರೆಯುವರಾಗಿ ತಿಳಿಸುತ್ತಿದೆ. ಮತ್ತೂ ಈ ಕಾವ್ಯ ಗುರು ಪ್ರಸಾದದಿಂದ ಬಂದ ಸಂಗತಿಯೆಂಬುದನ್ನು ಎಂದು ಮುಂತಾಗಿದೆ.

ಗುರುವೆಂದು ಹೊಗಳಿಸಿಕೊಂಡ ಸಿದ್ಧನಂಜೇಶ್ವರನೂ ಚೆನ್ನವೀರಾಂಬಿಕೆಗೆ ಪತಿಯಾಗಿ ಮರುಳಾರಾಧ್ಯ ವಿಜಯವನ್ನು ಬೋಧಿಸಿದ ಶ್ರೀ ಸಿದ್ಧನಂಜನೂ ಒಬ್ಬನೇ ಆಗಿದ್ದಾನೆ. ಕಾವ್ಯಕಾರ ನಂದೀಶನು ಛಂದೋಬದ್ಧಕ್ಕೆ ಹೊಂದುವಂತೆ ಒಪ್ಪಸಿಗೇನೇ ಸಿದ್ಧ ನಂಜೇಶ್ವರನೆಂತಲೂ ಸಿದ್ಧ ನಂಜೇಶನೆಂತಲೂ ಸೇರಿಸಿರುವನು. ಅವೇ ಶಬ್ದಗಳನ್ನೇ ಅನುವಾದದಲ್ಲಿಡಲಾಗಿದೆ. ನೀವಿದಕ್ಕೆ ಅಪಾರ್ಥ ಮಾಡಿಕೊಳ್ಳಬಾರದು. ಈಗಲಾದರೂ ನಿಮ್ಮ ಭಾವನೆ ಸರಿಯಾದರೆ ನಂದೀಶನ ಕಾಲ ಅವನ ಗುರುವಿನ ಕಾಲವೆಂತಲೇ ತಿಳಿಯುತ್ತದೆ. (ಸಮಕಾಲೀನರು) ಅವನು ಬರೆದ ಗ್ರಂಥಗಳಾವೆಂಬುದನ್ನು ಶೋಧಿಸಿಲ್ಲ.

ಮರುಳಾರಾಧ್ಯ ವಿಜಯದಲ್ಲಿಯೋ ಮರುಳಸಿದ್ಧರ ವಿಷಯವೂ ಬಂದಿರುವುದರಿಂದ ಮರುಳಸಿದ್ಧ ಗದ್ಯಾನುವಾದವೆಂದು ಬರೆದರೆ ತಪ್ಪಾಗಲಿಲ್ಲ. ಆದರೆ ಅ. ನ. ಕೃಷ್ಣರಾಯರು ಗ್ರಂಥದಲ್ಲಿ ಎಲ್ಲಿಯೂ ಇಲ್ಲದ ಮರುಳಸಿದ್ಧ ಕಾವ್ಯವೆಂಬ ನೂತನ ಹೆಸರನ್ನು ಸೃಷ್ಟಿಸಿರುವುದು ತಪ್ಪಾದೀತೆಂದು ನಮ್ಮ ಭಾವನೆ. ದೇವನು ತನ್ನ ಕೃತಿಗೆ "ಕರ್ನಾಟಕ ಭಾಷಾ ಪ್ರದೀಪಿಕೆ" (ಸಂ.೧. ಪ. ೧೪)

"ಸಿದ್ಧಲಿಂಗನ ಚರಿತ್ರೆ" (ಸಂ ೧. ಪ. ೧೭) "ಮರುಳ ಸಿದ್ಧೇಶ ಚರಿತಂ" (ಸಂ. ೬ ಪ. ೮೩) ಎಂದು ಬರೆದುಕೊಂಡಿದ್ದರೂ ಆ ಎಲ್ಲಾ ಹೆಸರುಗಳನ್ನೂ ಬಿಟ್ಟು "ಮರುಳಸಿದ್ಧ ಕಾವ್ಯ"ವೆಂದು ಪ್ರಕಟಿಸಿರುವುದು ತಪ್ಪಾದೀತೇ ಇಲ್ಲವೇ ?

ಅಂಕದಲ್ಲಿ ಪ್ರಕಟವಾಗಿರುವ ವಿಷಯವನ್ನಷ್ಟೇ ತಾವು ಗ್ರಹಿಸಬೇಕು. ಮುಖ್ಯವಾಗಿ ಪಾಡಿಗ ಮರುಳಸಿದ್ಧನಿಗಿಂತ ಒಬ್ಬ ಮೂಲ ಮರುಳಸಿದ್ಧ

ಪ್ರತ್ಯೇಕವಾಗಿದ್ದನೆಂದು ವಿವರಿಸುವ ಸತ್ಯಾಂಶವನ್ನಷ್ಟು ತಾವು ಶೋಧಿಸಿ ಗ್ರಹಿಸಿಕೊಂಡರೆ ಸಾಕಾದೀತೆಂದು ನಮ್ಮ ಭಾವನೆ. ಕನ್ನಡ ವೀರಶೈವ ಜಗತ್ತಿನ ಮುಂದೆ ಇರುವ ಪ್ರಶ್ನೆ ಇದೊಂದೇ ಎಂದು ನಮಗೆ ತಿಳಿಯುತ್ತದೆ. ವಿಶೇಷವಿಲ್ಲ.

ತಮ್ಮ,

( ಸೈನಿದೆ. )

ವಿ. ಸೂ. – ಈ ತಿಂಗಳು ಹೆಚ್ಚು ಪ್ರವಾಸವಿರುವುದರಿಂದ ಪತ್ರ ವ್ಯವಹಾರಕ್ಕೆ ಅನಾನುಕೂಲವಾಗುತ್ತದೆಂಬುದನ್ನು ತಾವು ಗಮನಿಸಿರಿ.

(ಸಣ್ಣ ಸೈನು.)

ನನ್ನ ಅನೇಕ ಪ್ರಶ್ನೆಗಳು ಮುಟ್ಟಿದ ನಂತರ ಶ್ರೀಗಳವರಿಂದ ಬಂದ ಪತ್ರ :— 4614/26-9-49.

ತಾವು ರಿಜಿಸ್ಟರಿನೊಂದಿಗೆ ಕಳುಹಿಸಿದ ಪತ್ರವು ಇದೀಗ ತಲುಪಿತು. "ಮರುಳಾರಾಧ್ಯ ವಿಜಯ" ಕಾವ್ಯವನ್ನು ಪ್ರಿಂಟು ಮಾಡಿಸಿ ಪ್ರಚುರ ಪಡಿಸಿದರೆ ನೀವು ಕಾಣಿಸಿರುವ ಅನೇಕ ಸಂದೇಹಗಳು ನಿವಾರಣೆಯಾಗ ಬಹುದು. ನೀವು ಪ್ರಶ್ನಿಸಿರುವ ಅನೇಕ ಪ್ರಶ್ನೆಗಳಿಗೆ ನೀವೇ ಉತ್ತರವನ್ನು ಬಿಡಿಸಿಕೊಂಡಿದ್ದೀರಿ. ಮರುಳಾರಾಧ್ಯ ವಿಜಯದ ಅಕ್ಷರಶಃ ಅನುವಾದವು ಪಿಶಾಲವಾಗುವುದೆಂದು ತಿಳಿದು ಅನೇಕ ಕಡೆಯ ಮುಖ್ಯಾಂಶಗಳನ್ನು ಮಾತ್ರ ಪಂಡಿತರು ನಮ್ಮ ಅಭಿಪ್ರಾಯದಂತೆ ಅನುವಾದಿಸಿದ್ದಾರೆ. ಮೂಲ ವಿಜಯ ಕಾವ್ಯದ ಪೂರ್ಣ ಮುದ್ರಣವು ಸಾಹಿತಿಗಳ ಕೈಗೆ ಶೀಘ್ರ ಸಿಗುವಂತೆ ಪ್ರಯತ್ನಿಸುತ್ತಿರುವುದನ್ನು ನಿಮಗೆ ಮೊದಲೇ ತಿಳಿಯಪಡಿಸಿದೆ. ಆ ಕಾವ್ಯ ವನ್ನು ನೀವು ಮುಂದಿಟ್ಟುಕೊಂಡರೆ ನಿಮ್ಮ ಪ್ರಶ್ನೆಗಳನ್ನು ಬಿಡಿಸಿಕೊಳ್ಳಲು ಅನುಕೂಲವಾಗುತ್ತದೆ.

ಆದರೂ ನೀವು ಕೇಳಿರುವ ಹೊಸ ವಿಷಯಗಳಿಗೆ ನಮಗೆ ತಿಳಿದ ಮಟ್ಟಿಗೂ ಕೆಲವು ದಿನಗಳಲ್ಲಿ ವಿಶದಪಡಿಸುವೆವು. ಸಂಚಾರ ಕಾಲದಲ್ಲಿ ಉತ್ತರಕ್ಕೆ ವಿಲಂಬವಾಗುವುದು ಸಹಜವಾದರೂ ನೀವು ಕೋರಿಕೊಂಡಿರು ವಂತೆ ಆಲಸ್ಯವಾದರೂ ಉತ್ತರವೀಯಲು ಯತ್ನಿಸುವೆವು.

ತಾ|| ೬-೧೦-೪೯ ರಲ್ಲಿ ಬರೆದ ಶ್ರೀಗಳವರ ಮತ್ತೊಂದು ಪತ್ರ.

ಮು| ಗೋಪನಾಳು.

ಈ ಮುಂಚೆ ಅಪ್ಪಣೆ ಕೊಡಿಸಿದಂತೆ ಸನ್ನಿಧಿಯು ದೇಶ ಸಂಚಾರದಲ್ಲಿ ರುವುದರಿಂದ ಉತ್ತರಕ್ಕೆ ವಿಲಂಬವಾಯಿತು.

ನೀವು ಈ ಮೊದಲು ನಿವೇದಿಸಿಕೊಂಡ ಹಲವು ಸಂದೇಹಗಳೇ ಬೇರೆ ರೂಪವಾಗಿ ಈಗಿನ ನಿಮ್ಮ ರಿಜಿಸ್ಟರ್ ಪತ್ರದಲ್ಲಿ ಬಂದಿವೆ. ಆದುದರಿಂದ ಅವೆಲ್ಲವನ್ನೂ ಅವಲೋಕಿಸಿ ಒಟ್ಟಾರೆ ಸಂಕ್ಷೇಪವಾದ ಸಮಾಧಾನಗಳನ್ನು ಇಲ್ಲಿ ಅಪ್ಪಣೆ ಕೊಡಿಸಿದ್ದೇವೆ.

ಸಿಂದೋಗಿ — ಉಜ್ಜಯಿನಿ ಮರುಳಸಿದ್ಧ ದೇವಾಲಯವೂ ಅವು ಯಾರಿಂದ ನಿರ್ಮಿಸಲ್ಪಟ್ಟವೋ ಅವರ ಸಮಾಧಿಗಳು ಅಲ್ಲಿವೆ. ಒಂದೇ ಕಟ್ಟಡದಲ್ಲಿ ದೇವಾಲಯ ಹಾಗೂ ಸಮಾಧಿಗಳಿರುವುದರಿಂದ ರೂಢಿ ಹೇಗೆ ಹೇಳುವುದೋ ಅಂಕದಲ್ಲಿ ಹಾಗೆ ಪ್ರಕಟಿಸಲಾಗಿದೆ. ಸಿಂದೋಗಿ ದೇವಸ್ಥಾನದ ಮುಂದೆ ಚಿತ್ರದಲ್ಲಿ ಸಮಾಧಿಯು ಕಾಣುತ್ತಿದೆ. ಅವಲೋಕಿಸಿರಿ. ಉಜ್ಜ ಯಿನಿ ಮಾದಿಗ ಮರುಳಪ್ಪನ ಸಮಾಧಿ ಚಿತ್ರವನ್ನು ತೋರಿಸಿದ್ದರೂ ಬೈಂಡು ಮಾಡುವಾಗ ಪ್ರೆಸ್ಸಿನವರು ಸೇರಿಸಲು ಮರೆತಿರುವರಂತೆ! ಚಿತ್ರ ಸೂಚಿಯಲ್ಲಿ ಆ ಸಮಾಧಿ ಚಿತ್ರವಿದೆಯೆಂದುಲ್ಲೇಖಿಸಿದೆ. ಈ ಸಮಾಧಿ ಹರಳಯ್ಯನದೆಂದು ನನಗೆ ವಿಜಯ ಕಾವ್ಯ ಮಾತ್ರ ಹೇಳುತ್ತಿದೆ. ಆದರೆ ರೂಢಿ ಉಜ್ಜಯಿನಿ ಯಲ್ಲಿ ಹಾಗಿಲ್ಲ. ಕಾವ್ಯದಲ್ಲಿದ್ದಂತೆ ನಾವು ಬರೆದಿರುವೆವಾದರೂ ರೂಢಿಗೆ ವಿರೋಧವಾಗದಂತೆ ಸಹ ವರ್ತಿಸಿದ್ದೇವೆ.

ಕಾಶಿ ಜಗದ್ಗುರು "                    " ವೀರಭದ್ರ ಸ್ವಾಮಿಗಳವರು ದಾರುಕ ಮರುಳಸಿದ್ಧರ ಬಗ್ಗೆ ಎಂದು ಅಪ್ಪಣೆ ಕೊಡಿಸಿರುವುದು ದಾರುಕ ಪರಂಪರೆಯ ಮರುಳಸಿದ್ಧರ ವಿಷಯಕ್ಕೆ ಸಂಬಂಧಿಸಿದುದು. ದಾರುಕರೂ ಮರುಳಸಿದ್ಧರೂ ಬೇರೆ ಬೇರೆ ವ್ಯಕ್ತಿಗಳು.

ರೇಣುಕಾಚಾರ್ಯ - ರೇವಣಸಿದ್ಧ - ರೇವಣಾರಾಧ್ಯರು ಬೇರೆ ಬೇರೆ ಕಾಲಮಾನದ ವ್ಯಕ್ತಿಗಳೆಂದು ನಾವು ನಿರ್ಧರಿಸಿಕೊಂಡಿದ್ದೇವೆ. ಆ ಬಗ್ಗೆ

ಒಂದು ಸ್ವತಂತ್ರ ಗ್ರಂಥವನ್ನೂ ಸಹ ಬರೆಯಲು ವಿಷಯಗಳನ್ನು ಸಂಗ್ರಹಿಸಿದ್ದೇವೆ.

ಉಜ್ಜಯಿನಿಯ ಮೂಲ ಸಿಂಹಾಸನ ಮಠವು ಕಾಲಿಕಾ ಉಜ್ಜಯಿನಿಯಲ್ಲಿಯೇ ಇದ್ದಿತೆಂದು ಮೊದಲು ಜನಶೃತಿಯಿಂದ ಅರಿತಿದ್ದೆವು. ಈಗ ಮರುಳಸಿದ್ಧ ಕಾವ್ಯ ಮತ್ತು ಸಾಂಗತ್ಯ – ಹಾಗೂ ಮರುಳಾರಾಧ್ಯ ವಿಜಯಗಳಿಂದ ಆ ವಿಷಯವು ಸತ್ಯವಾಗಿದ್ದಂತೆ ತಿಳಿಯುತ್ತದೆ. ಆ ಉಜ್ಜಯಿನಿಯ ಕೊನೆಯ ಮರುಳಸಿದ್ಧನೇ ಕೊಟ್ಟೂರು ಉಜ್ಜಯಿನಿಗೆ ಕಾರಣ ಪುರುಷನಾದನೆಂದೂ ಸಹ ಈಗ ನಂಬಲರ್ಹವಾದ ಸಾಹಿತ್ಯ ಸಿಕ್ಕಿರುವುದರಿಂದ ಎಲ್ಲರೂ ನಂಬಲೇ ಬೇಕಾಗಿದೆ. ಈಗಿನ ಉಜ್ಜಯಿನಿಯಲ್ಲಿ ಮಠ, ದೇವಸ್ಥಾನಗಳು ಬೇರೆ ಬೇರೆಯಾಗಿಯೇ ಇವೆ. ತ್ರಿಭುವನಮಲ್ಲ. (ಕಲ್ಯಾಣದ ರಸು ಸೋಮೇಶ್ವರ)ನ ಸಹಾಯದಿಂದ ಈ ಕಾರ್ಯವನ್ನು ಮರುಳಸಿದ್ಧರು ನೆರವೇರಿಸಿದ್ದಾರೆ. ಅವನ ವಿಗ್ರಹ ಅಲ್ಲಿದೆ. 'ಅದನ್ನು ರೂಢಿಯಲ್ಲಿ ಕ್ಷೇತ್ರಪಾಲನೆಂದು ಕರೆಯುತ್ತಾರೆ. ಮೂಲ ಮರುಳಸಿದ್ಧನ ಕಾಲಮಾನ, ಮಠದ ಹಾಗೂ ದೇವಸ್ಥಾನದ ಕಾಲಮಾನ ಅಂಕದ ೬೨ ನೆಯ ಪುಟದಲ್ಲಿ ವಿಮರ್ಶಿಸಲಾಗಿದೆ. ಅಲ್ಲಿ ಹೇಗೆ ವ್ಯತ್ಯಾಸವಾಗಿದೆಯೋ ನಮಗೆ ತಿಳಿಯಲಿಲ್ಲ. ಪ..ಡೂರಿನಲ್ಲಿಯೂ ಮರುಳಸಿದ್ಧ ದೇವಸ್ಥಾನವಿದೆ. ಆ ಚಿತ್ರ ತೆಗೆಯಿಸಲು ಅನುಕೂಲವಾಗಲಿಲ್ಲ. ಮೂಲ ಮರುಳಸಿದ್ಧನು ಬಾಳಿದ ವರ್ಷಗಳಿಗೆ ಸ್ವಲ್ಪ ಹೆಚ್ಚು ಕಡಿಮೆ ಉಜ್ಜಯಿನಿ ಮಠದ ನಿರ್ಮಾಣ ಕಾಲವೂ ಸರಿಹೋಗುತ್ತದೆ. ಅಲ್ಲದೆ ವ್ಯಕ್ತಿಶಃ ಕಟ್ಟಿಸಿದವರ ಕಟ್ಟಿಸಿಕೊಂಡವರ ನಾಮ ನಿರ್ದೇಶವೇ ಕಾವ್ಯದಲ್ಲಿ ಬಂದ ಮೇಲೆ ಅವಕ್ಕನುಕೂಲವಾಗಿ ನಾವು ಕಾಲಮಾನವನ್ನು ಕಟ್ಟಲು ಸುಲಭವಾಗಿದೆ. ಮುನಿ ಎಂಬ ಪದವು ಪಂಚಪೀಠಗಳ ಗುರುಗಳಲ್ಲಿ ಹಿಂದೆ ಪ್ರಚಾರದಲ್ಲಿದೆ. ರುದ್ರಮುನಿ (ರಂಭಾಪುರಿ) ಮುಕ್ತಿಮುನಿ (ಉಜ್ಜಯಿನಿ) ಎಂಬುವರು ಪೀಠಾಚಾರ್ಯರಾಗಿದ್ದರು. ಶಿವನ ಅಂಶಾವತಾರಿಗಳಾದ ಆದಿ ಪಂಚಾಚಾರ್ಯರು ಶಿವಲಿಂಗ ಸಂಭವರೆಂದು ಶಿವಾಗಮ – ಕವಿ ಪರಂಪರೆಯ ಕಥನ ಬಸವಾದಿ ಶಿವಶರಣರ ವಚನಗಳಿಂದ ತಿಳಿಯುತ್ತ ಬಂದಿದೆ. ಕಲ್ಲುಕಂಬದಲ್ಲಿ ನೃಸಿಂಹನು ಪ್ರಕಟವಾಗಿ ಪ್ರಲ್ಹಾದನನ್ನು ಉದ್ಧರಿಸುವುದೂ, ಶಿವ

ಲಿಂಗದಿಂದ ಶಿವನು ಪ್ರಕಟವಾಗಿ ಮಾರ್ಕಾಂಡೇಯನನ್ನು ಉದ್ಧರಿಸಿರುವುದೂ ಭಾವುಕರಿಗೆ ಸತ್ಯವಾಗಿರುವಂತೆ ಮಹಾಚಾರ್ಯರ ಶಿಷ್ಯರಾಗಿ ಅವರಿಂದ ಪಂಚಸೂತ್ರದ ಶಿವಲಿಂಗಗಳನ್ನು ಅಂಗದಲ್ಲಿ ಧರಿಸಿಕೊಂಡಿರುವ ಲಿಂಗಾಂಗಿಗಳೆಲ್ಲರಿಗೂ ಈ ಮಹಾಚಾರ್ಯರ ಶಿವಲಿಂಗಾವಿರ್ಭಾವವು ಸತ್ಯವಾಗಿಯೇ ಕಾಣುತ್ತದೆ. ಭಕ್ತಿಯಿಲ್ಲದ ನಾಸ್ತಿಕರಿಗೆ ಮಹಿಮರ ಎಲ್ಲ ಲೀಲೆಗಳು ಅಪಾರ್ಥವಾಗಿ ಕಾಣುವುದು ಆಶ್ಚರ್ಯವೇನೂ ಅಲ್ಲ.

ಹೂಲಿಯ ಗುರುಕುಲ ಸಂಭವರೆಂದರೆ ಆ ಗುರು ಮಠದಲ್ಲಿ ಹುಟ್ಟಿದವರು ಅಥವಾ ಆ ವಂಶದಲ್ಲಿ ಜನಿಸಿದವರೆಂದು ತಿಳಿದುಕೊಳ್ಳಬೇಕು.

ಸಿದ್ಧನಂಜೇಶನ ವಿಚಾರವಾಗಿ ಈ ಹಿಂದಿನ ಪತ್ರದಲ್ಲಿಯೇ ಅಪ್ಪಣೆ ಕೊಡಿಸಲಾಗಿದೆ. ಗುರುರಾಜ ಚಾರಿತ್ರ ನಮಗೆ ದೊರೆತಿಲ್ಲ. ಅದು ಸಿಕ್ಕರೆ ಅವಲೋಕಿಸಿ ಮುಂದಿನ ಪ್ರಕಟಣೆಯಲ್ಲಿ ವಿವರಿಸುವೆವು.

ಸೋದರ ಶಬ್ದದ ತದ್ಭವ ಅಥವಾ ಅಪಭ್ರಂಶದಿಂದ ಸಾದರವಾಗಿರುವುದೆಂದು ನಾವು ಭಾವಿಸಿರುವುದಕ್ಕೆ ಕಾರಣಗಳನ್ನು ತಿಳಿದ ಮಟ್ಟಿಗೂ ಈ ಕೆಳಗೆ ವಿವರಿಸಿದ್ದೇವೆ:— ಮರುಳಾರಾಧ್ಯ ವಿಜಯ ಕಾವ್ಯದಲ್ಲಿ ಮಲ್ಲರು (ಮಲವರು) ನೊಣ ಮುಟ್ಟದಾಚಾರದವರು (ನೊಣಬರು) ಪಂಚಮರು (ಪಂಚಮಸಾಲಿಯವರು – ಪಂಚಾಚಾರದವರು) ಇವರ ಉದ್ಧಾರ ವಿಷಯವು ಬಂದಿರುವುದರಿಂದ ಮರುಳಸಿದ್ಧರು ಇವರೊಡನೆ ಸೋದರರನ್ನು ಸಮಾನ ದೃಷ್ಟಿಯಿಂದ ಕಂಡಿರುವುದರಿಂದ ಮರುಳಸಿದ್ಧನ ಸಾಂಪ್ರದಾಯವನ್ನರಿತು ಈತನನ್ನು ಕುಲದೇವತೆಯ ತೆರದಿ ಸೋದರರು ನಂಬಿಕೊಂಡಿರುವುದರಿಂದ ಇಷ್ಟು ಸವಿಸ್ತಾರದ ಇವರು ಸೋದರರು ಸಾದರರೇ ಇರಬೇಕೆಂದು ಆತ್ಮವು ನಂಬಿದ್ದರಿಂದ ಸದ್ಭಾವನೆಯಿಂದ ಆ ಕಾವ್ಯ ಪ್ರಮಾಣವನ್ನುದ್ಧರಿಸಿ ಹಾಗೆ ವಿವರಿಸಿದ್ದೇವೆ. ನಿಮ್ಮ ದೃಷ್ಟಿಯಲ್ಲಿ ಈ ಸೋದರರು ಸಾದರರಲ್ಲವೆಂದು ಕಂಡುಬಂದರೆ ಅದಕ್ಕೆ ನಮ್ಮ ಭಿನ್ನಾಭಿಪ್ರಾಯವಿಲ್ಲ. ಆದರೆ ಆದಿ ಮರುಳಸಿದ್ಧನ ಮೂಲ ಶಿಷ್ಯ ವರ್ಗವು ಸೋದರರೆಂಬ ಹೆಸರಿನಿಂದ ೧೮ ನೆಯ ಶತಮಾನದಲ್ಲಿ ಪ್ರಸಿದ್ಧವಾಗಿದ್ದಿತೆಂಬ ಕಾವ್ಯದ ಮಾತು ಅಷ್ಟಕ್ಕೆ ಉಳಿಯು

ಬಹುದು. ಸೋದರರು ಸಾದರರು ಎಂದು ತಿಳಿದುಕೊಳ್ಳುವ ಬಗ್ಗೆ ನಮಗೆ ಈ ಕಾವ್ಯದ ಹೊರತು ಯಾವ ಆಧಾರಗಳೂ ಸಿಕ್ಕಿಲ್ಲ. ಮತ್ತು ಆ ಬಗ್ಗೆ ಶೋಧಿಸಿಯೂ ಇಲ್ಲ. ಈ ಬಗ್ಗೆ ನೀವು ಆಧಾರಗಳನ್ನು ಸಂಗ್ರಹಿಸಿ ಇತರ ಆಧಾರಗಳಿಂದ ಇದು ನಿಜವಾಗುವಂತಿದ್ದರೆ ಆ ಪ್ರಯತ್ನವನ್ನು ಮಾಡುವಿರಾಗಿ ಆಶಿಸುತ್ತೇವೆ.

ಇನ್ನು ಮುರುಳಸಿದ್ಧ ಕಾವ್ಯದ ಬಗ್ಗೆ ಹಲವರಿಗೆ ಸಂದೇಹ ಸಂಭವಿಸಿರುವಂತೆ ನಿಮಗೆ ಮುರುಳಾರಾಧ್ಯ ವಿಜಯ ಕಾವ್ಯದ ಮೂಲದ ಬಗ್ಗೆ ಸಂದೇಹ ಬಂದಿರುವುದು ತಪ್ಪೇನೂ ಅಲ್ಲ. ನಿಮ್ಮ ಹಾಗೂ ನಿಮ್ಮ ಶ್ರೀ ಗ ಳ ವ ರ ವ್ಯಕ್ತಿತ್ವದ ಬಗ್ಗೆ ನಮಗೆ ಆತ್ಮೀಯತೆ ಇರುವುದರಿಂದ ನಮ್ಮಲ್ಲಿರುವ ಮೂಲ ಮುರುಳಾರಾಧ್ಯ ವಿಜಯ ಕಾವ್ಯವನ್ನು ನೀವು ಶಿವರಾತ್ರಿ ಸಮಯದಲ್ಲಿ ನಮ್ಮ ಮಠಕ್ಕೆ ಬಂದು ಅವಲೋಕಿಸಲು ತೋದರೆಯಿಲ್ಲ.

ಮೂಲ ಮುರುಳಸಿದ್ಧ ಕಾವ್ಯವನ್ನು ಅವಲೋಕಿಸಲು ಆಶಿಸಟ್ಟು ಬೆಂಗಳೂರಿಗೆ ಶ್ರೀ ಅ. ನ. ಕೃಷ್ಣರಾಯರಿಗೆ ಈ ಹಿಂದೆ ವೇ|| ಯಂ. ವಿ. ಮಠರಿಂದ ಬರೆಸಿದ್ದೆವು. ಅವರು ಉತ್ತರವನ್ನು ಕೊಡಲಿಲ್ಲ. ನಿಮ್ಮ ಲೈಬ್ರರಿಯಲ್ಲಿ ತಾಳೇಗರಿಯ ಆ ಮೂಲ ಮುರುಳಸಿದ್ಧ ಕಾವ್ಯವಿದ್ದರೆ ನಮಗಷ್ಟು ತೋರಿಸುವಿರೆಂದು ಆಶಿಪಡುತ್ತೇವೆ. ಅಥವಾ ನಿಮ್ಮಲ್ಲಿಲ್ಲದಿದ್ದರೂ ಶ್ರೀ ಕೃಷ್ಣರಾಯರಿಂದ ದೊರಕಿಸಿಕೊಂಡಾದರೂ ನಮಗೆ ತೋರಿಸುವರೆಂದು ನಂಬಿದ್ದೇವೆ.

ವಿಶೇಷ :– ಹರಿಹರದ ವೇ|| ಯಂ. ವಿ. ಮಠರು ನಿಮ್ಮ ಪತ್ರ ಕ್ಕುತ್ತರವಿತ್ತಂತೆ ಅರಿಕೆ ಮಾಡಿದ್ದಾರೆ. ಅವರ ಹಾಗೂ ನಮ್ಮ ಎಲ್ಲಾ ಪತ್ರಗಳಿಂದ ನಿಮ್ಮ ಮುಖ್ಯ ಸಂದೇಹಗಳು ದೂರಾಗಿರಬಹುದೆಂದು ಭಾವಿಸುತ್ತೇವೆ. ಈಗ ನಾವುಗಳು ಭಕ್ತೋದ್ಧಾರಕ್ಕಾಗಿ ಸಂಚರಿಸುತ್ತಿರುವುದರಿಂದ ಪ್ರಶ್ನೋತ್ತರಕ್ಕೆ ಸಮಯವೇ ಸಿಗದಂತಾಗಿದೆ. ಕಾರಣ ತಡವಾಗಿ ಉತ್ತರಿಸಿದ ಈ ವಿವರಕ್ಕಾಗಿ ಅನ್ಯಥಾ ಭಾವಿಸಲಾರಿರೆಂದು ಆಶಿಸುತ್ತೇವೆ

ವೀರಶೈವ ಸಮಾಜದ ಒಳಪಂಗಡಗಳ ಏಕೀಕರಣಕ್ಕೆ ಮತ್ತು ಒಡಕುಗಳ ನಿವಾರಣೆಗೆ ನಾವು ಸದಾಶಯವುಳ್ಳವರೆಂಬುದು ನಿಮಗೆ ತಿಳಿದಿರಬೇಕು.

ಶ್ರೀಗಳವರ ೬-೧೦-೪೯ ನೇ ಪತ್ರಕ್ಕೆ ನನ್ನ ಉತ್ತರ.

ಶ್ರೀಗಳವರೇ,

ತಮ್ಮ ೬-೧೦-೪೯ ರ ಪತ್ರವು ತಲುಪಿತು. ತಮ್ಮ ಪತ್ರದಲ್ಲಿ ಒಂದೆರಡು ಪ್ರಶ್ನೆಗಳಿಗೆ ಉತ್ತರಗಳಿವೆಯಾದರೂ ಅವು ಸಮರ್ಪಕ ವಾಗಿಲ್ಲ. ಈ ಬಗ್ಗೆ ಪುನಃ ನಾಲ್ಕಾರು ದಿನಗಳಲ್ಲಿ ಬರೆಯಲಿರುವೆನು. ತಮ್ಮ ವಿಳಾಸ ತಾವು ತಿಳಿಸದ್ದರಿಂದ ನಾನು ಪತ್ರ ಬರೆಯಲು ವಿಲಂಬ ಮಾಡಿದೆನು.

ಮರುಳಸಿದ್ಧ ಕಾವ್ಯದ ಬಗ್ಗೆ ಹಲವರಿಗೆ ಸಂದೇಹ ಬಂದಿರುವಂತೆ ನಿಮಗೆ ಮರುಳಾರಾಧ್ಯ ವಿಜಯದ ಬಗ್ಗೆ ಸಂದೇಹ ಬಂದಿದೆಯಾಗಿ ಬರೆದಿರು ತ್ತೀರಿ. ಈ ಉದಾಹರಣೆಯನ್ನು ಏಕೆ ಉದಾಹರಿಸಿದರೋ ನನಗೆ ತಿಳಿಯ ದಾಗಿದೆ. ಇದು ಅಪ್ರಾಸಂಗಿಕವೆಂದು ತಿಳಿಸಲು ವಿಷಾದಿಸುತ್ತೇನೆ. ತಮ್ಮ ಮತ್ತು ನಮ್ಮ ಶ್ರೀಗಳವರ ಆತ್ಮೀಯತೆಯು ನನ್ನ ವಿಮರ್ಶೆಗೆ ಅಪ್ರಾಸಂಗಿಕ. ನಾನು ಮರುಳಾಧ್ಯ ವಿಜಯ ಕಾವ್ಯವನ್ನು ತೋರಿಸಬೇಕೆಂದು ತಮ್ಮನ್ನು ಕೇಳಿಲ್ಲ. ಮರುಳಸಿದ್ಧಾಂಕದಲ್ಲಿರುವ ತಮ್ಮ ಲೇಖನವೇ ನನಗೆ ಮುಖ್ಯ. ಒಂದು ವೇಳೆ ತಮ್ಮ ಆ ಲೇಖನವೇ ಅಸಂಬದ್ಧವಾಗುವುದಾದರೆ ಮೂಲ ಕಾವ್ಯ ನೋಡಿಯಾದರೂ ಏನು ಮಾಡಬೇಕು. ಇಷ್ಟಕ್ಕೂ ಗದ್ಯಾನುವಾದ ಮತ್ತು ತಮ್ಮ ಲೇಖನಗಳನ್ನು ಪರಿಶೀಲಿಸುವವರಿಗೆ ಮೂಲ ಕಾವ್ಯ ನೋಡ ಬೇಕೆಂಬಾಶೆಯು ಹುಟ್ಟಲಾರದು.

ತಾವು ಮರುಳಸಿದ್ಧ ಕಾವ್ಯದ ಮೂಲ ಪ್ರತಿಯನ್ನು ಕಳುಹಿಸಲು ಬರೆದಿರುವಿರಿ. ಅದನ್ನು ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿ ಯಲ್ಲಿ ನೋಡಬಹುದು. ಏಕೆಂದರೆ ಶ್ರೀ ಅ. ನ. ಕೃ. ರವರು ಅಲ್ಲಿಂದಲೇ ತಂದು ಅದನ್ನು ಪ್ರಕಟಿಸಿದ್ದರು. ತಾವೂ ಸಹ ಹಾಗೆಯೇ ಮಾಡುವುದು ಅನುಕೂಲವಾಗಿದೆ.

ನಾನು ಅಂಕದ ಎಲ್ಲಾ ಲೇಖಕರಿಗೂ ಪತ್ರ ಬರೆದಿದ್ದೆನು. ಯಾರೂ ನನ್ನ ಸಂದೇಹಗಳನ್ನು ದೂರ ಮಾಡಲಿಲ್ಲ. ಈಗಾಗಲೇ ನನ್ನ ವಿಮರ್ಶೆ

ಪೂರ್ಣವಾಗಿ ಅಚ್ಚಿನಲ್ಲಿದೆ. ಸಂದೇಹ ದೂರವಾಗದ್ದರಿಂದ ನನ್ನ ಸಂದೇಹ ಗಳೊಂದಿಗೆ ತಮ್ಮ ಉತ್ತರಗಳನ್ನು ನನ್ನ ವಿಮರ್ಶೆಯೊಂದಿಗೆ ಪ್ರಕಟಿಸಲು ತೀರ್ಮಾನಿಸಿದ್ದೇನೆ. ಸಾರ್ವಜನಿಕರೂ ಮತ್ತು ಇತಿಹಾಸಜ್ಞರೂ ಸತ್ಯ ನಿರ್ಣಯ ಮಾಡಲು ಇದರಿಂದ ಹೆಚ್ಚಿನ ಸಹಾಯವಾಗುತ್ತದೆಂದು ನನ್ನ ನಂಬಿಕೆ.

ಶ್ರೀ ಎಂ. ವಿ. ಮಠರು ತಾ|| 15-10-49 ರಲ್ಲಿ ಬರೆದ ಪತ್ರ :

ಮಾನ್ಯರೇ, ಹರಿಹರ, 15-10-49.

ನಾನು ಸಂಚಾರದಿಂದ ಬಂದಾಗ ಈ ದಿನ ತಮ್ಮ ಎರಡೂ ಪತ್ರಗಳು ನನ್ನ ಕೈ ಸೇರಿಡವು, ಅವುಗಳಲ್ಲಿ ನನಗಾಗಿಯೇ ಒಂದು ಪತ್ರವಿದೆ, ನನ್ನ ಮೇಲ್ವಿಳಾಸದ ಇನ್ನೊಂದು ಕವರಿನಲ್ಲಿ ನಮ್ಮ ಪೂಜ್ಯ ಶ್ರೀ ಶೈಲ ಜಗದ್ಗುರು ಗಳವರ ಸಲುವಾಗಿ ಇನ್ನೊಂದು ಪತ್ರವಿದೆ, ನನ್ನ ಅಡ್ರೆಸ್ಸಿಗೆ ಬಂದ ಕಾರಣ ಒಡೆದು ಜಗದ್ಗುರುಗಳವರಿಗಾಗಿ ಇದ್ದ ಪತ್ರವನ್ನು ಸಹ ನಾನು ನಿರ್ವಾಹ ವಿಲ್ಲದೆ ಓದಬೇಕಾಯಿತು, ಅದರಲ್ಲಿ ಕೊನೆಗೆ "ಮರುಳಸಿದ್ಧಾಂಕ"ದ ಯಾವ ಲೇಖಕರೂ ತಮ್ಮ ಸಂದೇಹವನ್ನು ನಿವಾರಣೆ ಮಾಡಲಿಲ್ಲವೆಂದೂ "ಸಂದೇಹ ದೂರವಾಗದ್ದರಿಂದ ನನ್ನ ಸಂದೇಹಗಳೊಂದಿಗೆ ತಮ್ಮ ಉತ್ತರ ಗಳನ್ನು ನನ್ನ ವಿಮರ್ಶೆಯೊಂದಿಗೆ ಪ್ರಕಟಿಸಲು ತೀರ್ಮಾನಿಸಿದ್ದೇನೆ. ಸಾರ್ವಜನಿಕರು ಮತ್ತು ಇತಿಹಾಸಜ್ಞರು ಸತ್ಯ ನಿರ್ಣಯಮಾಡಲು ಇದ ರಿಂದ ಹೆಚ್ಚಿನ ಸಹಾಯವಾಗುತ್ತದೆಂದು ನನ್ನ ನಂಬಿಕೆಯೆಂದು" ಬರೆದಿರುವಿರಿ.

ಈ ಮೊದಲು ನಮ್ಮ ಜಗದ್ಗುರುಗಳವರೂ ಆ ಬಳಿಕ ನಾನೂ ನೀವು ಪಟ್ಟಿರುವ ಸಂದೇಹಗಳಿಗೆ ನಮಗೆ ತಿಳಿದ ಮಟ್ಟಿಗೂ ಉತ್ತರವನ್ನು ಕೊಡುತ್ತಲೇ ಬಂದಿದ್ದೇವೆ, ಅಂಕದ ವಿಮರ್ಶೆ "ಅಚ್ಚಿನಲ್ಲಿದೆ" ಎಂದು ನೀವು ಬರೆದಿರುವುದರಿಂದ ಈ ಮುಂದೆ ಉತ್ತರಗಳು ಅನಾವಶ್ಯಕವಾಗ ಬಹುದಾದರೂ ನನಗಾಗಿ ತಾವು ಬರೆದಿರುವ ಕೊನೆಯ ಪತ್ರಕ್ಕೆ ಕೊನೆಯ ದಾಗಿ ಈ ಪತ್ರವನ್ನು ಬರೆಯುತ್ತಿದ್ದೇನೆ, ತಮ್ಮ ವಿಮರ್ಶೆಯಲ್ಲಿ ಈ ಪತ್ರವೂ ಸೇರಿ ಓದುಗರಿಗೆ ಸಹಾಯಕವಾಗಬಹುದೆಂದು ನನ್ನ ನಂಬಿಗೆ.

ಅಂಕದ 215 ನೇ ಪುಟದಲ್ಲಿ ಗದ್ಯಾನುವಾದದಲ್ಲಿ ಮರುಳಾರಾಧ್ಯ ಲಿಂಗನೆಂದಿದ್ದರೆ 127 ನೇ ಪುಟದಲ್ಲಿ ಸಿದ್ಧೇಶ್ವರಲಿಂಗನೆಂದಿದೆ ನೋಡಿರಿ, ಆದರೆ ಮೂಲ ಕಾವ್ಯದಲ್ಲಿ ಲಿಂಗದ ಹೆಸರು ಬಂದಿಲ್ಲ, ಅಲ್ಲಿ "ತಂದೆ ಗುರು ರೇವಣನು ಬಂದಿರೆ ಸುಂದರಾಗಿಹ ಲಿಂಗತಂದಿರೆ" ಎಂತಲೂ "ಮರುಳ ಸಿದ್ಧನು ದಿವ್ಯಲಿಂಗವ" ಎಂತಲೂ "ಮರುಳನಾಲಯದೊಳಗೆ ರಮ್ಯವು" ಎಂತಲೂ ಬಂದಿರುವುದರಿಂದ ಅನುವಾದಕರು ಮರುಳಸಿದ್ಧರ ಸಮ್ಮುಖದಲ್ಲಿ ಸ್ಥಿರಗೊಂಡ ಆ ಲಿಂಗದ ಹೆಸರನ್ನು ಮರುಳಾರಾಧ್ಯಲಿಂಗ ವೆಂದಿರ ಬಹುದೆಂತಲೂ ಶ್ರೀ ಶಿವರು ಮೂಲ ಉಜ್ಜಯಿನಿಯ ಲಿಂಗದ ಹೆಸರಿನಿಂದ ಈ ಲಿಂಗ ಸ್ಥಾಪಿತವಾಗಿರಬೇಕಾಗುವದೆಂದು ಈಗಿರುವ ಪ್ರತೀತಿ ಯಂತೆ ಸಿದ್ಧೇಶ್ವರ ಲಿಂಗವೆಂತಲೂ ಬರೆದಿದ್ದಾರೆ. ದೇವಸ್ಥಾನದ ಹೆಸರೇನೋ ಕಾವ್ಯದಿಂದ "ಮರುಳನಾಲಯ" ಎಂಬ ಪದ ಪ್ರಯೋಗ ವಿರುವುದರಿಂದ ಮರುಳಸಿದ್ಧ ದೇವಾಲಯವೆಂದು ನಿರ್ಧಾರವಾಗಿದೆ, ಪ್ರತೀತಿಯೂ ಹಾಗಿದೆ, ಆದಕ್ಕಾಗಿಯೇ ಮೂಲ ಪದ್ಯ ಕಾವ್ಯ ಪ್ರಕಟವಾದರೆ ನಿಮಗೆ ಸಹಾಯಕವಾಗುವುದೆಂದು ನನ್ನ ಅಭಿಪ್ರಾಯ, ಆ ಪದ್ಯ ಕಾವ್ಯ ನಿಮ್ಮ ಕೈಗೆ ದೊರೆಯುವವರೆಗೆ ನಿಮಗೆ ಹೀಗೆಯೇ ಕೊನೆಗೂ ಸಂದೇಹ ಗಳೇ ಹುಟ್ಟಬಹುದು.

ಅಂಕದ ೧೩೫ ನೇ ಪುಟದಲ್ಲಿ ಸೋಮೇಶ್ವರನ ವಿಗ್ರಹದ ವಿಚಾರ ಬಂದಿದೆ. ಮೂಲ ಕಾವ್ಯದ ಅನುವಾದಕರು ಗ್ರಂಥವು ವಿಸ್ತಾರವಾಗ ಬಹುದೆಂದು ಆ ಅನುವಾದವನ್ನು ಬಿಟ್ಟಿರಬೇಕು. ಮೂಲ ಕಾವ್ಯ ದಲ್ಲಿ ಸಂ. ೧೭ ಪ. ೪೯ ರಲ್ಲಿ ಈ ವಿಷಯ ಬಂದಿದೆ ಒಟ್ಟಾರೆ ತಮಗೆ ತಿಳಿಸ ಬೇಕಾದ ವಿಚಾರವಿಷ್ಟು. "ಮರುಳಾರಾಧ್ಯ ವಿಜಯ" ಕಾವ್ಯವು ವಿಶಾಲವಾಗಿರುವುದರಿಂದಲೂ ಅದನ್ನು ಪ್ರತ್ಯೇಕವಾಗಿ ಅಚ್ಚುಮಾಡಿಸಬೇಕಾಗಿ ರುವುದರಿಂದಲೂ ಸದ್ಯಃ ಅಂಕಕ್ಕೆ ಆಧಾರವಾಗಿರಲೆಂಬ ಉದ್ದೇಶದಿಂದ ಸಂಕ್ಷೇಪವಾಗಿ ಅನುವಾದಿಸಿದ್ದಾಗಿದೆ. ಪದೇ ಪದೇ ಉತ್ತರ ಕೊಡಲು ನಮಗೆ ಬೇಸರವಿಲ್ಲವಾದರೂ ನೀವು ಆ ಉತ್ತರಕ್ಕೆ ಮತ್ತೆ ಬೇರೆ ಬೇರೆ ಸಂದೇಹಗಳನ್ನು ತಾಳುತ್ತಿದ್ದೀರಿ ಕಾರಣ ಈ ಪತ್ರ ವ್ಯವಹಾರ ಮೂಲಕಾವ

ವನ್ನು ಪೂರ್ತಿ ಕಾಣದಿರುವ ನಿಮಗೆ ನಿರರ್ಥಕ ಶ್ರಮಕಾರಿಯೆಂಬುದು ನಮಗೆ ತಿಳಿಯುತ್ತದೆ. ನೀವು 5–10 49 ರಲ್ಲಿ ಬರೆದಿರುವ ಪತ್ರದ "ಉಚಿತವಾಗಲಾರದು." "ಮಾಡುತ್ತಿರುವ ಅನಾನುಕೂಲಗಳು ಶೋಭಾಯಮಾನವಲ್ಲ" ಎಂಬ ಮಾತುಗಳು ನಿಮಗೆ ಉಂಟಾಗಿರುವ ಸಂಜೇಪದ ಸರಳತೆನವನ್ನು ತೋರಿಸುವುದಿಲ್ಲ

ಮರುಳಸಿದ್ಧ ಕಾವ್ಯದ ಹೆಸರಿನ ಬಗ್ಗೆ ನಿಮಗೆ ಕೇಳಿದರೆ ಶ್ರೀ ಅ. ನ. ಕೃಷ್ಣರಾಯರಿಂದ ತಿಳಿಯುವುದುಚಿತವೆಂದು ಬರೆದಿದ್ದೀರಿ. ಈ ವಿಧವಾದ ಬರಹದಿಂದ ಆ ಕಾವ್ಯದ ಹೆಸರಿನ ಬಗ್ಗೆ ನೀವು ಇದುವರೆಗೂ ಯಾವ ನಿರ್ಧಾರಕ್ಕೂ ಬಂದಿಲ್ಲವೆಂದು ತಿಳಿಯುತ್ತದೆ. ಅಂಕವನ್ನು ಓದಿ ಸಂದಿಗ್ಧದಿಯನ್ನಲ್ಲಿ ಬಿದ್ದಂತೆ ಕೇಳಿರುವ ನೀವು ಮರುಳಸಿದ್ಧ ಕಾವ್ಯದ ಬಗ್ಗೆ ಸಣ್ಣ ವಿಷಯವನ್ನೂ ಸ್ಪಷ್ಟಪಡಿಸಲಾರಿರಾ? ನೀವು "ಮರುಳಾರಾಧ್ಯ ವಿಜಯ"ದ ಬಗ್ಗೆ ಮರುಳಾರಾಧ್ಯ ಮರುಳಸಿದ್ಧ ಎಂಬ ಎರಡು ಜನರ ಮತ್ತು ಮರುಳಸಿದ್ಧನಷ್ಟೇ ಮುಖ್ಯವಾದ ಅನೇಕ ಜಂತೆಗಳು ಅದರಲ್ಲಿರುವಾಗ ಮರುಳಸಿದ್ಧನ ಹೆಸರನ್ನೇ ಮುಖ್ಯ ಮಾಡಲು ಬರುವುದೂ ಇಲ್ಲ ಎಂದು ಅಭಿಪ್ರಾಯಪಟ್ಟಿದ್ದೀರಿ ಈ ಬಗ್ಗೆ ನಿಮ್ಮ ಅಭಿಪ್ರಾಯವಾಗಲಿ ನಮ್ಮ ಅಭಿಪ್ರಾಯವಾಗಲಿ ಸ್ವಲ್ಪವೂ ಸಂಬಂಧಪಡುವುದಿಲ್ಲ. ಕವಿಯು ಮೂಲ ಕಾವ್ಯಕ್ಕೆ ಯಾವ ಶೀರ್ಷಿಕೆಯನ್ನಿಟ್ಟಿರುವನೋ ಅದೇ ಶೀರ್ಷಿಕೆಯೇ ಪ್ರಧಾನವಾಗುತ್ತದೆ. ಆದರೆ ಜನತೆಗೆ ಬೋಧೆಯಾಗುವುದಕ್ಕಾಗಿ ಪ್ರಕಟನಾ ಪತ್ರಿಕೆಯಲ್ಲಿ "ಮರುಳಸಿದ್ಧ"ನ ಹೆಸರನ್ನು ಎತ್ತಿಕೊಳ್ಳಲಾಗಿತ್ತು.

ಇನ್ನು ನೀವು "ಅಂಕ ಏನೇ ಹೇಳಲಿ ಇತಿಹಾಸದ ಸತ್ಯತೆಯ ಒರೆಗಲ್ಲಿಗೆ ಇಡಲ್ಪಡಬೇಕಷ್ಟೆ?" ಎಂದು ಸೂಚಿಸಿದ್ದೀರಿ. ಇದು ಅತ್ಯಂತ ಪ್ರಶಂಶನೀಯ.. ನಮ್ಮ ಅಭಿಪ್ರಾಯವೂ ಹಾಗಿರುವುದರಿಂದಲೇ ಶ್ರೀ ಅ. ನ. ಕೃ ಅವರ ಮರುಳಸಿದ್ಧ ಕಾವ್ಯವನ್ನು ಇತಿಹಾಸದ ಒರೆಗಲ್ಲಿಗೆ ತಿಕ್ಕಿ ನೋಡಿದ್ದೇವೆ. ಈಗಲೂ ನೋಡಿಸುತ್ತಿದ್ದೇವೆ. ಈಗ ನಮ್ಮ ಅಂಕವನ್ನೂ ಮರುಳಸಿದ್ಧ ಕಾವ್ಯವನ್ನೂ ಮರುಳಾರಾಧ್ಯ ವಿಜಯವನ್ನೂ ನಿಷ್ಪಕ್ಷಪಾತಿ ಐತಿಹಾಸಿಕರ ಇತಿಹಾಸದ ಒರೆಗಲ್ಲಿಗೆ ಹಚ್ಚಿ ನೋಡಲು ಕೊಟ್ಟಿದ್ದೇವೆ.

ನೀವೂ ಆ ಕಾರ್ಯವನ್ನು ಸಹೃದಯತೆಯಿಂದ ಮಾಡಿದರೆ ಮಾ ಡಿ ಸಿ ದ ರೆ ನಮಗೆ ಅಪಾರವಾದ ಸಂತೋಷವಾಗುತ್ತದೆ.

"ಮೂಲ ಮರುಳಸಿದ್ಧ ಮಾದಿಗನೇ?" ಎಂಬ ಇನ್ನೊಂದೇ ಪ್ರಶ್ನೆ ಸದ್ಯಃ ವೀರಶೈವ ಜಗತ್ತಿನ ಮುಂದೆ ಜಟಿಲವಾಗಿ ನಿಂತಿದ್ದಿತೆಂಬ ಅಭಿಪ್ರಾಯ ನಮ್ಮದಾಗಿತ್ತು. ಆದರೆ ನೀವು ಈ ಬಗ್ಗೆ "ನಿಮ್ಮ ಮುಖಕ್ಕೆ ನೇರವಾಗಿ ಕನ್ನಡ ವೀರಶೈವ ಜಗತ್ತನ್ನು ಎಳೆದುಕೊಂಡಿರುವುದು ಉಚಿತವಾಗಲಾರದೆಂದು ತಿಳಿಸಿದ್ದೀರಿ. ಇಲ್ಲಿ ಈ ಸಂದೇಹ ವೀರಶೈವರಿಗಷ್ಟೇ ಅಲ್ಲ ಇತರ ಮತದವರಿಗೂ ಸಂಬಂಧಪಟ್ಟಿದು ಎಂದು ನಿಮ್ಮ ಅಭಿಪ್ರಾಯವೋ? ಅಥವಾ ಕೆಲವು ವೀರಶೈವರಿಗೆ ಎಂಬ ಅಭಿಪ್ರಾಯವೋ? ತಿಳಿಯಲಿಲ್ಲ. ಕೆಲವು ವೀರಶೈವರಿಗೆ ಮಾತ್ರ ನಿಂತ ಪ್ರಶ್ನೆಯೆಂದರೆ ಇತರ ವೀರಶೈವರು ಮೂಲ ಮರುಳಸಿದ್ಧರನ್ನು ಮಾದಿಗನೆಂದು ನಿರ್ಣಯಿಸಿಕೊಂಡಿದ್ದರೇ ಹೇಗೆ? ನಿರ್ಣಯಿಸಿಕೊಂಡಿದ್ದರೆ ಮರುಳಸಿದ್ಧ ಕಾವ್ಯವು ಹೊರಟಮೇಲೆ ಎಂದು! ಯಾವ ಸಾರ್ವಜನಿಕ ಸಭೆಯಲ್ಲಿ? ಹಾಗೆ ನಿರ್ಣಯವಾಯಿತು? ಹಾಗೆ ನಿರ್ಣಯವಾಗಿಲ್ಲವೆಂದರೆ ಈ ಪ್ರಶ್ನೆ ಎಲ್ಲ ವೀರಶೈವರಿಗೂ ಸಂಬಂಧಿಸುವದಿಲ್ಲವೇ ಹೇಗೆ? ಆದ್ದರಿಂದ ನಾವು ಹಾಗೆ ಬರೆದಿರುವುದು ಯುಕ್ತವೇ ಆಗಿದೆ. ಇದಕ್ಕೆ ವ್ಯತಿರಿಕ್ತವಾಗಿ ನಿಮ್ಮ ಅಭಿಪ್ರಾಯವಾಗಿದ್ದರೆ ನಮ್ಮ ಅಂಕದ ಮೂಲ ಮರುಳಸಿದ್ಧನು ನಿಮ್ಮ ಇತಿಹಾಸದ ಒರೆಗಲ್ಲಿಗೆ ಹೇಗೆ ಹತ್ತುವನು? ನೀವೇ ವಿಚಾರಿಸಿರಿ. ನಾವು ಪ್ರಯತ್ನಪಟ್ಟು ಆ ಮಹಾತ್ಮನ ಬಗ್ಗೆ ಸಂಗ್ರಹಿಸಿದ್ದನ್ನೆಲ್ಲ ಅಂಕದಲ್ಲಿಟ್ಟಿದ್ದೇವೆ ಮತ್ತು ಕಾವ್ಯವನ್ನೂ ಪ್ರಕಟಿಸುತ್ತೇವೆ. ನೀವು ಅದನ್ನು ಒಳ್ಳೆಯದನ್ನಾಗಿ ಗ್ರಹಿಸಲಿ ಕೆಟ್ಟದನ್ನಾಗಿಯಾದರೂ ಗ್ರಹಿಸಲಿ ಎರಡೂ ಅಷ್ಟೇ? ನಮಗೆ ಸಿಕ್ಕ ಸಾಹಿತ್ಯವನ್ನು ಪ್ರಪಂಚದ ಮುಂದೆ ಇಟ್ಟಿದ್ದೇವೆ ನಿಮ್ಮ ಅಭಿಪ್ರಾಯವನ್ನು ನಾವಾಗಲಿ ನಮ್ಮ ಅಭಿಪ್ರಾಯವನ್ನು ನೀವಾಗಲಿ ಒಪ್ಪಲೇಬೇಕೆಂಬ ನಿರ್ಬಂಧವಿಲ್ಲ. ಕೊನೆಗೆ ಸತ್ಯವು ಸತ್ಯವಾಗಿಯೇ ಉಳಿಯುವುದೆಂಬ ಭರವಸೆ ಮಾತ್ರ ನಮಗಿದೆ. ಅಂಕದ ಬಗ್ಗೆ ಇದಕ್ಕೂ ಹೆಚ್ಚಾಗಿ ಏನನ್ನೂ ತಮಗೆ ಬರೆಯಬಯಸುವುದಿಲ್ಲ. ವಿಶಾಲಮತಿಗಳಾಗಿ ವಿವೇಚಿಸಿರಿ.

ಇನ್ನು ೧೪ ವಿಗ್ರಹಗಳ ವಿಚಾರವಾಗಿಯೂ ಸಂದೀಶ ಸಿದ್ಧ ಸಂಜೇಶರ ವಿಚಾರವಾಗಿಯೂ ಈ ಹಿಂದಿನ ಪತ್ರಗಳಲ್ಲಿ ತಿಳಿದ ಮಟ್ಟಿಗೂ ಬರೆಯಲಾಗಿದೆ. ಅಂಕದ 117 ನೇ ಪುಟದಲ್ಲಿ ಸಿದ್ಧನಂಜೇಶನ ಗುರುರಾಜ ಚಾರಿತ್ರ್ಯದ ಕಾಲವು ಕರ್ನಾಟಕ ಕವಿ ಚರಿತೆಕಾರರ ಅಭಿಪ್ರಾಯ ದಂತೆ ಎಂದು ಸ್ಪಷ್ಟಪಡಿಸಲಾಗಿದೆ ಆದರೆ ಗುರುರಾಜ ಚರಿತ್ರೆ ಅವ ಲೋಕನದಿಂದ ಹಾಗೆ ಬರೆದಿಲ್ಲ ಆದ್ದರಿಂದ ಸಿದ್ಧನಂಜೇಶನು ಒಬ್ಬನೇ ಇದ್ದಿರಬೇಕೆಂಬ ಭಾವನೆಯಿಂದ ಆ ಸಿದ್ಧನಂಜೇಶ ಕವಿಯ ಶಿಷ್ಯ, ಸಂದೀಶ ಎಂದು ಬರೆಯಲಾಗಿದೆ. ಗುರುರಾಜ ಚರಿತ್ರೆಯನ್ನು ಸಂಗ್ರಹಿಸಿ ಅವಲೋಕಿಸಿದ ನಂತರ ಸಿದ್ಧನಂಜೇಶರು ವಿಭಿನ್ನ ವ್ಯಕ್ತಿ ಗಳೆಂಬುದು ನಿರ್ಣಯವಾದಾಗ "ಈ ಸಿದ್ಧ ನಂಜೇಶ" ಕವಿಯ ಎಂಬಲ್ಲಿ ಮೊದಲಿನ "ಈ" ಎಂಬ ಅಕ್ಷರವನ್ನು ತೆಗೆದು ಹಾಕಲಾಗುತ್ತದೆ.

ಮರುಳಾರಾಧ್ಯ ಕಾವ್ಯದಲ್ಲಿ ಹೇಳಲ್ಪಟ್ಟಿರುವ ಕಡೆಯ ಗುರುಗಳ ಕಾಲ ಮಾನ ಅಂದಾಜು 15 ನೇ ಶತಮಾನದ ಕೊನೆಯವರೆಗೂ ಇರುವದರಿಂದ ಈ ಕಾವ್ಯವನ್ನು ಬರೆದ ನಂದೀಶನು 16 ನೇ ಶತಮಾನದವನೆಂದು ನೇರಿಯೇ ಕಾಣುತ್ತಿದೆ. ಚನ್ನವೀರಾಂಬೆಗೆ ಪತಿಯಾಗಿ ನಂದೀಶನಿಗೆ ಗುರುವಾಗಿ ಇದ್ದ ಸಿದ್ಧನಂಜೇಶನು ಇವನಕಾಲದವನೇ ಆಗುತ್ತಾನೆ. ಈ ಸಿದ್ಧನಂಜೇಶನಿಗೂ ಮೊದಲು ಇನ್ನೊಬ್ಬ ಹೂಲಿಯ ಗುರುಮಠಕ್ಕೆ ಒಡೆಯನಾದ ಸಿದ್ಧನಂಜೇಶ್ವರನು ಇದ್ದಿರಬೇಕೆಂದು ತಿಳಿದುಕೊಳ್ಳಲು ಈ ಕಾವ್ಯದಲ್ಲಿ ಪದ್ಯಗಳಿವೆ. ನೀವು 5 10-49 ರ ಪತ್ರದಲ್ಲಿ ಕಾಣಿಸಿದ್ದಂತೆ ನಂದೀಶ ಕವಿಯು ಕ್ರಿ. ಶ. 1081 ರ ಸಮಯದವನೆಂದು ನಾವು ಅಂಕದಲ್ಲಿ ಎಲ್ಲಿಯೂ ಕಾಣಿಸಿಲ್ಲ. ಇದು ನಿಮ್ಮ ಸ್ವಂತ ಕಲ್ಪನೆ ಯಂದು ಕಾಣುತ್ತದೆ. ನಾವು ಸರಳತನದಿಂದ ಸಿಕ್ಕ ಆಧಾರಗಳನ್ನು ಜಗತ್ತಿನ ಮುಂದಿಟ್ಟಿರುವಾಗ ನೀವು ಹೀಗೇಕೆ ಕೆಳಗೆ ಮೇಲೆ ಮಾಡಿ ಕೇಳುತ್ತಿರು ವಿರೋ ಅರ್ಥವಾಗುವುದಿಲ್ಲ, ಕಾರಣ ಅಂಕದಲ್ಲಿಯ ಮೂಲ ವಿಷಯದತ್ತ ದೃಷ್ಟಿ ಹಾಕಿ ಮೂಲ ಮರುಳಸಿದ್ಧರು ಮಾದಿಗರೇ ಇದ್ದರೆಂದು ನಿರ್ಣಯಿಸುವ

ಶಕ್ತಿ ಇದ್ದರೆ ಹಾಗೂ ಮಾಡಿರಿ. ಇಲ್ಲವಾದರೆ ಮಾದಿಗ ಮರುಳಸಿದ್ಧನೊಬ್ಬ ಶರಣ ಬೇರೆ ಇದ್ದನೆಂದಾದರೂ ಗ್ರಹಿಸಿರಿ ಇದುವೆ ಮುಖ್ಯ ಅಂಶ.

ನಿಮ್ಮವ,

*M. V. Matad*, EDITOR.

## ಉತ್ತರ.

ಶ್ರೀ ಶ್ರೀಗಳವರೇ,

ತಮ್ಮ 4621 ನೇ ಪತ್ರದಲ್ಲಿ ತಾವಿತ್ತಿರುವ ಸಂಕ್ಷೇಪ ಸಮಾಧಾನವು ತೃಪ್ತಿಕರವಾಗಿಲ್ಲ ನನ್ನ ನೂರಾರು ಪ್ರಶ್ನೆಗಳಲ್ಲಿ ಪ್ರತಿಯೊಂದಕ್ಕೂ ಪ್ರತ್ಯೇಕ ಉತ್ತರದ ಅವಶ್ಯಕತೆಯು ಇದ್ದಾಗ್ಯೂ ಸಹ ತಾವು ಇದನ್ನು ಗಮನಿಸದಿರುವುದು ವಿಷಾದಕರವಾಗಿದೆ.

ಸಿಂದೋಗಿ-ಉಜ್ಜಯಿನಿಗಳಲ್ಲಿ ಒಂದೇ ಕಟ್ಟಡದಲ್ಲಿ ಮರುಳಸಿದ್ಧ ದೇವಾಲಯವೂ ಮತ್ತು ಸಮಾಧಿಗಳು ಇವೆಯೆಂದು ಬರೆದಿರುತ್ತೀರಲ್ಲದೆ ಸಿಂದೋಗಿ ದೇವಸ್ಥಾನದ ಮುಂದಿರುವ ವೇದಿಕೆಯನ್ನು ಸಮಾಧಿಯೆಂದು ಕಲ್ಪಿಸಿಕೊಂಡಿರುತ್ತೀರಿ. ಮತ್ತು ಉಜ್ಜಯಿನಿಯಲ್ಲಿ ಮಾದರಗೇರಿಯಲ್ಲಿರುವ ಕಟ್ಟಡದಲ್ಲಿ ಹರಳಯ್ಯನ ಸಮಾಧಿ ಇರಬೇಕೇ ವಿನಾ ಮರುಳಪ್ಪನದಲ್ಲ. ಆದರೆ ತಾವು ತಮ್ಮ ಪತ್ರದಲ್ಲಿ ಮರುಳಪ್ಪನ ಸಮಾಧಿ ಎಂದು ಉಲ್ಲೇಖಿಸಿರುತ್ತೀರಿ ಅಲ್ಲಿ ಮರುಳಸಿದ್ಧಲಿಂಗ ಮತ್ತು ಸಮಾಧಿಗಳ ಈ ಎರಡರ ಕುರುಹುಗಳಿಲ್ಲ ಕಾವ್ಯ ಒಂದು ವಿಧವಾಗಿ ಹೇಳಿ ರೂಢಿ ಒಂದು ವಿಧವಾಗಿದ್ದರೆ ಇತಿಹಾಸಜ್ಞರು ಅಂತಹ ಕಾವ್ಯವನ್ನು ಪ್ರಾಮಾಣಿಕವೆಂದು ಭಾವಿಸಲಾರರು. ಉಜ್ಜಯಿನಿ ಮಾದಿಗ ಮರುಳಪ್ಪನ ಸಮಾಧಿ ಚಿತ್ರವನ್ನು ಮುಂದಾದರೂ ತಾವು ಪ್ರಕಟಿಸಿದ್ದಲ್ಲಿ ಹಾಸ್ಯಕ್ಕೆ ಗುರಿಯಾಗುವಿರಿ. ಹರಳಯ್ಯನನ್ನು ರೂಢಿಗೆ ವಿರೋಧವಾಗದಿರುವುದಕ್ಕಾಗಿ ಮರುಳಪ್ಪನೆಂದು ಬರೆದಿರುವುದು ಸಮಂಜಸವಾಗಿಲ್ಲ. ಏಕೆಂದರೆ ಐತಿಹಾಸಿಕ ಪ್ರಾಮಾಣ್ಯವು ಹೆಚ್ಚಾಗಿ ರೂಢಿಯನ್ನೇ ಅವಲಂಬಿಸಿರುತ್ತದೆ. ಕಾಶಿ ವೀರಭದ್ರಸ್ವಾಮಿಗಳವರು ಬರೆದಿರುವುದು ಪಾರುಶ

ಪರಂಪರೆಯ ಮರುಳಸಿದ್ಧರ ವಿಷಯಕ್ಕೆ ಸಂಬಂಧಿಸುದೆಂದು ಹೇಳಿರುತ್ತೀರಿ. ಆದರೆ ವಿಜಯ ಕಾವ್ಯ ಹೇಳುವಂತೆ ಕಲಿಯುಗದಲ್ಲಿ ಉಜ್ಜಯಿನಿ ಪೀಠಕ್ಕೆ ಮಾರುಕನ ಸಂಬಂಧವೇ ಇಲ್ಲ. ಈ ಕಾವ್ಯ ಹೇಳುತ್ತಿರುವಂತೆ ಈ ಮರ. ಸಿದ್ಧನು ಮರುಳಾರಾಧ್ಯ ಪರಂಪರೆಯವನೆಂಬುದನ್ನು ತಾವು ಗಮನಿಸಬೇಕು. ಮರುಳಸಿದ್ಧ ಕಾವ್ಯದಲ್ಲಿ ಬಂದಿರುವ ಕಾಳಿಕಾ ಉಜ್ಜಯಿನೀ ಶಬ್ದವು ಮಾಳವ ಉಜ್ಜಯಿನಿಗೆ ಸಂಬಂಧಿಸಿದುದಲ್ಲ. ಮಾಂಬೆಯನ್ನು ಗೆದ್ದ ಸ್ಥಳಕ್ಕೆ ಕಾಳಿಕಾ ಉಜ್ಜಯಿನಿಯೆಂದು ಹೆಸರಿಟ್ಟನೆಂದು ಅಲ್ಲಿ ಉಲ್ಲೇಖಿಸಿದೆ. ಅಲ್ಲಿ ಸ್ಪಷ್ಟವಾಗಿ ಶರನದಿ ಎಂದರೆ ಪಂಚ ಗಂಗಾನದಿ ಎಂದು ಕೊಲ್ಲಾಪುರದ ಸಾಮಿಪ್ಯವನ್ನು ಸೂಚಿಸಿರುತ್ತಾನೆ. ದೇವಸ್ಥಾನದ ಪಶ್ಚಿಮ ಬಾಗಿಲಿನಲ್ಲಿರುವ ವಿಗ್ರಹವು ಕ್ಷೇತ್ರಪಾಲನೆಂದು ರೂಢಿಯನ್ನು ಪಡೆದಿದ್ದಲ್ಲಿ ಅದರ ಮೇಲೆ ಹಲಗೆಯನ್ನು ನೇತುಹಾಕಿ ಆ ಹೆಸರನ್ನು ಬರೆಯುವ ಅವಶ್ಯಕತೆ ಇರಲಿಲ್ಲ. ಇಷ್ಟಕ್ಕೂ ಕ್ಷೇತ್ರಪಾಲನೆಂಬ ಹೆಸರು ರೂಢಿಯಲ್ಲಿರದೆ ಕಗ್ಗಲ್ಲಗೌಡನೆಂಬ ಹೆಸರು ರೂಢಿ ಯಲ್ಲಿದೆ. ಈಚೆಗೆ ಮಠದವರು ಇದನ್ನು ಮರೆಮಾಜಲು ಕ್ಷೇತ್ರಪಾಲನೆಂಬ ಹೆಸರಿನ ಹಲಗೆಯನ್ನು ನೇತುಹಾಕಿದ್ದಾರೆ. ಮತ್ತು ರೂಢಿಗೆ ವಿರುದ್ಧವಾಗಿ ರುವ ಸೋಮೇಶ್ವರನೆಂಬ ನಾಮಧೇಯವು ನಂಬತಕ್ಕದ್ದಲ್ಲ. ಹಾಗೂ ಆ ವಿಗ್ರಹದಲ್ಲಿ ರಾಜ ಚಿನ್ಹೆಗಳೊಂದೂ ಇಲ್ಲ ಬಸವಾದಿ ಶಿವಶರಣರ ವಚನಗಳಲ್ಲಿ ಆಚಾರ್ಯರು ಲಿಂಗೋದ್ಭವರೆಂದು ಎಲ್ಲಿಯೂ ಹೇಳಿಲ್ಲ. ಪ್ರಹ್ಲಾದ, ಮಾರ್ಕಂಡೇಯರ ದೃಷ್ಟಾಂತವು ಲಿಂಗೋದ್ಭವ ಪ್ರಸಂಗಕ್ಕೆ ಸರಿಹೊಂದುವು ದಿಲ್ಲ. ಭಕ್ತಿಮಾರ್ಗಕ್ಕೂ, ಇತಿಹಾಸ ಮಾರ್ಗಕ್ಕೂ ಸಾಮರಸ್ಯವನ್ನು ಕಲ್ಪಿಸುವುದು ಸಮಂಜಸವಲ್ಲ ಗುರುರಾಜ ಚಾರಿತ್ರವನ್ನು ಅವಲೋಕಿಸದೆ ನಿರ್ಣಯಾತ್ಮಕವಾಗಿ ಅಭಿಪ್ರಾಯಗಳನ್ನು ಸೂಚಿಸುವುದು ಅನುಚಿತ ವಾದುದು. ಸಿದ್ಧನಂಜೇಶನ ವಿಚಾರವಾಗಿ ತಮ್ಮ ಯಾವ ಪತ್ರದಲ್ಲೂ ವಿವರಣೆ ಇಲ್ಲ. ಆದರೆ ಶ್ರೀ ಎಂ. ವಿ. ಮಠರ ಪತ್ರದಲ್ಲಿ ಈ ಬಗ್ಗೆ ಉಲ್ಲೇಖಿ ಸಲಾಗಿದೆ. ಇದರಿಂದ ಎಂ. ವಿ. ಮಠರ ಹೆಸರಿನಲ್ಲಿ ತಾವೇ ಪತ್ರವನ್ನು ಬರೆ ದಿರುತ್ತೀರೆಂದು ಭಾವಿಸಬೇಕಾಗಿದೆ. ಸೋದರರು ಎಂದು ಚತುರ್ಥರಿಗೆ ಹೆಸರು ಬಂದಿತೆಂದು ಹೇಳುವ ಪ್ರಸಂಗವು ಸಮಂಜಸವಾಗಿಲ್ಲವೆಂದು ನನ್ನ ಅಭಿಪ್ರಾಯ ಇಂದು ಸಾದರು ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವ

ವೀರಶೈವ ಸಂಗಡಕ್ಕೆ ಸೋದರರು ಎಂಬ ಹೆಸರಿದ್ದಿತೆಂದು ಯಾವ ಆಧಾರವೂ ಇಲ್ಲ. ಈ ರೀತಿ ಇಲ್ಲದ ಪ್ರಸಂಗವನ್ನು ಕಲ್ಪಿಸಿರುವ ಕಾವ್ಯವು ನಿಜವಾಗಿಯೂ ಕಾಲ್ಪನಿಕವಾದುದು. ತಾವು ಶೋಧಿಸದೆ ಈ ರೀತಿ ನಿರ್ಣಯಾತ್ಮಕ ಅಭಿಪ್ರಾಯಗಳನ್ನು ಜನತೆಯ ಮೇಲೆ ಹೊರಿಸಲೆತ್ನಿಸಿರುವುದು ಅನುಚಿತ ಹಾಗೂ ಖಂಡನೀಯ. ನನಗೆ ವಿಜಯ ಕಾವ್ಯದ ಬಗ್ಗೆ ಸಂದೇಹ ಬಂದಿರುವುದನ್ನು ಮುರುಳಸಿದ್ಧ ಕಾವ್ಯದ ಬಗ್ಗೆ ಕೆಲವರಿಗೆ ಬಂದಿರುವ ಸಂದೇಹದೊಂದಿಗೆ ಹೋಲಿಸಿರುವುದು ಯೋಗ್ಯವಲ್ಲ. ಮತ್ತು ಪ್ರಸಂಗಿಕವೂ ಅಲ್ಲ. ನನ್ನ ನೂರಾರು ಪ್ರಶ್ನೆಗಳಿಗೆ ಉತ್ತರವು ವಿಜಯ ಕಾವ್ಯವನ್ನು ನೋಡುವುದರಿಂದ ದೊರೆಯಲಾರದು. ಏಕೆಂದರೆ ಆಮೂಲಾಗ್ರವಾಗಿ ಆ ಕಾವ್ಯವನ್ನು ಓದಿರುವ ತಾವು ನನ್ನ ಆ ಪ್ರಶ್ನೆಗಳಿಗೆ ಉತ್ತರವೀಯದಿರುವಾಗ ಆ ಕಾವ್ಯದಲ್ಲಿ ತಮಗೆ ದೊರೆಯದ ಉತ್ತರಗಳು ನನಗೆ ದೊರೆಯುತ್ತದೆಂದು ನಾನು ಭಾವಿಸುವುದು ಸರಿಯಾಗಲಾರದು. ಮುರುಳಸಿದ್ಧ ಕಾವ್ಯವು ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿಯಲ್ಲಿ ಇರುವುದರಿಂದ ತಾವು ಅದನ್ನು ಸರ್ಕಾರದ ಮೂಲಕವೇ ಪಡೆಯುವುದು. ತಮ್ಮ ಯಾವ ಪತ್ರಗಳಲ್ಲೂ ನನ್ನ ಎಲ್ಲಾ ಪ್ರಶ್ನೆಗಳಿಗೂ ಉತ್ತರಗಳಿಲ್ಲದಿರುವಾಗ ನನ್ನ ಸಂದೇಹವು ನಿವಾರಣೆಯಾಗಲವಕಾಶವೆಲ್ಲಿದೆ? ತಾವು ವೀರಶೈವ ಒಳಪಂಗಡಗಳ ಏಕೀಕರಣಕ್ಕೆ ಮತ್ತು ಒಡಕುಗಳ ನಿವಾರಣೆಗೆ ಸದಾಶಯವುಳ್ಳವರೆಂಬುದನ್ನು ಕಾರ್ಯತಃ ತೋರಿಸುವುದು ಒಳ್ಳೆಯದು.

ನಾನು ಎಂ. ವಿ. ಮಠರಿಗೂ ಮತ್ತು ತಮಗೂ ಬರೆದ ಪತ್ರಗಳೆರಡಕ್ಕೆ ಎಂ. ವಿ. ಮಠರೊಬ್ಬರೇ ಉತ್ತರವಿತ್ತಿರುತ್ತಾರೆ. ಶ್ರೀ ಎಂ. ವಿ. ಮಠರು ನನಗಾಗಿ ಬರೆದಿರುವ ಪತ್ರಕ್ಕೆ ಉತ್ತರವೀಯುವುದಾಗಿ ಹೇಳುತ್ತಾ ತಮ್ಮ ಪತ್ರಕ್ಕೂ ಸಹ ಉತ್ತರವಿತ್ತಿರುತ್ತಾರೆ. ಈ ಪತ್ರದಲ್ಲಿರುವ ನಾನು, ನಮಗೆ, ನಮ್ಮ ಈ ಮುಂತಾದ ಪದ ಪ್ರಯೋಗಗಳು ಪತ್ರ ಲೇಖಕರ ಬಗ್ಗೆ ಸಂದೇಹವನ್ನುಂಟು ಮಾಡಿವೆ. ಈಗಾಗಲೇ ವಿಮರ್ಶೆಯು ಅಚ್ಚಿನಲ್ಲಿರುವುದರಿಂದ ಈ ಪತ್ರವನ್ನು ಸದ್ಯಕ್ಕೆ ಪ್ರಕಟಿಸಲು ಸಾಧ್ಯವಿಲ್ಲವಾಗಿದೆ. ಮುಂದೆ ಬರುವ ತಮ್ಮ ಉತ್ತರಗಳೊಂದಿಗೆ ಸಾಧ್ಯವಾದರೆ ಪ್ರಕಟಿಸುವೆನು. ಅನುವಾದ

ವೆಂದರೆ ಶಬ್ದಶಃ ಅರ್ಥವನ್ನು ವಿವರಿಸುವುದೆಂದರ್ಥ. ಕಾವ್ಯದಲ್ಲಿ ಲಿಂಗದ ಹೆಸರು ಬಂದಿಲ್ಲದಿದ್ದರೂ ಕಾವ್ಯ ಹೇಳುತ್ತಿರುವಂತೆ ಆ ಲಿಂಗವನ್ನು ಮರುಳಾರಾಧ್ಯ ಲಿಂಗವೆಂದೇ ಕರೆಯುವುದು ಉಚಿತವೇ ವಿನಾ ಅದಕ್ಕೆ ವಿರುದ್ಧವಾಗಿ ಕರೆಯುವುದು ಚಿತವಲ್ಲ. ಭೂಗೋಳ ಗ್ರಂಥಕ್ಕೂ ಭೂಪಟಕ್ಕೂ ಸಾಮಂಜಸ್ಯವಿರುವಂತೆ ಕಾವ್ಯಕ್ಕೂ ರೂಢಿಗೂ ಸಾಮಂಜಸ್ಯವಿರದಿದ್ದಲ್ಲಿ ಅಂತಹ ಕಾವ್ಯವು ಪ್ರಾಮಾ ಣಿಕವಾಗಲಾರದು. ಗದ್ಯ ಭಾಗವು ಸಾರಾಂಶರೂಪವಾಗಿರದೆ ಅನುವಾದ ರೂಪವಾಗಿದೆ ಎಂದು ಹೇಳಿರುವಾಗ ಮೂಲ ಕಾವ್ಯವೇ ಶಬ್ದಶಃ ಅರ್ಥವನ್ನು ಪಡೆದಿದೆ ಎಂದು ಭಾವಿಸಲೇ ಬೇಕಾಗುತ್ತದೆ. ತಾವು ಉತ್ತರ ಕೊಟ್ಟರೂ ಸಹ ನಾನು ಸಂದೇಹ ತಾಳುತ್ತಿದ್ದೇನೆಂದು ಆರೋಪಿಸಿರುವುದು ಸಮಂಜಸ ವಲ್ಲ. ಏಕೆಂದರೆ ನನ್ನ ನೂರಾರು ಪ್ರಶ್ನೆಗಳಿಗೆ ತಮ್ಮಿಂದ ಈವರೆಗೂ ಉತ್ತರ ಗಳು ಬಂದಿಲ್ಲ. ಹೀಗಿರುವಾಗ ನನ್ನ ಸಂದೇಹವು ಸಕಾರಣವಾಗಿದೆ. ತಾವು ಸಿದ್ಧ ನಂಜೇಶನ ಬಗ್ಗೆ ಸಂಶೋಧನೆಯನ್ನು ಮಾಡದೆ ನಿರ್ಣಯಾತ್ಮಕ ಅಭಿ ಪ್ರಾಯವನ್ನು ಕೊಟ್ಟಿರುವುದು ಜನತೆಯನ್ನು ತಪ್ಪುದಾರಿಗೆ ಎಳೆಯಲವಕಾಶ ವಾಗಿದೆಯಲ್ಲದೆ ತಮ್ಮ ಹೊಣೆಗೇಡಿತನವನ್ನೂ ಮತ್ತು ತಮ್ಮ ಲೇಖನದ ಬಗ್ಗೆ ಅಪ್ರಾಮಾಣಿಕತೆಯನ್ನು ಸೂಚಿಸುತ್ತದೆ ಎಂದು ಹೇಳಲು ಅವಕಾಶ ವಾಗಿದೆ. ತಾವು ಎರಡು ಜನ ಸಿದ್ಧನಂಜೇಶರೊಂದಿಗೆ ಮೂರನೆಯ ಸಿದ್ಧ ನಂಜೇಶನನ್ನು ಕಲ್ಪಿಸಿರುವುದು ಅನವಸ್ಥಾ ಪ್ರಸಂಗಕ್ಕೆ ಕಾರಣವಾಗಿದೆ. ತಮ್ಮ ಈ ಅನೇಕ ವ್ಯಕ್ತಿ ಕಲ್ಪನಾಪಾಂಡಿತ್ಯವೇ ಅನೇಕ ಮರುಳಸಿದ್ಧರನ್ನು ಕಲ್ಪಿಸಿರುವ ಕಾವ್ಯವನ್ನು ಸೃಷ್ಟಿಸಿದೆಯೆಂದು ಭಾವಿಸಲವಕಾಶವಾಗಿದೆ. ತಾವು ಈ ಬಗ್ಗೆ ಕೃತಹಸ್ತರೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಈ ಮುಂಚೆ ಎರಡೇ ಜನ ಸಿದ್ಧನಂಜರಿದ್ದುದರಿಂದ ಅವರ ಶಿಷ್ಯನಾದ ನಂದೀಶನು ಅವರ ಕಾಲ ಅಂದರೆ ಕ್ರಿ. ಶ. ೧೦೮೧ ರಲ್ಲಿದ್ದವನೆಂದು ನಾನು ಹೇಳಿರುವುದು ಅನುಚಿತವೆಂದಿಗೂ ಆಗಲಾರದು. ನಾನು ಕೆಳಗೆ ಮೇಲೆ ಮಾಡಿಕೊಡುತ್ತಿರುವೆನೆಂದು ತಾವು ಹೊರಿಸಿರುವ ಆರೋಪವು ಉಚಿತವಾದುದಲ್ಲ. ತಾವೇ ಮಾಡಿರುವ ಕೆಳಗೆ ಮೇಲಿನ ಪ್ರಸಂಗಗಳನ್ನು ತಮ್ಮೆದುರಿನಲ್ಲಿಟ್ಟಿದ್ದೇನೆ. ಅಷ್ಟೆ. ನನ್ನ ಸಂದೇಹದಲ್ಲಿ ಸರಳತನವಿಲ್ಲವೆಂದು ಆರೋಪಿಸುವ ತಾವು ತಮ್ಮ ಉತ್ತರಗಳಲ್ಲಿ ಸರಳತನವಿದೆಯೇ ಎಂಬುದನ್ನು

ಆತ್ಮ ನಿರೀಕ್ಷಣೆಯಿಂದ ಸ್ಥಿರಪಡಿಸಿಕೊಳ್ಳುವುದೊಳ್ಳೆಯದು. ಮರುಳಸಿದ್ಧ ಕಾವ್ಯಕ್ಕೆ ಯಾವ ವಿಧದಲ್ಲೂ ಸಂಬಂಧಪಡದ ನನ್ನಿಂದ ತಾವು ಆ ಬಗ್ಗೆ ಉತ್ತರಬಯಸಿರುವುದು ಎಷ್ಟರಮಟ್ಟಿನ ಔಚಿತ್ಯವೆಂಬುದನ್ನು ತಾವೇ ಯೋಚಿಸಬೇಕು. ನಾನು ಅಂಕದ ಸಂದಿಗೊಂದಿಯನ್ನೆಲ್ಲಾ ಶೋಧಿಸಿರುವುದು ಮತ್ತು ತಾವು ಬರೆದಿರುವಂತೆ ಒಪ್ಪಿಕೊಳ್ಳದಿರುವುದು ತಮಗೆ ಅಸಂತೋಷವನ್ನುಂಟು ಮಾಡಿದಂತೆ ತೋರುತ್ತದೆ. ಆದರೆ ತಾವು ಭಾವಿಸಿರುವಂತೆ ಆ ರೀತಿ ತಾವು ಬರೆದದ್ದನ್ನೆಲ್ಲಾ ನಂಬುವ ಜಗತ್ತು ಈಗಿಲ್ಲವೆಂಬುದನ್ನು ತಾವು ಎಷ್ಟು ಜಾಗ್ರತೆ ತಿಳಿದುಕೊಳುತ್ತೀರೋ ಅಷ್ಟು ಮೇಲಾಗುತ್ತದೆ. ಕವಿಯು ಏನೇ ಬರೆಯಲಿ ಅದೆಲ್ಲವನ್ನೂ ನಂಬಬೇಕೆಂಬ ತಮ್ಮ ಆಗ್ರಹವು ತಮ್ಮ ಅಸಹಾಯಕತೆಯನ್ನು ಸೂಚಿಸುತ್ತದೆ ಈ ಕಾವ್ಯದ ಗುರಿಯು ಅನೇಕ ಮರುಳಸಿದ್ಧರನ್ನು ಸಾಧಿಸುವುದೇ ಆಗಿರುವಾಗ ಪ್ರಕಟಣೆಯಲ್ಲಿ ಅಭಿನ್ನಾರ್ಥಕವಾಗುವಂತೆ ಮರುಳಸಿದ್ಧ ಪದವನ್ನೂ ಪ್ರಯೋಗಿಸುವುದು ಸಮಂಜಸವಾಗಲಾರದು. ನೀವು ಯಾವ ಸಭಾ ನಿರ್ಣಯದ ಮೇಲೆ ಇಡೀ ವೀರಶೈವರ ಪ್ರಾತಿನಿಧ್ಯವನ್ನು ವಹಿಸಿ ಸಂದೇಹವನ್ನು ವೀರಶೈವ ಪ್ರಪಂಚದ ಮೇಲೆ ಆರೋಪಿಸಿದಿರೆಂಬುದನ್ನು ತಿಳಿಯುವುದೇ ನನ್ನ ಉದ್ದೇಶವಾಗಿದೆ. ಮರುಳಸಿದ್ಧನು ಮಾದಿಗನಲ್ಲವೆಂಬುದನ್ನು ನಿರ್ಣಯಿಸಲು ಯಾವ ಅಧಿಕೃತ ವೀರಶೈವ ಸಭೆಯೂ ನಡೆಯದಿರುವಾಗ ತಾವು ಹೀಗೆ ಹೇಳಿರುವುದು ತಮ್ಮ ಮುಖಕ್ಕೆ ನೇರವಾದುದಲ್ಲದೆ ಮತ್ತೇನು ? ಯಾವುದು ಸತ್ಯವೆಂಬುದನ್ನು ತಾವು ನಿರೀಕ್ಷಿಸುವಂತೆ ನಾನಾದರೂ ನಿರೀಕ್ಷಿಸಲೇ ಬೇಕಾಗಿದೆ. ಇದಕ್ಕೆ ಕಾಲವೇ ಉತ್ತರವನ್ನೀಯುತ್ತದೆ. ಮರುಳಸಿದ್ಧನಾರೆಂಬುದನ್ನು ನಾನಾಗಲೀ, ತಾವಾಗಲಿ ಮತ್ತಾವ ಸಭೆಯಾಗಲೀ ನಿರ್ಣಯಿಸಲು ಅಧಿಕಾರ ಹೊಂದಿಲ್ಲ. ಇತಿಹಾಸಜ್ಞರು ತಮ್ಮ ಅಂಕವನ್ನು ನನ್ನ ವಿಮರ್ಶೆಯನ್ನೂ ತಾವು ಮುಂದೆ ತಿದ್ದಿ ಮುದ್ರಿಸುವ ಕಾವ್ಯವನ್ನೂ ವಿಮರ್ಶಿಸಿ ನಿರ್ಣಯಿಸುವರು. ತಾವು ದಯವಿಟ್ಟು ಕಾವ್ಯವನ್ನು ತಿದ್ದಲು ಒಪ್ಪಿರುವುದು ಸತ್ಯ ನಿರ್ಣಯಕ್ಕೆ ಹೆಚ್ಚಿನ ಸಹಾಯವನ್ನುಂಟು ಮಾಡುತ್ತದೆಂದು ಸೂಚಿಸಿ ವಿರಮಿಸುತ್ತೇನೆ.

ತಮ್ಮ ಈವರೆಗಿನ ಪತ್ರ ವ್ಯವಹಾರದಿಂದ ತಾವು ಉತ್ತರವೀಯಲು ಅಸಹಾಯರಾಗಿರುವಿರೆಂದು ಸ್ಪಷ್ಟವಾಗಿದೆ ಇದು ನಿಜವಲ್ಲವಾದಲ್ಲಿ ತಾವು

ತಾವು ಹೇಳಿರುವಂತೆ ಸರಳಮಾರ್ಗಕ್ಕೆ ಬಂದು ನನ್ನ ಎಲ್ಲಾ ಪ್ರಶ್ನೆಗಳಿಗೂ ಪ್ರತ್ಯೇಕ ಪ್ರತ್ಯೇಕ ಉತ್ತರಗಳನ್ನು ಕೊಡಲು ಯತ್ನಮಾಡಬೇಕೆಂದು ಮತ್ತೊಮ್ಮೆ ಸೂಚಿಸ ಬಯಸುತ್ತೇನೆ.

ಇತಿ ತಪ್ಪು,

ಪಂಡಿತ ವಿಶ್ವಕುಮಾರ, ನಿದಿಗೆ,
ಸಂಸ್ಕೃತ – ಹಿಂದೀ ಅಧ್ಯಾಪಕ,
ಶ್ರೀ ತರಳಬಾಳು ಜಗದ್ಗುರು ಪ್ರೌಢಶಾಲೆ,
P. O. ಸಿರಿಗೆರೆ.
(Via) ದಾವಣಗೆರೆ.

ದಿನಾಂಕ ೨೩-೧೦-೪೯.
ಚಿತ್ರದುರ್ಗ.

ಈವರೆಗೆ ನಾನು ಬರೆದಿರುವ ಪತ್ರಗಳನ್ನು ಮತ್ತು ಅವುಗಳಿಗೆ ಉತ್ತರಗಳನ್ನು ಪ್ರಕಟಿಸಿರುತ್ತೇನೆ.

(ಲೇಖಕ)

---



---

ಪುಟ 70 ರ ನಂತರ 71 ಹಾಕುವುದರ ಬದಲು 75 ರಿಂದ ಮುಂದುವರೆದಿದೆ.
ವಾಚಕರು ತಿದ್ದಿ ಓದಿಕೊಳ್ಳಬೇಕಾಗಿ ವಿನಂತಿ.

